# ಕಾಳಿದಾಸನ ಶಾಕುಂತಲ: ಕನ್ನಡ ಅನುವಾದಗಳ ಅಧ್ಯಯನ

(ಕನ್ನಡ ವಿಶ್ವವಿದ್ಯಾಲಯಕ್ಕೆ ಪಿಎಚ್.ಡಿ. ಪದವಿಗಾಗಿ ಸಲ್ಲಿಸಿರುವ ಮಹಾಪ್ರಬಂಧ)

ಸಂಶೋಧಕರು
ರಾಮಪ್ಪ ಜಿ.

ಮಾರ್ಗದರ್ಶಕ
ಡಾ. ಕೆ.ಪಿ. ಶಿವಾರೆಡ್ಡಿ
ಸಹ ಪ್ರಾಧ್ಯಾಪಕರು





ಭಾಷಾನಿಕಾಯ
ಭಾಷಾಂತರ ಅಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ - ೫೮೩ ೨೭೬

೨೦೧೬

# ಕಾಳಿದಾಸನ ಶಾಕುಂತಲ: ಕನ್ನಡ ಅನುವಾದಗಳ ಅಧ್ಯಯನ

(ಕನ್ನಡ ವಿಶ್ವವಿದ್ಯಾಲಯಕ್ಕೆ ಪಿಎಚ್.ಡಿ. ಪದವಿಗಾಗಿ ಸಲ್ಲಿಸಿರುವ ಮಹಾಪ್ರಬಂಧ)



ಸಂಶೋಧಕರು
**ರಾಮಪ್ಪ ಜಿ.**

ಮಾರ್ಗದರ್ಶಕ
**ಡಾ. ಕೆ.ಸಿ. ಶಿವಾರೆಡ್ಡಿ**
ಸಹ ಪ್ರಾಧ್ಯಾಪಕರು



**ಭಾಷಾನಿಕಾಯ**
**ಭಾಷಾಂತರ ಅಧ್ಯಯನ ವಿಭಾಗ**
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ ೫೮೩೨೭೬

೨೦೧೬

# ಮಾರ್ಗದರ್ಶಕರ ದೃಢೀಕರಣ ಪತ್ರ

**ಕಾಳಿದಾಸನ ಶಾಕುಂತಲ: ಕನ್ನಡ ಅನುವಾದಗಳ ಅಧ್ಯಯನ** ಎಂಬ ಶೀರ್ಷಿಕೆಯ ಮಹಾಪ್ರಬಂಧವನ್ನು ರಾಮಪ್ಪ ಜಿ. ಅವರು ನನ್ನ ಮಾರ್ಗದರ್ಶನದಲ್ಲಿ ಪಿಎಚ್.ಡಿ. ಪದವಿಗಾಗಿ ಸಿದ್ಧಪಡಿಸಿದ್ದಾರೆ. ಪ್ರಸ್ತುತ ಮಹಾಪ್ರಬಂಧವು ಈ ಮೊದಲು ಯಾವುದೇ ಪದವಿಗಾಗಿ ಸಲ್ಲಿಸಿರುವುದಿಲ್ಲವೆಂದು ದೃಢೀಕರಿಸುತ್ತೇನೆ.

ಮಾರ್ಗದರ್ಶಕರು

ದಿನಾಂಕ: 12-09-16
ಸ್ಥಳ: ವಿದ್ಯಾರಣ್ಯ

(ಡಾ. ಕೆ.ಸಿ. ಶಿವಾರೆಡ್ಡಿ)
ಸಹ ಪ್ರಾಧ್ಯಾಪಕರು
ಭಾಷಾಂತರ ಅಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ ೫೮೩ ೨೭೬

# ಪ್ರಮಾಣ ಪತ್ರ

**ಕಾಳಿದಾಸನ ಶಾಕುಂತಲ: ಕನ್ನಡ ಅನುವಾದಗಳ ಅಧ್ಯಯನ** ಎಂಬ ಶೀರ್ಷಿಕೆಯ ಮಹಾಪ್ರಬಂಧವನ್ನು **ಡಾ. ಕೆ.ಸಿ. ಶಿವಾರೆಡ್ಡಿ** ಅವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿದ್ದೇನೆ. ಕನ್ನಡ ವಿಶ್ವವಿದ್ಯಾಲಯ, ಹಂಪಿ **ಭಾಷಾಂತರ ಅಧ್ಯಯನ ವಿಭಾಗಕ್ಕೆ** ಪಿಎಚ್.ಡಿ. ಪದವಿಗಾಗಿ ಸಲ್ಲಿಸುತ್ತಿರುವ ಪ್ರಸ್ತುತ ಮಹಾಪ್ರಬಂಧವನ್ನು ಈ ಮೊದಲು ಯಾವುದೇ ಪದವಿಗಾಗಿ ಸಲ್ಲಿಸಿರುವುದಿಲ್ಲವೆಂದು ಪ್ರಮಾಣೀಕರಿಸುತ್ತೇನೆ.

ದಿನಾಂಕ: 12-09-2016

ಸ್ಥಳ: ವಿದ್ಯಾರಣ್ಯ

**(ರಾಮಪ್ಪ ಜಿ.)**

ಸಂಶೋಧನ ವಿದ್ಯಾರ್ಥಿ

ಭಾಷಾಂತರ ಅಧ್ಯಯನ ವಿಭಾಗ

ಕನ್ನಡ ವಿಶ್ವವಿದ್ಯಾಲಯ, ಹಂಪಿ

ವಿದ್ಯಾರಣ್ಯ ೫೮೩ ೨೭೬

# ಪರಿವಿಡಿ

ಅಧ್ಯಾಯ ಒಂದು

# ಅಧ್ಯಯನದ ಉದ್ದೇಶ, ಮಹತ್ವ, ವ್ಯಾಪ್ತಿ ಮತ್ತು ವಿಧಾನ

ಪೀಠಿಕೆ

ಅಧ್ಯಯನದ ಉದ್ದೇಶ

ಅಧ್ಯಯನದ ವ್ಯಾಪ್ತಿ

ಅಧ್ಯಯನದ ವೈಧಾನಿಕತೆ

ಅಧ್ಯಾಯ ಒಂದು

# ಅಧ್ಯಯನದ ಉದ್ದೇಶ, ಮಹತ್ವ, ವ್ಯಾಪ್ತಿ ಮತ್ತು ವಿಧಾನ

**ಪೀಠಿಕೆ**

ಕಾಳಿದಾಸನ ಕೃತಿಗಳು ಜಾಗತಿಕ ಮತ್ತು ಭಾರತದ ಮಟ್ಟದಲ್ಲಿ ನಿರಂತರವಾಗಿ ಭಾಷಾಂತರಕ್ಕೆ ಒಳಗಾಗುತ್ತಲೇ ಇವೆ. ಈ ಭಾಷಾಂತರ ಪ್ರಕ್ರಿಯೆ ಬಹುಮುಖಿಯಾದುದು. ಕಾಳಿದಾಸನ ಕೃತಿಗಳೆಂದರೆ ಖಂಡಕಾವ್ಯಗಳಾದ ಋತುಸಂಹಾರ, ಮೇಘದೂತ; ಮಹಾಕಾವ್ಯಗಳಾದ ರಘುವಂಶ, ಕುಮಾರ ಸಂಭವ; ನಾಟಕಗಳಾದ–ವಿಕ್ರಮೋರ್ವಶೀಯ ನಾಟಕಂ, ಮಾಳವಿಕಾಗ್ನಿ ಮಿತ್ರಂ ನಾಟಕಂ, ಅಭಿಜ್ಞಾನ ಶಾಕುಂತಲ ನಾಟಕಂ. ಈ ಎಲ್ಲಾ ಕೃತಿಗಳು ಕನ್ನಡಕ್ಕೆ ಭಾಷಾಂತರವಾಗಿವೆ. ಆದರೆ ನನ್ನ ಅಧ್ಯಯನದಲ್ಲಿ ಕನ್ನಡಕ್ಕೆ ಅನುವಾದವಾಗಿರುವ ಅಭಿಜ್ಞಾನ ಶಾಕುಂತಲ ನಾಟಕಂ ಎಂಬ ಕೃತಿಯು ಹೆಚ್ಚು ಅನುವಾದವಾಗಿರುವ ಕೃತಿಯಾಗಿದೆ. ಹೀಗೆ ಅನುವಾದವಾಗಲು ಕಾರಣಗಳೇನು? ಕಾಳಿದಾಸನ ಅಭಿಜ್ಞಾನ ಶಾಕುಂತಲ ನಾಟಕ ಇಷ್ಟು ಪ್ರಸಿದ್ಧಿ ಪಡೆಯಲು ಕಾರಣವೇನು? ಎಂಬುದನ್ನು ಗುರುತಿಸಿಕೊಳ್ಳುವುದು ಈ ಅಧ್ಯಯನದ ಒಂದು ಭಾಗವಾಗಿದೆ. ಅದರಲ್ಲಿ ಮುಖ್ಯವಾಗಿ ಕಾಳಿದಾಸನ ಶಾಕುಂತಲ ನಾಟಕದ ಅನುವಾದ ಗಣನೆಗೆ ಬಾರದಷ್ಟು ಭಾಷಾಂತರವಾಗಿವೆ ಮತ್ತು ರೂಪಾಂತರ ಹೊಂದಿವೆ. ಹಾಗೆಯೇ ಅಂತರ್‌ಸಂಜ್ಞಾ ಭಾಷಾಂತರಕ್ಕೂ ಒಳಗಾಗಿದೆ. ಈ ಭಾಷಾಂತರ ಪ್ರಕ್ರಿಯೆಗೆ ಕಾಳಿದಾಸನ ಶಾಕುಂತಲಕ್ಕೆ ಒದಗಿ ಬಂದ ಪ್ರಭಾವ, ಪ್ರೇರಣೆ, ಭಾಷಾಂತರದ ಅಗತ್ಯ ಮತ್ತು ಭಾಷಾಂತರವಾದ ಆಯಾ ಕಾಲದ ಮನೋಧರ್ಮಗಳನ್ನು ಶೋಧಿಸಿಕೊಳ್ಳುವುದು ಈ ಅಧ್ಯಯನದ ಪ್ರಮುಖ ಉದ್ದೇಶವಾಗಿದೆ.

ಕಾಳಿದಾಸನ ಅಭಿಜ್ಞಾನ ಶಾಕುಂತಲ ನಾಟಕದ ವಿಶಾಲವಾದ ವ್ಯಾಪ್ತಿಯನ್ನು ಅರಿಯುವ ಉದ್ದೇಶವಾಗಿದೆ. ವಿಶ್ವದ ಬೇರೆ ಬೇರೆ ಭಾಷಿಕ ಕವಿಗಳು ತಮ್ಮ ಸಾಹಿತ್ಯದಲ್ಲಿ ಅನುವಾದಿಸಿದಂತೆ ನಮ್ಮ ಕನ್ನಡ ಕವಿಗಳಲ್ಲಿ ಯಾರು, ಯಾವ ಕಾಲದಲ್ಲಿ ಶಾಕುಂತಲದ ಅನುವಾದ ಮಾಡಿದ್ದಾರೆ ಎಂಬುದನ್ನು ತಿಳಿಸಲಾಗಿದೆ. ವ್ಯಾಸ, ವಾಲ್ಮೀಕಿ, ಭಾಸ, ಭಟ್ಟನಾರಾಯಣ, ಬಾಣಭಟ್ಟ ಹಾಗೂ ಹತ್ತರಿಂದ ಹದಿಮೂರನೆಯ ಶತಮಾನದವರೆಗಿನ ಪಂಪ, ಪೊನ್ನ, ರನ್ನ, ಹರಿಹರ ಮುಂತಾದ ಕವಿಗಳು ಹಾಗೂ ೨೦ನೇ ಶತಮಾನದಲ್ಲಿ ಬಿ.ಎಂ.ಶ್ರೀ., ತೀ.ನಂ.ಶ್ರೀ., ಬಸವಪ್ಪಶಾಸ್ತ್ರೀ, ಎಸ್.ಜಿ. ನರಸಿಂಹಾಚಾರ್ಯ, ಬೇಂದ್ರೆ, ಕುವೆಂಪು, ಕೆ.ಎಸ್.ನರಸಿಂಹಸ್ವಾಮಿ, ಪು.ತಿ.ನ., ಕೆ.ವಿ.ಸುಬ್ಬಣ್ಣ,

ಮಾಸ್ತಿ, ಇವರ ಕೃತಿಗಳಲ್ಲಿ ಕಾಳಿದಾಸನ ಪ್ರಭಾವಗಳನ್ನು ಕಾಣಬಹುದು. ರವೀಂದ್ರನಾಥ ಟಾಗೋರ್ ಕೃತಿಗಳಲ್ಲಿಯೂ ಕಾಳಿದಾಸನ ಪ್ರಭಾವ ಪ್ರೇರಣೆಗಳನ್ನು ಕಾಣಲಾಗುತ್ತದೆ. ಕಾಳಿದಾಸನ ಕೃತಿಗಳು ಕಾಲಕಾಲಕ್ಕೆ ಅನುವಾದವಾಗಿ ಪ್ರಸಿದ್ಧಿಯನ್ನು ಪಡೆದಿದೆ. ಇಂಥ ಅಂಶಗಳನ್ನು ಆಧರಿಸಿದ ಹಲವಾರು ಉತ್ತರವನ್ನು ಹುಡುಕುವ ಕೆಲಸವನ್ನು ಈ ಅಧ್ಯಯನದಲ್ಲಿ ಮಾಡಲಾಗುವುದು. ೧೮೭೦ರಲ್ಲಿ ಚುರಮುರಿ ಶೇಷಗಿರಿರಾಯರು ಕನ್ನಡಕ್ಕೆ ಅನುವಾದಿಸಲು ಪ್ರಮುಖ ಕಾರಣ ಕಂಡುಕೊಳ್ಳುವುದು. ಅಭಿನವ ಕಾಳಿದಾಸ ಬಸವಪ್ಪಶಾಸ್ತ್ರೀ ಎಂಬ ಬಿರುದು ಪಡೆಯಲು ಈ ಅಭಿಜ್ಞಾನ ಶಾಕುಂತಲ ನಾಟಕದ ಅನುವಾದವೇ ಕಾರಣವಾಗಿದೆ. ಅಭಿಜ್ಞಾನ ಶಾಕುಂತಲ ನಾಟಕವು ಸಿನಿಮಾರಂಗದಲ್ಲಿ, ಕಥೆ, ಕಾದಂಬರಿ, ಚಿತ್ರಕಲೆ, ಶಿಲ್ಪಕಲೆ, ನಾಟಕ ಹೀಗೆ ಒಂದು ಸೃಜನಶೀಲ ಕೃತಿಯು ಹೇಗೆಲ್ಲಾ ಬದಲಾವಣೆಗೆ ಕಾರಣವಾಗಿದೆ ಹಾಗೂ ಸಮಾಜದಲ್ಲಿ ಇಂಥ ಕೃತಿಗೆ ಇರುವ ಗೌರವ ಎಂಥದ್ದು ಎಂದು ಕಂಡುಕೊಳ್ಳಬೇಕಾಗಿದೆ. ೧೯೫೫ರಲ್ಲಿ ಮಹಾಕವಿ ಕಾಳಿದಾಸ ಎಂಬ ಕಪ್ಪು ಬಿಳುಪು ಸಿನಿಮಾಕ್ಕೂ ಕವಿರತ್ನ ಕಾಳಿದಾಸ ಸಿನಿಮಾಕ್ಕೂ ಇರುವ ಸಾಮೀಪ್ಯತೆಯನ್ನು ಗುರುತಿಸುವ ಕಾರ್ಯವನ್ನು ಮಾಡಲಾಗುವುದು. ಈ ಮೇಲಿನ ಎರಡು ಸಿನಿಮಾಗಳ ಕಾಲಮಾನ ಹಾಗೂ ಸಿನಿಮಾಗಳ ಬದಲಾವಣೆ ಹಾಗೂ ಮರುಬಳಕೆಯ ಕ್ರಮ ಸೃಜನಶೀಲತೆಯನ್ನು ತಿಳಿಸುವುದಾಗಿದೆ.

**ಅಧ್ಯಯನದ ಉದ್ದೇಶ**

ಕಾಳಿದಾಸ ವಿಶ್ವಕವಿ ಎಂದು ಪ್ರಸಿದ್ಧಿ ಪಡೆದ ಕವಿ. ಬೇರೆ ಬೇರೆ ಕಾಲಮಾನಗಳಲ್ಲಿ ಮತ್ತೆ ಮತ್ತೆ ಭಾಷಾಂತರಗೊಳ್ಳುತ್ತಲೇ ಇರುವ ಕೃತಿಗಳಲ್ಲಿ ಕಾಳಿದಾಸನ ಕೃತಿಗಳು ಸೇರುತ್ತವೆ. ಅವನ ಕೃತಿಗಳಲ್ಲಿ ಶಾಕುಂತಲ ನಾಟಕದ ಕಥಾವಸ್ತುವನ್ನು ದುಡಿಸಿಕೊಂಡ ಬಗೆ ಹಾಗೂ ಅದರಿಂದ ಪ್ರಕಟವಾಗಿರುವ ದಾರ್ಶನಿಕತೆ ಮೊದಲಾದ ವಿಚಾರಗಳಿಂದಲೇ ಈ ಕೃತಿಗೆ ಪ್ರಸಿದ್ಧಿ ಪ್ರಾಪ್ತವಾದಂತೆ ಕಾಣುತ್ತದೆ. ಇಂಥ ಪ್ರಸಿದ್ಧಿಗೆ ಅನುವಾದ ಪ್ರಕ್ರಿಯೆಯು ಕಾರಣವಾಗಿದೆ. ಅಂಥ ಪ್ರಕ್ರಿಯೆಯ ಸಾಂಸ್ಕೃತಿಕ ನೆಲೆಗಳನ್ನು ಶೋಧಿಸಿಕೊಳ್ಳುವ ಈ ಉದ್ದೇಶಗಳನ್ನು ಈ ಅಧ್ಯಯನ ಒಳಗೊಂಡಿದೆ. ಅವನ್ನು ಕೆಳಗಿನಂತೆ ಗುರುತಿಸಿಕೊಳ್ಳಲಾಗಿದೆ.

೧. ಸ್ವೀಕರಿಸಿದ ಭಾಷೆಯಾದ ಕನ್ನಡದ ಅಭಿಜ್ಞಾನ ಶಾಕುಂತಲ ನಾಟಕ ಹೇಗೆಲ್ಲಾ ಬದಲಾವಣೆ, ರೂಪಾಂತರ, ಮರುಬದಲಾವಣೆಗೆ ಒಗ್ಗಿಸಿಕೊಂಡಿತು ಎಂಬ ವಿಚಾರಗಳನ್ನು ಈ ಅಧ್ಯಯನದಲ್ಲಿ ಪರಿಶೀಲಿಸಲಾಗಿದೆ.

೨. ಕಾಳಿದಾಸನ ಶಾಕುಂತಲ ಭಾಷಾಂತರ, ರೂಪಾಂತರ ಮತ್ತು ಅಂತರ್‌ಸಂಜ್ಞಾ ಭಾಷಾಂತರಗಳು ಕನ್ನಡದಲ್ಲಿ ಸೇರಿಹೋಗಿರುವ ಅನಿವಾರ್ಯತೆಯ ಒತ್ತಾಸೆಗಳನ್ನು ಇಂಥ ಅಧ್ಯಯನದಿಂದ ಕಂಡುಕೊಳ್ಳಲಾಗಿದೆ.

೩. ಕನ್ನಡ ಕವಿಗಳ ಮೇಲೆ ಕಾಳಿದಾಸನ ಪ್ರಭಾವ ಪರಿಣಾಮಗಳನ್ನು ಹುಡುಕಿ ವಿಶ್ಲೇಷಣೆಗೆ ಒಳಪಡಿಸುವುದು ಈ ಪ್ರಬುದ್ಧ ಉದ್ದೇಶಗಳಲ್ಲಿ ಒಂದಾಗಿದೆ. ಆದ್ದರಿಂದ ಅನುವಾದದ ಪ್ರಾಮುಖ್ಯತೆಯನನು ತಿಳಿಸಲಾಗಿದೆ.

೪. ಅಂತರ್‌ಸಂಜ್ಞಾ ಭಾಷಾಂತರದಲ್ಲಿ ಸಿನಿಮಾ, ನಾಟಕ, ಕಥೆ, ಚಿತ್ರಕಲೆ, ಛಂದಸ್ಸು, ಭಾಷೆ, ಇಂಥವುಗಳನ್ನು ಅಧ್ಯಯನದಲ್ಲಿ ಬರುವ ಬಗೆಯನ್ನು ವಿಶ್ಲೇಷಿಸಲಾಗಿದೆ.

೫. ನಾಟಕದಲ್ಲಿ, ಸಿನಿಮಾದಲ್ಲಿ, ಕಾವ್ಯದಲ್ಲಿ ಶಾಕುಂತಲ ನಾಟಕದ ಕಥಾವಸ್ತುವನ್ನು ಬಳಸಿಕೊಂಡ ಕ್ರಮವನ್ನು ಪ್ರಮುಖವಾಗಿ ಕಂಡುಕೊಳ್ಳುವುದಾಗಿದೆ. ಇದೊಂದು ತೌಲನಿಕ ಅಧ್ಯಯನ. ಅನುವಾದಗೊಂಡ ಕೃತಿಗಳು, ಅಂತರ್‌ಸಂಜ್ಞೆಯಿಂದ ಪ್ರಕ್ರಿಯೆಗೆ ಒಳಗಾದ ಪಠ್ಯಗಳನ್ನು ಸಂಗ್ರಹಿಸಿಕೊಂಡು ಅವುಗಳನ್ನು ವಿಶ್ಲೇಷಣೆ ಮಾಡಲಾಗಿದೆ.

೬. ಕನ್ನಡಕ್ಕೆ ಅನುವಾದವಾಗಿರುವ ಅಭಿಜ್ಞಾನ ಶಾಕುಂತಲ ನಾಟಕಗಳಲ್ಲಿ ವಿಶ್ಲೇಷಣೆ ವಿಧಾನವನ್ನು ಅನುಸರಿಸಲಾಗಿದೆ.

## ಅಧ್ಯಯನದ ವ್ಯಾಪ್ತಿ

'ಅಭಿಜ್ಞಾನ ಶಾಕುಂತಲಂ' ನಾಟಕದ ಭಾಷಾಂತರದ ಕಾರ್ಯ ಪ್ರಾರಂಭವಾದಂದಿನಿಂದ ಇಂದಿನವರೆಗೂ ನಡೆದ ಭಾಷಾಂತರ ಕೃತಿಗಳನ್ನು ಈ ಅಧ್ಯಯನದಲ್ಲಿ ತಾತ್ವಿಕ ವಿಶ್ಲೇಷಣೆಗೆ ಒಳಪಡಿಸಲಾಗಿದೆ. ಈ ನಾಟಕವು ಕನ್ನಡ ಸಾಹಿತ್ಯದಲ್ಲಿ ಇದುವರೆಗೂ ಭಾಷಾಂತರಗೊಂಡ ಕೃತಿಗಳ ವೈಶಿಷ್ಟ್ಯತೆಯನ್ನು ಗುರುತಿಸಿದೆ. ಅಂತರ್‌ಸಂಜ್ಞಾ ಭಾಷಾಂತರದಲ್ಲಿ ಬರುವ ನಾಟಕ, ಚಿತ್ರಕಲೆ, ಶಿಲ್ಪಕಲೆ, ಸಿನಿಮಾ, ಇವುಗಳನ್ನು ಆಯಾ ಕಾಲಕ್ಕೆ ತಕ್ಕಂತೆ ಬಳಸಿಕೊಂಡ ಕ್ರಮವನ್ನು ತಿಳಿಸಲಾಗಿದೆ. ಇದುವರೆಗೂ ಶಾಕುಂತಲ ನಾಟಕದ ಮೇಲೆ ಬಂದ ಆಧುನಿಕ ಬರವಣಿಗೆಗಳನ್ನು ಹಾಗೂ ಆಯ್ದ ಭಾಗಗಳನ್ನು ಬಳಸಿಕೊಳ್ಳಲಾಗಿದೆ. ಈ ಭಾಷಾಂತರದ ಅಗತ್ಯ ಮತ್ತು ಭಾಷಾಂತರವಾದ ಆಯಾ ಕಾಲದ ಮನೋಧರ್ಮಗಳನ್ನು ಶೋಧಿಸಿಕೊಳ್ಳುವುದು. ಈ ಎಲ್ಲಾ ಅಂಶಗಳನ್ನು ಅಧ್ಯಯನದ ವ್ಯಾಪ್ತಿಯಲ್ಲಿ ತೋರಿಸಲಾಗಿದೆ. ಭಾಷಾಂತರಕ್ಕೆ ಕಾರಣವಾದ ಸಾಮಾಜಿಕ ಸಾಂಸ್ಕೃತಿಕ ಪಲ್ಲಟಗಳನ್ನು ಗುರುತಿಸಿ ಭಾಷಾಂತರವಾದ ಪಠ್ಯಗಳ ನಿಯಮ ತಿಳಿಸುವುದು. ಸಂಶೋಧನೆಯ ಪ್ರಮುಖವಾದ ಭಾಗವೆಂದರೆ ಭಾಷಾಂತರವಾದ ಕೃತಿಗಳ ಅಧ್ಯಯನ, ಕನ್ನಡದಲ್ಲಿ ಅಭಿಜ್ಞಾನ ಶಾಕುಂತಲ ನಾಟಕದ ಪ್ರಭಾವ ಪ್ರೇರಣೆಯನ್ನು ವಿಶ್ಲೇಷಿಸುವುದು ಈ ಅಧ್ಯಯನದ ಉದ್ದೇಶವಾಗಿದೆ.

## ಅಧ್ಯಯನದ ವೈಧಾನಿಕತೆ

ಕನ್ನಡ ಮತ್ತು ಸಂಸ್ಕೃತ ಭಾಷೆಗಳ ಸಾಂಸ್ಕೃತಿಕ ಸಂಘರ್ಷವನ್ನು ಗುರುತಿಸಿ ಕನ್ನಡಕ್ಕೆ ಭಾಷಾಂತರವಾದ ಕೃತಿಗಳ ಅನನ್ಯತೆಯನ್ನು ತಿಳಿಸುವುದು. ಕಲೆಯಲ್ಲಿ, ಸಿನಿಮಾದಲ್ಲಿ, ನಾಟಕದಲ್ಲಿ, ಕಾವ್ಯಗಳಲ್ಲಿ, ರಂಗಗೀತೆಗಳಲ್ಲಿ, ಸಣ್ಣಕತೆಗಳಲ್ಲಿ ಅಭಿಜ್ಞಾನ ಶಾಕುಂತಲ ನಾಟಕದ ಕಥಾವಸ್ತು ಹೇಗೆಲ್ಲ ಬದಲಾಗಿರುವುದನ್ನು ಗುರುತಿಸುವ ಅಗತ್ಯವಿದೆ. ಹಾಗಾಗಿ 'ಕಾಳಿದಾಸನ ಶಾಕುಂತಲ: ಕನ್ನಡ ಅನುವಾದಗಳ ಅಧ್ಯಯನ', ಎಂಬ ವಿಷಯವನ್ನು ಕುರಿತು ಅಧ್ಯಯನ ಮಾಡುವ ಅವಶ್ಯಕತೆ ಇದೆ. ಇದಕ್ಕೆ ಕನ್ನಡ ಸಾಹಿತ್ಯದಲ್ಲಿ ಇದುವರೆಗೂ ಬಂದಿರುವ ಅನುವಾದಗಳನ್ನು ಸಂಗ್ರಹಣೆ ಮಾಡಿ ವಿಶ್ಲೇಷಣೆಯನ್ನು ಮಾಡಲಾಗಿದೆ.

# ಇದುವರೆಗೂ ನಡೆದ ಅಧ್ಯಯನಗಳ ಸಮೀಕ್ಷೆ

ಕಾಳಿದಾಸನ ಅಭಿಜ್ಞಾನ ಶಾಕುಂತಲ ನಾಟಕವು ಕನ್ನಡ ಸಾಹಿತ್ಯ ಪರಿಸರದಲ್ಲಿ ಹೇಗೆ ತನ್ನ ಸ್ಥಾನವನ್ನು ಉಳಿಸಿಕೊಂಡಿದೆ? ಕನ್ನಡ ಕವಿಗಳು ಹೇಗೆ ಈ ನಾಟಕವನ್ನು ಬಳಸಿಕೊಂಡಿದ್ದಾರೆ ಎಂಬುದನ್ನು ಅನೇಕ ಕೃತಿಗಳ ಅಧ್ಯಯನ ಮಾಡಲಾಗಿದೆ.

ಕನ್ನಡ ಸಾಹಿತ್ಯಲೋಕದಲ್ಲಿನ ಅಭಿಜ್ಞಾನ ಶಾಕುಂತಲ ನಾಟಕಗಳ ಬಗ್ಗೆ ಇದುವರೆಗೂ ನಡೆದ ಅಧ್ಯಯನಗಳ ಬಗ್ಗೆ ಗಮನಿಸುವುದಾದರೆ ಕನ್ನಡ ಸಾಹಿತ್ಯ ಪರಿಸರದ ಶಾಕುಂತಲದ ಪಾತ್ರ ಹಿರಿದಾಗಿದೆ ಎಂದು ಹೇಳಬಹುದು. ಕಾರಣ ಅನೇಕ ಬಗೆಯಲ್ಲಿ ಕಾಳಿದಾಸನ ಅಭಿಜ್ಞಾನ ಶಾಕುಂತಲದ ಕಥಾವಸ್ತು ಇಂದಿಗೂ ಬದಲಾಗಿರುವುದನ್ನು ನೋಡಬಹುದು. ಕಾಳಿದಾಸನ ಶಾಕುಂತಲದ ನಾಟಕದ ಪ್ರಭಾವದಿಂದ ಅನೇಕ ಕೃತಿಗಳು ಹುಟ್ಟಿಕೊಂಡಿವೆ. ಅನೇಕ ವಿದ್ವಾಂಸರು ಶಕುಂತಲೆಯ ಬಗ್ಗೆ ಟೀಕೆ ಟಿಪ್ಪಣಿ, ಪ್ರಶಂಸೆ ಮಾಡಿದ್ದಾರೆ. ಆದ್ದರಿಂದ ಸಂಶೋಧನಾ ಬರವಣಿಗೆಯು ಉಪಯುಕ್ತವಾಗಿದೆ.

'ಕನ್ನಡದಲ್ಲಿ ಅನುವಾದ ಸಾಹಿತ್ಯ'(೧೯೨೦ರವರೆಗೆ) ಡಾ.ಜವರೇಗೌಡ ಅವರ ಮಾರ್ಗದರ್ಶನದಲ್ಲಿ ಎ.ಆರ್.ಮಂಜುನಾಥ ಅವರು ಕನ್ನಡ ವಿಶ್ವವಿದ್ಯಾಲಯದ ಭಾಷಾನಿಕಾಯಕ್ಕೆ ಒಪ್ಪಿಸಿದ ಪ್ರೌಢಪ್ರಬಂಧವಾಗಿದೆ. ಈ ಕೃತಿಯಲ್ಲಿ ಅಥವಾ ಸಂಶೋಧನಾ ಬರವಣಿಗೆಯಲ್ಲಿ ಕೆಲವು ಪ್ರಾತಿನಿಧಿಕ ಅನುವಾದ ಕೃತಿಗಳ ಅಧ್ಯಯನದಲ್ಲಿ ಬಸವಪ್ಪಶಾಸ್ತ್ರಿಗಳ 'ಕರ್ನಾಟಕ ಶಾಕುಂತಲ ನಾಟಕ'ವನ್ನು ಕುರಿತು ವಿವರಿಸಿದ್ದಾರೆ. ಈ ಸಂಶೋಧನೆಯಿಂದ ಮುಖ್ಯವಾಗಿ ಭಾಷಾಂತರದ ಕರ್ನಾಟಕ ಶಾಕುಂತಲ ನಾಟಕದ ಅನುವಾದವನ್ನು ಕುರಿತು ಚರ್ಚೆ ಮಾಡಿದ್ದಾರೆ.

೧೯೨೭ರಲ್ಲಿ ರವೀಂದ್ರನಾಥ ಠಾಕೂರರು ಬರೆದ ಪ್ರಾಚೀನ ಸಾಹಿತ್ಯದ ಕೃತಿಯಲ್ಲಿ ಶಾಕುಂತಲ ಎಂಬ ವಿಮರ್ಶಾ ಲೇಖನವು ಅಧ್ಯಯನಕ್ಕೆ ಪೂರಕವಾದ ಮಾಹಿತಿಯನ್ನು ಒದಗಿಸುತ್ತದೆ. ಈ ಕೃತಿಯಲ್ಲಿ ದುಷ್ಯಂತನು ಮಾಡಿದ ಪಾಪವನ್ನು ಬಾಹ್ಯಕಾರಣಗಳಿಂದ ನಿರರ್ಥಕವಾಗುವಂತೆ ಮಾಡದೆ ಹೃದಯದೊಳಗಿನಿಂದಲೇ ತನ್ನ ಬೆಂಕಿಯಿಂದ ತಾನೆ ಸುಟ್ಟು ಹೋಗುವಂತೆ ಮಾಡಿದ್ದಾನೆ. ಅಮಂಗಳವೆಲ್ಲಕ್ಕೂ ಸಂಪೂರ್ಣವಾಗಿ ಅಗ್ನಿ ಸತ್ಕಾರವಾದ ಮೇಲೆಯೇ ನಾಟಕವು ಮುಗಿಯುವುದು. ಅಪರಾಧದ ಪೆಟ್ಟು ಬೀಳದೆ ಹೋದರೆ ಶುಭವು ತನ್ನ ಶಾಶ್ವತವಾದ

ಕಾಂತಿಯನ್ನೂ ಶಕ್ತಿಯನ್ನೂ ಪಡೆಯಲಾರದು. ವಿಶ್ವ ಪ್ರಕೃತಿಯು ಹೊರಗಡೆ ಶಾಂತವಾಗಿಯೇ ಇರುತ್ತದೆ. ಆದರೆ ಒಳಗಡೆ ಅದರ ಪ್ರಚಂಡ ಶಕ್ತಿಯು ಯಾವಾಗಲೂ ಕೆಲಸ ಮಾಡುತ್ತಿರುತ್ತದೆ. ಅಭಿಜ್ಞಾನ ಶಾಕುಂತಲ ನಾಟಕದಲ್ಲಿ ಅದರ ಪ್ರತಿಬಿಂಬವನ್ನು ತಮ್ಮ ಲೇಖನದಲ್ಲಿ ತಿಳಿಯಪಡಿಸಿದ್ದಾರೆ.

'ಕಾಳಿದಾಸ' ಎಂಬ ಕೃತಿಯನ್ನು ಎಂ.ಲಕ್ಷ್ಮೀನರಸಿಂಹಯ್ಯ ಅವರು ೧೯೫೫ರಲ್ಲಿ ಬರೆದಿದ್ದಾರೆ. ಇದನ್ನು ಸಂಪಾದಿಸಿದವರು ಕೆ.ವಿ.ಪುಟ್ಟಪ್ಪ. ಇದರಲ್ಲಿ ಶಾಕುಂತಲ ನಾಟಕದ ಬಗ್ಗೆ ಅನೇಕ ಮಾಹಿತಿಗಳನ್ನು ನೀಡಿದ್ದಾರೆ. ಸಂಸ್ಕೃತ ಸಾಹಿತ್ಯದಲ್ಲಿ ಮಹೋನ್ನತಿವೆತ್ತು ವಿಶೇಷಕಾಂತಿಯಿಂದ ಕಂಗೊಳಿಸುವ ಕವಿಗಳು ವಾಲ್ಮೀಕಿ, ವ್ಯಾಸ, ಕಾಳಿದಾಸ ಪೂರ್ಣವು ಸ್ವರವು ಆದ ಭಾರತೀಯ ಸಂಸ್ಕೃತಿಯನ್ನು ತಿಳಿಸಿದ್ದಾರೆ. ಈ ಕೃತಿಯಲ್ಲಿ ಮುನ್ನುಡಿ, ಅನುಬಂಧ, ಪೀಠಿಕೆ, ಜೀವನಚರಿತ್ರೆ, ಕಾಳಿದಾಸನ ಜನ್ಮಭೂಮಿ, ಕಾಳಿದಾಸನ ಕಾಲ, ಮಾಳವಿಕಾಗ್ನಿಮಿತ್ರ, ವಿಕ್ರಮೋರ್ಶೀಯ, ಕುಮಾರ ಸಂಭವ, ಮೇಘಸಂದೇಶ, ಶಾಕುಂತಲ, ರಘುವಂಶ, ಉಪಸಂಹಾರ ಇಂತಹ ಮಾಹಿತಿಗಳು ಈ ಕೃತಿಯಲ್ಲಿ ದೊರೆಯುತ್ತವೆ.

೧೯೫೮ರಲ್ಲಿ ಕೆ.ಟಿ.ಪಾಂಡುರಂಗಿಯವರು ಬರೆದಿರುವ ಅಭಿಜ್ಞಾನ ಶಾಕುಂತಲ ಕೃತಿಯಲ್ಲಿ ನಾಟಕದ ಬಗ್ಗೆ ಅನೇಕ ರೀತಿಯಲ್ಲಿ ಒಳ ಸುಳಿವುಗಳು ದೊರೆಯುತ್ತವೆ. ಆದ್ದರಿಂದ ಈ ಕೃತಿಯು ಅಧ್ಯಯನಕ್ಕೆ ಸೂಕ್ತವಾದ ಆಕರವಾಗಿದೆ. ಬಿ.ಎ., ಬಿ.ಎಸ್ಸಿ, ಬಿ.ಕಾಂ. ತರಗತಿಯ ವಿದ್ಯಾರ್ಥಿಗಳಿಗೆ ಪಠ್ಯಪುಸ್ತಕವಾಗಿ ನಿಯಮಿಸಲಾಗಿತ್ತು. ಸಂಸ್ಕೃತಗಳಲ್ಲದೆ ಕನ್ನಡ ವಿದ್ಯಾರ್ಥಿಗಳಿಗೂ ಕನ್ನಡ ಶಾಕುಂತಲವು ಪಠ್ಯ ಪುಸ್ತಕವಾಗಿ ಆಗಾಗ ನಿಯೋಜಿಸ್ಪಡುವುದರಿಂದ ತಿಳಿಗನ್ನಡದಲ್ಲಿ ಮೂಲಶಾಕುಂತಲದ ಸರಳಾನುವಾದವು ವಿದ್ಯಾರ್ಥಿಗಳಿಗೆ ಸಹಾಯಕವಾಗುತ್ತವೆ. ಹೀಗೆ ವಿದ್ಯಾರ್ಥಿಗಳಿಗೆ ಹಾಗೂ ಸಾಮಾನ್ಯ ವಾಚಕರಿಗೆ ಉಪಯೋಗವಾಗುವಂತೆ ಈ ಕೃತಿಯನ್ನು ರಚಿಸಿದ್ದಾರೆ. ಈ ಕೃತಿಯಲ್ಲಿ ಸಂಸ್ಕೃತದ ಶಾಕುಂತಲ ನಾಟಕದ ಭಾಗ ಹಾಘೂ ಕನ್ನಡದ ಶಾಕುಂತಲ ನಾಟಕದ ಭಾಗವನ್ನು ಕೊಡಲಾಗಿದೆ. ಅಭಿಜ್ಞಾನ ಶಾಕುಂತಲ, ಭಾಷಾಂತರ, ಟಿಪ್ಪಣೆಗಳು, ವಿಶ್ಲೇಷಣೆ, ಛಂದಸ್ಸಿನ ಪರಿಚಯ ಮುಂತಾದ ಭಾಗಗಳು ಈ ಕೃತಿಯಲ್ಲಿ ಕಂಡುಬರುತ್ತವೆ.

೧೯೬೯ರಲ್ಲಿ ಎಸ್.ವಿ.ರಂಗಣ್ಣನವರ 'ಶಾಕುಂತಲ ನಾಟಕದ ವಿಮರ್ಶೆ' ಎಂಬ ಕೃತಿಯಲ್ಲಿ ಶಾಕುಂತಲ ನಾಟಕದ ಬಗ್ಗೆ ವಿವರಣೆ ದೊರೆಯುತ್ತದೆ. ಕಾಳಿದಾಸನ ಶಾಕುಂತಲ ನಾಟಕದ ವಿಮರ್ಶೆಯನ್ನು ಮುಖ್ಯವಾಗಿ ಬರೆದಿದ್ದಾರೆ. ಶಾಕುಂತಲದ ಹೆಸರು, ಆಧಾರ, ಯತಿವೃತ್ತದ ವಿನ್ಯಾಸ, ಪಿಸ್ತೃತಿಯ ಪಿನ್ಯಾಸ, ಶಾಪದ ವಿಚಾರ, ಅಂಕಗಳ ವಿವರಣೆ, ನಾಟಕೀಯ ನೈಪುಣ್ಯತೆ, ಪಾತ್ರಚಿತ್ರಣ, ಶಾಕುಂತಲ ಒಂದು ಟ್ರಾಜಿಡಿ, ಜೀವನ ದರ್ಶನ ಶೈಲಿ, ಶಾಕುಂತಲದ ಪ್ರಶಸ್ತಿ, ಟಿಪ್ಪಣಿಗಳು ಮುಂತಾದವು ಈ ಕೃತಿಯ ಪರಿವಿಡಿಯಲ್ಲಿ ಕಂಡುಬರುತ್ತವೆ.

೧೯೭೪ರಲ್ಲಿ ದ.ರಾ.ಬೇಂದ್ರೆಯವರು ಬರೆದಿರುವ 'ಸಾಹಿತ್ಯದ ವಿರಾಟ್ ಸ್ವರೂಪ' ಎಂಬ ಕೃತಿಯಲ್ಲಿ ಶಾಕುಂತಲದಲ್ಲಿ ಇಂದ್ರನ ಪಾತ್ರ, ಶಾಕುಂತಲದಲ್ಲಿ ವಾತ್ಸಲ್ಯದ ಅಧಿಷ್ಠಾನ ಹೀಗೆ ಲೇಖನಗಳು ಬಂದಿವೆ. ಇವು ಸಹ ಅಧ್ಯಯನಕ್ಕೆ ಪೂರಕವಾಗಿವೆ.

೧೯೮೧ರಲ್ಲಿ ಜಿ.ಎಸ್.ಗಾಯಿ ಬರೆದ 'ಕಾಳಿದಾಸ' ಕೃತಿಯಲ್ಲಿ ಅನೇಕ ಬಗೆಯ ಮಾಹಿತಿ ಮತ್ತು ಅಭಿಜ್ಞಾನ ಶಾಕುಂತಲ ನಾಟಕದ ವಿವರಣೆ ದೊರೆಯುತ್ತದೆ. ಪ್ರಸಿದ್ಧ ಮರಾಠಿ ವಿದ್ವಾಂಸರಾದ ವಾ.ವಿ.ಮಿರಾಶಿ ಅವರ ಬಹು ಅಮೂಲ್ಯ ಕೃತಿಗಳಲ್ಲಿ ಇದು ಒಂದಾಗಿದೆ. ಇದನ್ನು ಕನ್ನಡಕ್ಕೆ ಜಿ.ಎಸ್.ಗಾಯಿಯವರು ಅನುವಾದಿಸಿದ್ದಾರೆ. ಈ ಕೃತಿಯಲ್ಲಿ ಕಾಳಿದಾಸನ ಕಾಲನಿರ್ಣಯ, ವೈಶಿಷ್ಟ್ಯ, ಕಾಳಿದಾಸನ ಕೃತಿಗಳು ಶಾಕುಂತಲ ನಾಟಕದ ಬಗ್ಗೆ ಸಂಕ್ಷಿಪ್ತ ಮಾಹಿತಿಯು ದೊರೆಯುತ್ತದೆ. ಇದೊಂದು ವಿಮರ್ಶಾತ್ಮಕ ಬರವಣಿಗೆಯಾಗಿದೆ.

೧೯೯೦ರಲ್ಲಿ ಜಿ.ಎಸ್.ಶಿವರುದ್ರಪ್ಪನವರು ಸಂಪಾದಿಸಿರುವ 'ಕನ್ನಡ ಸಾಹಿತ್ಯದಲ್ಲಿ ಕಾಳಿದಾಸ' ಎಂಬ ಕೃತಿಯಲ್ಲಿ ಆರು ಲೇಖನಗಳನ್ನು ಗಮನಿಸಬಹುದು. ಈ ಪುಸ್ತಕದಲ್ಲಿ ಕಾಳಿದಾಸನ ಕಾವ್ಯ, ನಾಟಕಗಳ ಸೊಗಸಿಗೆ ಹಾಗೂ ಪ್ರತಿಭೆಗೆ ಮಾರುಹೋದ ಕನ್ನಡದ ಮಹತ್ವದ ಕವಿಗಳು ಕಾಳಿದಾಸನನ್ನು ಗ್ರಹಿಸಿಕೊಂಡಿರುವ ಬಗೆಯನ್ನು ನೋಡಬಹುದು. ಕಾಳಿದಾಸನನ್ನು ಯಥಾಶಕ್ತಿಯಾಗಿ ಕನ್ನಡದ ಅನುವಾದ, ರೂಪಾಂತರಗಳ ಮೂಲಕ ತರಬೇಕೆನ್ನುವ ಪ್ರಯತ್ನ ನಡೆದಿದೆ. ಆಧುನಿಕ ಸಾಹಿತ್ಯದ ಸಂದರ್ಭದಲ್ಲಿಯೆ ಸ್ವಾರಸ್ಯವಾದ ಸಂಗತಿಯಾಗಿದೆ. ಕನ್ನಡದ ಕವಿಗಳಿಗೆ ಕಾಳಿದಾಸ ಇನ್ನೂ ಶ್ರೇಷ್ಠವಾಗಿಯೆ ಉಳಿದಿದ್ದಾನೆ ಎಂಬ ಅಂಶವು ಈ ಕೃತಿಯಿಂದ ದೊರೆಯುತ್ತದೆ.

ಕಾಳಿದಾಸ: ಪ್ರಾಚೀನ ಕನ್ನಡ ಸಾಹಿತ್ಯದಲ್ಲಿ–ಕೆ.ಕೃಷ್ಣಮೂರ್ತಿ, ಕನ್ನಡದಲ್ಲಿ ಕಾಳಿದಾಸ: ನಾಟಕ–ಅ.ರಾ.ಮಿತ್ರ, ಕನ್ನಡದಲ್ಲಿ ಕಾಳಿದಾಸ ಕಾವ್ಯ:–ಸಿ.ಪಿ.ಕೃಷ್ಣಕುಮಾರ್, ಕಾಳಿದಾಸನನ್ನು ಕುರಿತ ಕನ್ನಡ ವಿಮರ್ಶೆ:–ಓ.ಎಲ್.ನಾಗಭೂಷಣ ಸ್ವಾಮಿ, ಕನ್ನಡದಲ್ಲಿ ಸೃಜನಾತ್ಮಕ ಪ್ರೇರಣೆ–ಎಚ್.ಎಸ್.ವೆಂಕಟೇಶಮೂರ್ತಿ, ಕೃತಿ ಮತ್ತು ಲೇಖನ ಸೂಚಿ. ಈ ಲೇಖನಗಳಲ್ಲಿ ಕಾಳಿದಾಸನು ರಚಿಸಿರುವ ಎಲ್ಲ ಕೃತಿಗಳ ಬಗ್ಗೆ ವಿವರಿಸಿದ್ದಾರೆ ಹಾಗೂ ಕಾಳಿದಾಸನ ಸೃಜನಶೀಲತೆಯನ್ನು ಈ ಲೇಖನಗಳಲ್ಲಿ ಪ್ರಮುಖವಾಗಿ ಗಮನಿಸಬಹುದು.

ಕವಿಕುಲಗುರು 'ಕಾಲಿದಾಸ' ಶ್ರೀರಂಗರು ಈ ಕೃತಿಯ ಮುನ್ನುಡಿಯಲ್ಲಿ ಹೇಳಿರುವಂತೆ ಶಕುಂತಲೆಯನ್ನು ಕುರಿತು ಕಣ್ವರು ಹೇಳುವಂತೆ ತತ್ರಾಪಿ ಚಾ ಶಾಕುಂತಲ ಎಂಬ ಲೇಖನದಲ್ಲಿ ಶಕುಂತಲೆಯ ಬಗ್ಗೆ ವಿವರಿಸಿದ್ದಾರೆ. ಕಾಳಿದಾಸನ ಕಾಲ, ವ್ಯಕ್ತಿವ್ಯ, ವಿದ್ವತ್ತು ಮುಂತಾದ ವಿಷಯಗಳನ್ನು ಕುರಿತು ವಿವರಿಸಿದ್ದಾರೆ.

ತೌಲನಿಕ ಸಾಹಿತ್ಯ ಸುಸಾನ್‌ಬಾಸ್ನೆಟ್ ಅವರ ಈ ಕೃತಿಯನ್ನು ಡಾ. ಕೆ.ಸಿ.ಶಿವಾರೆಡ್ಡಿ ಅವರು ಸಂಪಾದಿಸಿದ್ದಾರೆ. ಈ ಕೃತಿಯಲ್ಲಿ ಸೈದ್ಧಾಂತಿಕ ಬೆಳವಣಿಗೆ ಹಾಗೂ ನಿರ್ಧಿಷ್ಟ ಅಧ್ಯಯನಗಳನ್ನು ಪರಿಶೀಲಿಸುವ ಲೇಖನಗಳು ಇದರಲ್ಲಿವೆ. ಈ ಅಧ್ಯಯನದ ಶಿಸ್ತು ಜಾಗತಿಕವಾಗಿ ಪಡೆದುಕೊಳ್ಳುತ್ತಿರುವ

ವಿಭಿನ್ನ ಆಯಾಮಗಳನ್ನು ಈ ಕೃತಿಯಲ್ಲಿ ಚರ್ಚಿಸಿದ್ದಾರೆ. ರಾಮಲಿಂಗಪ್ಪ ಟಿ ಬೇಗೂರ್, ಆರ್.ವಿಜಯರಾಘವನ್, ಎಲ್.ಜಿ.ಮೀರಾ, ಆರ್.ಚಲಪತಿ, ಡಿ.ಡೊಮಿನಿಕ್ ಇವರೆಲ್ಲರು ಸೇರಿ ಈಕೃತಿಯನ್ನು ಕನ್ನಡದ ಓದುಗರಿಗೆ ತೌಲಾನಿಕ ಸಾಹಿತ್ಯದ ಬಗ್ಗೆ ಈ ಕೃತಿಯಲ್ಲಿ ತಿಳಿಸಿದ್ದಾರೆ.

ವಸಾತುಶಾಹಿ ಮತ್ತು ಭಾಷಾಂತರ. ವಿ.ಬಿ.ತಾರಕೇಶ್ವರ್ ವಸಾತುಶಾಹಿ ಸಂದರ್ಭದಲ್ಲಿ ಕನ್ನಡದಲ್ಲಿ ನಡೆದ ಭಾಷಾಂತರ ಪ್ರಕ್ರಿಯೆಗಳನ್ನು ಚರ್ಚಿಸುತ್ತದೆ. ಭಾಷಾಂತರ ಕೃತಿಗಳ ಆಯ್ಕೆಯಿಂದ ತೊಡಗಿ ಭಾಷಾಂತರ ವಿಧಾನ ಮತ್ತು ಆ ಕೃತಿಗಳು ಪ್ರತಿಪಾಧಿಸುವ ಮೌಲ್ಯಗಳು ಇಂತಹ ಅನೇಕ ಮಾಹಿತಿಯನ್ನು ಈ ಕೃತಿ ವಿವರಿಸುತ್ತದೆ. ಭಾಷಾಂತರ ಎನ್ನುವುದು ಎರಡು ಭಾಷೆಗಳ ನಡುವಿನ ಸಂಬಂಧ ಮಾತ್ರವಲ್ಲ ಎರಡು ಸಂಸ್ಕೃತಿಗಳ ಮುಖಾಮುಖಿಯು ಹೌದು. ಒಂದು ಕೃತಿಯು ಇನ್ನೊಂದರಿಂದ ಪ್ರಭಾವಿತವಾಗುವುದು ಇಂಥ ಭಾಷಾಂತರ ಪ್ರಕ್ರಿಯೆಗಳ ಮಾಹಿತಿಯು ಈ ಕೃತಿಯಲ್ಲಿ ಕಂಡುಬರುತ್ತದೆ.

ಭಾಷಾಂತರದ ವಿಭಿನ್ನ ನೆಲೆಗಳು. ಡಾ. ಎ.ಮೋಹನ್ ಕುಂಟಾರ್, ಈ ಕೃತಿಯಲ್ಲಿ ಅನೇಕ ಲೇಖನಗಳು ಕಂಡುಬರುತ್ತವೆ. ಮಾಧ್ಯಮಗಳಲ್ಲಿ ಮುದ್ರಣ ಭಾಷಾಂತರದ ಸ್ವರೂಪಕ್ಕೂ ಹಾಗೂ ಶ್ರವ್ಯ ದೃಶ್ಯ ಮಾಧ್ಯಮಗಳ ಭಾಷಾಂತರದ ಸ್ಪಷ್ಟವಾದ ಮಾಹಿತಿ ದೊರೆಯುತ್ತದೆ. ದೃಶ್ಯ ಮಾಧ್ಯಮವಾದರೆ ಭಾಷೆಗಳ ಮೂಲಕ ಹೇಳಬಹುದಾದ ಅನೇಕ ಸಂಗತಿಗಳು ದೃಶ್ಯದ ಮೂಲಕ ಲಭ್ಯವಾಗುತ್ತದೆ ಎಂಬ ಅಂಶ ಈ ಕೃತಿಯಲ್ಲಿ ಕಂಡುಬರುತ್ತದೆ.

ಭಾಷಾಂತರ ಪ್ರವೇಶಿಕೆ. ಇತಿಹಾಸ, ಸಿದ್ಧಾಂತ ಮತ್ತು ಪರಿಭಾಷೆಗಳು ಡಾ. ಎಂ.ಉಷಾ ಅವರು ಬರೆದ ಈಕೃತಿಯಿಂದ ತಿಳಿದು ಬರುವುದೇನೆಂದರೆ ಭಾಷಾಂತರ ಅಧ್ಯಯನದ ಪ್ರಭಾವ ತಡವಾಗಿ ಬೆಳಕಿಗೆ ಬಂದರೂ, ಅದರ ವ್ಯಾಪ್ತಿ ವಿಶಾಲವಾಗಿದೆ. ೭೦-೮೦ತ್ತರ ದಶಕದಲ್ಲಿಯೆ ಭಾಷಾಂತರ ಕುರಿತು ಭಾಷಾ ಶಾಸ್ತ್ರೀಯ ಚಿಂತನೆಗಳು ಕನ್ನಡದಲ್ಲಿ ಕಾಣಿಸಿದವಾದರು ಅವು ಭಾಷಾಂತರವೊಂದರ ಕೊನೆಯ ಸಂಗತಿಯಾಗಿಯೆ ಪರಿಭಾವಿಸಿದ ನೆಲೆಯಿಂದಲೆ ಬಂದವುಗಳಾಗಿವೆ ಹೀಗೆ ಭಾಷಾಂತರದ ಸಿದ್ಧಾಂತಗಳನ್ನು ಭಾಷಾಂತರದ ಪರಿಭಾಷೆಗಳ ಬಗ್ಗೆ ಮಾಹಿತಿಯು ಈ ಕೃತಿಯಲ್ಲಿ ದೊರೆಯುತ್ತದೆ.

ಕನ್ನಡ, ಮರಾಠಿ-ಸಾಂಸ್ಕೃತಿಕ ಬಾಂದವ್ಯ ಡಾ. ವಿಠಲ್‌ರವ್ ಟಿ.ಗಾಯಕ್‌ವಾಡ್ ಇವರ ಕೃತಿಯಲ್ಲಿ ಐತಿಹಾಸಿಕ ಮತ್ತು ಸಾಂಸ್ಕೃತಿಕ ಅಂಶಗಳು ಕರ್ನಾಟಕದಲ್ಲಿ ಮರಾಠ ಸಂಸ್ಥಾನಗಳು, ದೈವಗಳು ಭಾಷಾಂತರದ ಸಾಂಸ್ಕೃತಿಕ ಸಂಬಂಧದ ಸಾಮಾನ್ಯ ಬಾಂಧವ್ಯದ ನೆಲೆಗಳನ್ನು ಈ ಕೃತಿಯು ವಿವರಿಸುತ್ತದೆ.

ಪ್ರಥಮ ಕನ್ನಡ ನಾಟಕ ಶಾಕುಂತಲ ಚುರಮುರಿ ಶೇಷಗಿರಿರಾಯರು ಬರೆದಿರುವುದನ್ನು ಡಾ.ಭೀಮರಾವ್ ಚಿಟಗುಪ್ಪಿಯವರು ನಾಟಕದ ಸಮಗ್ರ ಸಮೀಕ್ಷೆಯನ್ನು ಬರೆದಿದ್ದಾರೆ. ಈ

ಕೃತಿಯನ್ನು ಡಾ.ಶ್ರೀನಿವಾಸ ಹಾವನೂರು ಅವರು ಈ ಕೃತಿಯ ಸಂಪಾದನೆಯನ್ನು ೧೯೬೮ರಲ್ಲಿ ಮಾಡಿದ್ದಾರೆ. ಈ ಕೃತಿಯು ಆರನೇ ಮುದ್ರಣವನ್ನು ೨೦೦೭ರಲ್ಲಿ ಕಂಡಿದೆ. ಈ ಕೃತಿಯಲ್ಲಿ ಅಭಿಜ್ಞಾನ ಶಾಕುಂತಲ ನಾಟಕದ ಬಗ್ಗೆ ವಿವರವಾದ ವಿವರಣೆಯು ದೊರೆಯುತ್ತದೆ.

'ನಾಟಕಾಮೃತ ಬಿಂದುಗಳು' ಎಸ್.ನಾಗರಾಜ್ ಅವರು ಈ ಕೃತಿಯಲ್ಲಿ ಸಾಹಿತ್ಯವು ಲಲಿತಕಲೆಗಳಲ್ಲಿ ಒಂದಾಗಿದೆ ಸಾಹಿತ್ಯದಲ್ಲಿ ಪ್ರಾಚೀನಕಾಲದಲ್ಲಿ ಸಾಹಿತ್ಯವನ್ನು 'ಕಾವ್ಯ' ಎಂದೇ ಕರೆಯುತ್ತಿದ್ದರು. ಕಾವ್ಯಗಳಲ್ಲೆಲ್ಲ ನಾಟಕವೇ ಬಹಳ ರಮ್ಯವಾದದ್ದು ಎಂದು ಬಣಿಸಲ್ಪಟ್ಟಿದೆ. ಯಾಕೆಂದರೆ ನಾಟಕದಲ್ಲಿ ಎಲ್ಲ ಕಲೆಗಳ ಸಮಾವೇಶವಾಗುತ್ತದೆ. ಮತ್ತು ನಾಟಕವು ಕಿವಿಯಿಂದ ಕೇಳುವುದಿಷ್ಟೇ ಅಲ್ಲ ಕಣ್ಣಿನಿಂದ ನೋಡುವುದೂ ಆಗಿರುವುದರಿಂದ ಅದು ರಸಿಕ ಜನರ ಮನಸ್ಸನ್ನು ಆನಂದಗೊಳಿಸುತ್ತದೆ. ಈ ಕಾರಣದಿಂದಲೇ ಕಾಳಿದಾಸನು 'ನಾಟಕವು ಭಿನ್ನರುಚಿಗಳ ಜನರಿಗೆ ಒಂದು ಸಮಾರಾಧನೆಯಾಗಿದೆ ಎಂದು ಸಾರಿದ್ದಾನೆ. ರಸಿಕನ ದೃಷ್ಟಿಯಿಂದ ನಾಟಕವು ದುಷ್ಕರವಾದ ಸಾಹಿತ್ಯ ಪ್ರಕಾರವಾಗಿದೆ. ಯಾಕೆಂದರೆ ಕಥೆ, ಕಾದಂಬರಿ, ಮಹಾಕಾವ್ಯಗಳ ರಚನೆಗಿಂತಲೂ ನಾಟಕವನ್ನು ರಚಿಸುವುದು ಬಹಳ ಕಠಿಣವಾದ ಕೆಲಸವಾಗಿದೆ. ಆದುದರಿಂದ ಆಗಿನ ಕಾಲದಲ್ಲಿ ಕವಿಗಳು ತಮ್ಮ ಉಳಿದ ಕೃತಿಗಳನ್ನು ಮೊದಲು ಮುಗಿಸಿ ಅನಂತರ ತಮ್ಮ ಪ್ರತಿಭೆ ಕೊನೆಗೊಂಡಿತೆಂದು ಅವರು ತಿಳಿಯುತ್ತಿದ್ದರು. ಆದುದರಿಂದಲೇ 'ನಾಟಕಾತಂ ಕವಿತ್ವಂ' ಎಂಬ ನಾಣ್ಣುಡಿ ಸಂಸ್ಕೃತದಲ್ಲಿ ರೂಢಿಯಾಗಿದೆ. ಈ ಕೃತಿಯು ಅಧ್ಯಯನಕ್ಕೆ ಪ್ರಮುಖವಾದ ಆಕರವಾಗಿದೆ.

'ಸಂಸ್ಕೃತ ಸಾಹಿತ್ಯ ಪರಿಚಯ' ಡಾ.ಮಹಾದೇವ ಜೋಶಿಯವರು ಬರೆದಿರುವ ಈ ಕೃತಿಯಲ್ಲಿ ಸಂಸ್ಕೃತ ನಾಟಕಗಳಲ್ಲೆಲ್ಲಾ ಅತ್ಯುತ್ತಮವೆಂದು ಪರಿಗಣಿತವಾಗಿರುವ ಅಭಿಜ್ಞಾನ ಶಾಕುಂತಲವು ಶೃಂಗಾರರಸ ಪ್ರಧಾನವಾದ ಏಳು ಅಂಕಗಳ ನಾಟಕ. ಚಂದ್ರವಂಶದಲ್ಲಿ ಪುರೂರವನ ಪೀಳಿಗೆಯಲ್ಲೇ ರಾಜನಾಗಿದ್ದ ದುಷ್ಯಂತ ಮತ್ತು ವಿಶ್ವಾಮಿತ್ರ ಮೇನಕೆಯರ ಮಗಳಾಗಿ ಜನಿಸಿ ಕಣ್ವಾಶ್ರಮದಲ್ಲಿ ಋಷಿಕನ್ಯೆಯಾಗಿ ಬೆಳೆದ ಶಕುಂತಲೆ ಈ ಇಬ್ಬರ ಪ್ರೇಮದ ಕಥೆಯೇ ಈ ನಾಟಕದ ವಸ್ತು. ದುಷ್ಯಂತ ಶಕುಂತಲೆಯರ ಕಥೆ ಮಹಾಭಾರತದ ಆದಿಪರ್ವದಲ್ಲಿ(ಅಧ್ಯಾಯ-೬೯-೧೦೦) ಶಕುಂತಲೋಪಾಖ್ಯಾನ ಎಂಬ ಹೆಸರಿನಿಂದ ಪ್ರಸಿದ್ಧವಾಗಿದೆ. ಕವಿಯು ನಾಟಕದಲ್ಲಿ ಮಾಡಿಕೊಂಡ ಬದಲಾವಣೆಗಳು ಮಹತ್ವದವುಗಳಾಗಿವೆ. ದೂರ್ವಾಸನ ಶಾಪವು ಅತ್ಯಂತ ಪ್ರಮುಖವಾದ ಕಲ್ಪನೆ. ಆದ್ದರಿಂದ ದುಷ್ಯಂತನ ಪಾತ್ರದ ಉದಾತ್ತೀಕರಣವು ಸಾಧ್ಯವಾಗಿದೆ. ಅನಸೂಯಾ, ಪ್ರಿಯಂವದಾ, ಮುಂತಾಗಿ ಅನೇಕ ಮೂಲದಲ್ಲಿಲ್ಲದ ಪಾತ್ರಗಳನ್ನು ಕಾಳಿದಾಸನು ಕಲ್ಪಿಸಿದ್ದಾನೆ. ಒಟ್ಟಿನಲ್ಲಿ ಅವನು ಒಂದು ಮಹೋನ್ನತವಾದ ನಾಟಕವನ್ನು ಸಂಸ್ಕೃತದ ನಾಟಕಕ್ಷೇತ್ರಕ್ಕೆ ಸಲ್ಲಿಸಿದ್ದಾನೆ.

ಇದರಲ್ಲಿ ಬರುವ ಪದ್ಯಗಳ ಕಾವ್ಯಸೌಂದರ್ಯ ಅನಿರ್ವಚನೀಯ. ಕಾವ್ಯಗಳಲ್ಲಿ ನಾಟಕ ರಮ್ಯ ನಾಟಕಗಳಲ್ಲಿ ಶಾಕುಂತಲ ರಮ್ಯ. ಶಾಕುಂತಲದಲ್ಲಿ ನಾಲ್ಕನೆಯ ಅಂಕಕ್ಕಿಂತ ಐದನೆಯ ಅಂಕದ ರಮ್ಯತೆಯೇ ಹೆಚ್ಚೆಂಬ ಅಭಿಪ್ರಾಯವೂ ಇದೆ. ಅನುಭವೋಕ್ತಿಗಳು ಸಂಭಾಷಣೆಗೆ ಜೀವಕಳೆಯನ್ನೀಯುತ್ತವೆ. ಆದುದರಿಂದಲೇ ಈ ನಾಟಕವು ಜಗತ್ಪ್ರಸಿದ್ಧವಾಗಿದೆ ಎಂಬ ಅಂಶ ಗೋಚರವಾಗುತ್ತದೆ.

'ಮಹಾಭಾರತದ ಐವರು ಮಾನ್ಯರು' ವಿ. ಸೀತಾರಾಮಯ್ಯ ಅವರು ಈ ಕೃತಿಯಲ್ಲಿ ಮಹಾಭಾರತದ ಆದಿಪರ್ವದಲ್ಲಿ ಶಕುಂತಲೆಯ ಕಥೆ ಬರುತ್ತದೆ. ಶಕುಂತಲೆ ಭರತನ ತಾಯಿ. ಆಕೆ ಪುರುಕುಲದ ರಾಜ ದುಷ್ಯಂತನನ್ನು ಮದುವೆಯಾದ ಸಂದರ್ಭ, ಈ ದಂಪತಿಗಳಿಗೆ ಭರತಕುಮಾರನು ಹುಟ್ಟಿದ ಸಂದರ್ಭವು ಈ ಮೂವರ ಸುತ್ತ ಬೆಳೆದ ಕಥೆಯು ಈ ಉಪಾಖ್ಯಾನದ ಕಥೆ. ಈ ಕಥೆಯನ್ನು ಎತ್ತಿಕೊಂಡು ನಮ್ಮ ದೇಶದ ಕವಿಗಳಿಗೆ ತಲೆಯೊಡವೆಯಂತಿರುವ ಕಾಳಿದಾಸ ಕವಿ ಈಗ್ಗೆ ಸುಮಾರು ೧೫೦೦ ವರ್ಷಗಳ ಹಿಂದೆ ಉತ್ತಮವಾದ ಒಂದು ನಾಟಕವನ್ನು ಬರೆದು ತನಗೂ ನಮ್ಮ ದೇಶಕ್ಕೂ ಎಂದೆಂದಿಗೂ ನಿಲ್ಲುವ ಕೀರ್ತಿಯನ್ನು ಸಂಪಾದಿಸಿದ್ದಾನೆ. ಮೂಲ ಕಥೆ ಮಹಾಭಾರತದಲ್ಲಿ ಹೇಗಿದೆ ಎಂಬುದನ್ನು ಈ ಕೃತಿಯ ಅಧ್ಯಯನದಿಂದ ಕಂಡುಕೊಳ್ಳಬಹುದಾಗಿದೆ.

'ಸಾಹಿತ್ಯ ಸ್ವಪ್ನ ಜ್ಞಾನ ದೀಪ ಮಾಲೆ' ಪ್ರ.ಸಂ. ಶೇಷಗಿರಿರಾವ್ ಎಸ್.ಎಲ್. ಅವರು ಈ ಕೃತಿಯಲ್ಲಿ ಅಭಿಜ್ಞಾನ ಶಾಕುಂತಲಾ ನಾಟಕದ ಬಗ್ಗೆ ಸಂಕ್ಷಿಪ್ತವಾಗಿ ವಿವರಿಸಲಾಗಿದೆ. ಇದು ಮಹಾಭಾರತದಲ್ಲಿನ ಕತೆಗೆ ತುಂಬಾ ಹತ್ತಿರವಾಗಿದೆ ಎಂಬ ಮಾತನ್ನು ಹೇಳುತ್ತಾರೆ. ಕಾಳಿದಾಸನು ಮಹಾಭಾರತದ ಕಥೆಯಲ್ಲಿ ಅನೇಕ ವ್ಯತ್ಯಾಸ ಮಾಡಿಕೊಂಡು ಮುಖ್ಯವಾಗಿ ಶಾಪದ ಪ್ರಸಂಗವನ್ನು ಸೇರಿಸಿದ. ಇದರಿಂದ ದುಷ್ಯಂತನು ಶಕುಂತಳೆ ತನ್ನ ಹೆಂಡತಿ ಎಂದು ತಿಳಿದು ತಿರಸ್ಕರಿಸುವ ದುಷ್ಟನಾಗುವುದಿಲ್ಲ. ಧರ್ಮವಂತನಾಗಿ ಕಾಳಿದಾಸ ಅವನನ್ನು ಚಿತ್ರಿಸುತ್ತಾನೆ. ಶಾಪದ ಪ್ರಸಂಗವು ಸರಿಯಾಗಿ ಕ್ರಿಯೆಯ ಮಧ್ಯ ನಾಲ್ಕನೆಯ ಅಂಕದಲ್ಲಿ ಬರುತ್ತದೆ. ಮೊದಲನೆಯ ಮತ್ತು ಏಳನೆಯ(ಕಡೆಯ) ಅಂಕಗಳು ಋಷ್ಯಾಶ್ರಮಗಳಲ್ಲಿ ನಡೆಯುತ್ತದೆ ಏಳನೆ ಅಂಕದ ಪ್ರಾರಂಭ ಮುಂದುವರಿದು ಮೊದಲನೆಯ ಅಂಕವನ್ನು ನೆನಪಿಗೆ ತರುತ್ತವೆ. ಈ ನಾಟಕದ ಶಿಲ್ಪ ಗಮನಿಸಬೇಕಾದದ್ದು. ಕಡೆಯ ಅಂಕದಲ್ಲಿ ನಾವು ಕಾಣುವ ವೈರಾಗ್ಯಮೂರ್ತಿ ಶಕುಂತಲೆ ನಾವು ಮರೆಯಲಾಗದ ಚಿತ್ರವಾಗಿದೆ.

'ನಾಂದಿ' ನಾಗರಾಜ ಎಸ್. ಅವರು ಈ ಕೃತಿಯಲ್ಲಿ ಕಾಳಿದಾಸನಿಗಂತೂ ವಿಶ್ವಮಾನ್ಯತೆ ದೊರಕಿದೆ. ನ್ಯೂಯಾರ್ಕಿನಲ್ಲಿ 'ಶಾಕುಂತಲ' ನಾಟಕ ಪ್ರದರ್ಶಿತವಾದಾಗ ಅದನ್ನು 'ನಾವು ಕನಸು ಕಾಣುತ್ತಿದ್ದ ಆರ್ಟ್ ನಾಟಕ ಎಂದು ಶ್ಲಾಘಿಸಿದರು. ಭಾರತದಲ್ಲಂತೂ ಕಾವ್ಯಗಳಲ್ಲಿ ನಾಟಕ ರಮ್ಯವಾದದ್ದು. ನಾಟಕಗಳಲ್ಲಿ ಶಾಕುಂತಲ' ಎಂದಿದ್ದಾರೆ. ಶುದ್ಧ ನಾಟಕೀಯತೆಯಲ್ಲಿ ಭಾಸ ಕಾಳಿದಾಸನನ್ನು ಮೀರಿಸಬಹುದು. ರಮ್ಯತೆಯಲ್ಲಿ ಕಾಳಿದಾಸನನ್ನು ಮೀರಿಸುವವರಿಲ್ಲ. ಆತನ ಅದ್ಭುತ, ಕವಿತಾ ಶಕ್ತಿ ಎಲ್ಲ ಕೊರತೆಗಳನ್ನು ಗೌಣ ಮಾಡಿ ನೋಡುಗರ ಮನಸ್ಸನ್ನು ಮುದಗೊಳಿಸುತ್ತದೆ. ಇಡೀ ಸಂಸ್ಕೃತ ಸಾಹಿತ್ಯದಲ್ಲೇ ಅತ್ಯಂತ ರಮ್ಯವೆನಿಸಿಕೊಂಡಿರುವ ಶಾಕುಂತಲ ನಾಟಕದ ಚತುರ್ಥಾಂಕದ ಶ್ಲೋಕ ಚತುಷ್ಟಯದಲ್ಲಿ ಕಾಳಿದಾಸ ಕಣ್ವರಿಗೆ ತನ್ನ ಸಾಕು ಮಗಳಾದ ಶಕುಂತಲೆಯನ್ನು ಗಂಡನ ಮನೆಗೆ ಕಳುಹಿಸುವಾಗ ಉಂಟಾದ ಶೋಕವನ್ನು ವರ್ಣಿಸುತ್ತಾನೆ. ಮುನಿಗಳಿಗೆ ಇಷ್ಟು ನೊವಾದಾಗ ಗೃಹಸ್ಥರ ಪಾಡೇನು? ಸೂಚನೆ ವರ್ಣನೆಗಿಂತ ಹೆಚ್ಚು ಪ್ರಭಾವಿಯೆಂಬುದು ತಿಳಿಯುತ್ತದೆ.

ಶಕುಂತಲೆ ತನ್ನ ಪ್ರಿಯ ಜನರಿಗೆ ಮುದ್ದಿನ ಜಿಂಕೆ ಗಿಡಗಳಿಗೆ ವಿದಾಯ ಹೇಳುವ ದುಃಖ ಎಲ್ಲಾ ಹೆಂಗಳೆಯರದು. ನಿತ್ಯದ ಅನುಭವವನ್ನು ಹೃದಯಂಗಮವಾಗಿ ವರ್ಣಿಸಿದಾಗ ಕಲೆಯು ನಿತ್ಯ ನೂತನತೆಯನ್ನು ಸ್ಥಾಪಿಸಿದಂತಾಗುತ್ತದೆ. ಅಂದಿನ ನಾಟಕದ ಜೀವಾಳ ರಸಪ್ರಕ್ರಿಯೆಯಲ್ಲಿದ್ದಿತು. ರಸಸೃಷ್ಟಿಯಲ್ಲಿ ಕಾಳಿದಾಸ ಪ್ರಮುಖನಾಗಿದ್ದಾನೆ. ಪ್ರೇಮಕ್ಕಿಂತ ವಿರಹವೇ ರಮ್ಯವೆಂದು ಕಾಳಿದಾಸನ ನಾಟಕಗಳಲ್ಲಿ ಪ್ರತಿಪಾದನೆ ಮಾಡಿದಂತಿದೆ.

ಕಾಳಿದಾಸ ಅತ್ಯುನ್ನತ ಮಟ್ಟದ ಪ್ರೇಮವನ್ನು ಶಾಕುಂತಲದಲ್ಲಿ ತೋರಿಸಿದ್ದಾನೆ. ಪುರುಷರ ವ್ಯಕ್ತಿತ್ವವು ಪ್ರಕಾಶಿಸಬೇಕಾದರೆ ಕೈ ಹಿಡಿದ ಹೆಂಗಸಿನ ವ್ಯಕ್ತಿತ್ವವೇ ಕಾರಣ ಎಂಬುದನ್ನು ಸ್ಪಷ್ಟಪಡಿಸಿದ ಕವಿ ಕಾಳಿದಾಸ. ಸಂದರ್ಭಗಳಿಗೆ ತಕ್ಕ ಸಂಭಾಷಣೆ, ಯೋಗ್ಯ ಸನ್ನಿವೇಶಗಳು, ಅದಕ್ಕೆ ಅನುಗುಣವಾದ ಭಾವಗಳ ಅಭಿವ್ಯಕ್ತಿ ಇವುಗಳಲ್ಲಿ ಕಾಳಿದಾಸ ಎತ್ತಿದ ಕೈ. ಸ್ತ್ರೀ ಪಾತ್ರಗಳಲ್ಲಿ ಉತ್ತಮ ರೀತಿಯ ವ್ಯಕ್ತಿತ್ವವನ್ನು ಚಿತ್ರಿಸಿದ್ದಾನೆ. ಶಾಕುಂತಲದ ರಚನೆಯಲ್ಲಂತೂ ತನ್ನೆಲ್ಲ ಪ್ರತಿಭೆಯನ್ನು ಧಾರೆ ಎರೆದಿದ್ದಾನೆ.

'ಸಂಸ್ಕೃತ ಸಂಪದ' ನರಸಿಂಹಮೂರ್ತಿ ವಿ. ಅವರು ಶಾಕುಂತಲ ನಾಟಕದ ಕೊನೆಯಲ್ಲಿ ಕಾಳಿದಾಸ ನೀಡುವ ಅಮರ ಸಂದೇಶ ರಾಷ್ಟ್ರದ ಏಕತೆಯನ್ನು ಸಾಧಿಸುವವರಿಗೆ ಕಿವಿಮಾತು ಹೇಳುತ್ತಾನೆ. 'ಕಾಳಿದಾಸನ ಅಭಿಜ್ಞಾನ ಶಾಕುಂತಲ: ಕನ್ನಡ ಅನುವಾದಗಳ ಅಧ್ಯಯನ' ಎಂಬ ವಿಷಯಕ್ಕೆ ಪೂರಕವಾಗಿ ಆನೇಕ ಮಾಹಿತಿಯು ದೊರೆಯುತ್ತದೆ. ಅಂತರಜಾಲದಿಂದ ಶಾಕುಂತಲಕ್ಕೆ ಸಂಬಂಧಿಸಿದ ಆನೇಕ ಚಿತ್ರಗಳನ್ನು ಪಡೆದುಕೊಂಡಿದ್ದೇನೆ.

**ಪಿಎಚ್.ಡಿ. ಮಹಾಪ್ರಬಂಧ**

'ಸಂಸ್ಕೃತ ನಾಟಕಗಳ ಅನುವಾದ ಮತ್ತು ರೂಪಾಂತರ: ಒಂದು ಅಧ್ಯಯನ' ಪಿಎಚ್.ಡಿ. ಪದವಿಗಾಗಿ ಹಂಪಿ ಕನ್ನಡ ವಿಶ್ವವಿದ್ಯಾಲಯದ ಭಾಷಾನಿಕಾಯಕ್ಕೆ ಸಲ್ಲಿಸಿದ ಮಹಾಪ್ರಬಂಧ. ಸಂಶೋಧಕರು, ಸುಚೇತಾ ನವರತ್ನ ಇವರು ಪ್ರೊ. ಮಲ್ಲೇಪುರಂ ಜಿ.ವೆಂಕಟೇಶ ಅವರ ಮಾರ್ಗದರ್ಶನದಲ್ಲಿ ೨೦೦೨ರಲ್ಲಿ ಸಲ್ಲಿಸಿದ್ದಾರೆ.

ಈ ಸಂಶೋಧನಾ ಬರವಣಿಗೆಯಲ್ಲಿರುವುದು ಕನ್ನಡಿಸುವಿಕೆಯ ಕ್ರಿಯೆ. ಯಾವುದೇ ಅನುವಾದಕರ ಉದ್ದೇಶ ಅಗತ್ಯ ಮತ್ತು ಪರಿಸರಕ್ಕೆ ತಕ್ಕಂತೆ ರೂಪಗೊಳ್ಳುತ್ತದೆ. ಕನ್ನಡಿಸುವಿಕೆಯ ಪ್ರಕ್ರಿಯೆ ಎಂಬುದು ಕನ್ನಡದ ಜಾಯಮಾನಕ್ಕೆ ಹೊಂದುವಂತೆ ಮೂಲಕೃತಿಯನ್ನು ಹೊಂದಿರುವ ಪ್ರಕ್ರಿಯೆ. ಇದು ಹಲವಾರು ಸಲ ಮಾನದಂಡವಾಗಿ ಬಳಸಬೇಕಾದ ಸಂದರ್ಭವಾಗಿ ಮೂಡಿಬರುತ್ತದೆ. ಹಳೆಗನ್ನಡದ ಶೈಲಿ ಪದ್ಯಗಳ ಅನುವಾದದಲ್ಲಿ ಬಂದಂತಹ ವ್ಯತ್ಯಾಸಗಳು ನಾಟಕದ ಕನ್ನಡಿಸುವಿಕೆಯ ಬಗೆಯನ್ನು ವಿವರಿಸುತ್ತವೆ. ಕಾಳಿದಾಸನ ಅಭಿಜ್ಞಾನ ಶಾಕುಂತಲ ನಾಟಕವು ಕನ್ನಡಕ್ಕೆ ಬಂದ ಸಾಂಸ್ಕೃತಿಕ ಪರಿಸರದ ಬಗ್ಗೆ ವಿವರಣೆ ಈ ಸಂಶೋಧನಾ ಬರವಣಿಗೆಯಲ್ಲಿ ದೊರೆಯುತ್ತದೆ ಹಾಗೂ ಅನುವಾದವಾದ ಕಾಲಮಾನದ ಸ್ಥಿತಿಗತಿಯನ್ನು ಸಹ ವಿವರಿಸಲಾಗಿದೆ.

## ಅಧ್ಯಾಯ ಮೂರು

# ಕನ್ನಡ ಸಾಹಿತ್ಯ: ಶಾಕುಂತಲ ಪ್ರಭಾವ

ಸಣ್ಣಕಥೆಗಳು

ಕಾದಂಬರಿ

ಕಾವ್ಯಗಳು

ನಾಟಕಗಳು

ಅಧ್ಯಾಯ ಮೂರು

# ಕನ್ನಡ ಸಾಹಿತ್ಯ: ಶಾಕುಂತಲ ಪ್ರಭಾವ

ಪ್ರಸ್ತುತ ಸಾಹಿತ್ಯ ಸಂದರ್ಭದಲ್ಲಿ ಕಾಳಿದಾಸನ ಅಭಿಜ್ಞಾನ ಶಾಕುಂತಲ ನಾಟಕವನ್ನು ಕುರಿತು ಚರ್ಚಿಸುವುದೆಂದರೆ ಭಾರತೀಯ ಪರಿಸರದಲ್ಲಿ ಕನ್ನಡ ಸಾಹಿತ್ಯದ ಪರಂಪರೆಯನ್ನು ಕುರಿತು ಅಧ್ಯಯನ ಮಾಡುವುದಾಗಿದೆ. ಪ್ರಾಚೀನ ಕಾಲದಿಂದ ಆಧುನಿಕ ಕಾಲದವರೆಗೆ ಕಾಳಿದಾಸನ ಅಭಿಜ್ಞಾನ ಶಾಕುಂತಲ ನಾಟಕದ ಅನುವಾದದ ಪ್ರಕ್ರಿಯೆಯು ನಿರಂತರವಾಗಿ ನಡೆಯುತ್ತಲಿದೆ. ಈ ಅಧ್ಯಯದಲ್ಲಿ ಶಾಕುಂತಲ ನಾಟಕದ ವಸ್ತುವನ್ನು ಕುರಿತು ಪ್ರಕಟಗೊಂಡಿರುವ ಸಣ್ಣಕತೆ, ಕಾದಂಬರಿ, ಮತ್ತು ಕಾವ್ಯ, ನಾಟಕ ಕುರಿತು ಅಧ್ಯಯನ ಮಾಡಲಾಗಿದೆ ಹಾಗೂ ಇಲ್ಲಿ ರೂಪಾಂತರವಾಗಿರುವುದನ್ನು ಗಮನಿಸಲಾಗಿದೆ.

ಅಭಿಜ್ಞಾನ ಶಾಕುಂತಲ ನಾಟಕದ ಪ್ರಭಾವದಿಂದ ಸಮಾಜ, ಸಂಸ್ಕೃತಿ, ಸಂವೇದನೆ ಹಾಗೂ ಅನೇಕ ಭಾವನಾತ್ಮಕ ಅಂಶಗಳು ಕನ್ನಡದ ಮನಸ್ಸುಗಳಿಗೆ ಮುದ ನೀಡಿದೆ. ಈ ಭಾಷಾಂತರ ಕಾರ್ಯದಿಂದ ಕನ್ನಡ ಸಾಹಿತ್ಯ ಪರಂಪರೆಯಲ್ಲಿ ಸಾಂಸ್ಕೃತಿಕ ಪರಿಸರದಲ್ಲಿ ಮರುಸೃಷ್ಟಿಸಿದೆ. ಶಕುಂತಲೆ, ದುಷ್ಯಂತರ ಪಾತ್ರ ಜನರ ಬಾಯಿಯಲ್ಲಿ ಓದುಗರ ಮನದಲ್ಲಿ ಮರೆಯಲಾಗದ ಕಥೆಯಾಗಿ ಇಂದಿಗೂ ಗೋಚರಿಸುತ್ತದೆ.

ಅಭಿಜ್ಞಾನ ಶಾಕುಂತಲ ನಾಟಕದ ಕಥಾವಸ್ತುವನ್ನು ಕಾಳಕ್ಕೆ ತಕ್ಕಂತೆ ಬದಲಾವಣೆಗಳನ್ನು ಮಾಡಿಕೊಂಡಿದ್ದಾರೆ. ಹಾಗೂ ಜನಸಾಮಾನ್ಯರಿಗೆ, ವಿದ್ಯಾರ್ಥಿಗಳಿಗೆ ಸುಲಭವಾಗಿ ಅರ್ಥವಾಗುವಂತೆ ಬರೆದಿದ್ದಾರೆ.

ಈ ಅಧ್ಯಾಯದಲ್ಲಿ ಸಣ್ಣಕತೆಗಳನ್ನು ಬರೆದಿರುವವರ ಬಗ್ಗೆ, ಕತೆಯ ಬಗ್ಗೆ ವಿಶ್ಲೇಷಣೆ ಮಾಡಲಾಗಿದೆ.

೧. ಸಣ್ಣಕತೆಗಳು

೨. ಕಾದಂಬರಿ

೩. ಕಾವ್ಯಗಳು

೪. ನಾಟಕಗಳು

## ಸಣ್ಣಕಥೆಗಳು

**ಮಹಾಭಾರತದಲ್ಲಿ ಅಭಿಜ್ಞಾನ ಶಾಕುಂತಲಂ:** ಮಹಾಭಾರತದಲ್ಲಿ ಬರುವ ಕಥಾ ಭಾಗ ಇದು. ಉಂಗುರದ ಪ್ರಕರಣ, ಶಾಪದ ಪ್ರಕರಣ, ಮಾರೀಚಾಶ್ರಮ, ಮೇನಕೇಯ ಸಹಾಯ, ಅನಸೂಯಾ ಪ್ರಿಯಂವದಯರೆಂಬ ಗೆಳತಿಯರ ಪಾತ್ರ ಇವೆಲ್ಲ ಮೂಲದಲ್ಲಿಲ್ಲ. ಅವುಗಳನ್ನೆಲ್ಲ ಸೇರಿಸಿ ಮೂಲದ ವ್ಯವಹಾರಮಯತೆಯನ್ನು ದೂರಮಾಡಿ ಈ ಕಥೆಯನ್ನು ಒಂದು ಸುಂದರ ಕಲಾಕೃತಿಯಾಗಿ ಮಾಡಿದ ಕೀರ್ತಿ ಕಾಳಿದಾಸನಿಗೆ ಸಲ್ಲುತ್ತದೆ ಎಂದು ರವೀದ್ರನಾಥ ಠಾಕೂರ್, ಕುವೆಂಪು, ಶ್ರೀರಂಗ, ಶ್ರೀನಂಶ್ರೀ ಮೊದಲಾದವರೆಲ್ಲ ಹೇಳುತ್ತಾರೆ. ಆದರೆ ಈ ಸೇರ್ಪಡೆಗಳನ್ನೆಲ್ಲ ಕಿತ್ತು ಹಾಕಿದರೂ ಮೂಲಭಾರತದ ಶಕುಂತಲೆಯ ಕಥೆ ನಮ್ಮ ನೆನಪಿನಲ್ಲಿ ಉಳಿಯುವಂಥ ಗಟ್ಟಿಯಾದ ಕಲಾಕೃತಿ ಎಂಬುದನ್ನು ಮರೆಯುಂವಂತಿಲ್ಲ.

ಹೀಗಿದೆ: "ಬೇಟೆಗೆ ಬಂದಿದ್ದ ಅಯೋಧ್ಯೆಯ ದುಷ್ಯಂತನು ಒಂದು ಜಿಂಕೆಯನ್ನು ಬೆನ್ನಟ್ಟಿ ಕಣ್ವರ ಆಶ್ರಮದ ಬಳಿಗೆ ಬರುವನು. ಅವನ ಪರಿವಾರವೆಲ್ಲ ಬಹಳ ಹಿಂದೆ ಉಳಿದು ಬಿಡುವುದು. ಆಶ್ರಮದ ಜಿಂಕೆಯನ್ನು ಕೊಲ್ಲಬೇಡವೆಂದು ತಡೆದ ತಾಪಸರು ರಾಜನ ವಿನಯಕ್ಕೆ ಮನಸೋತು 'ಚಕ್ರವರ್ತಿಯಾಗುವ ಮಗನನ್ನು ಪಡೆ' ಎಂದು ಆಶೀರ್ವದಿಸುವನು. ಆಶ್ರಮದಲ್ಲಿ ಕಣ್ವರಿಲ್ಲದಿದ್ದರೂ ಅವನ ಸಾಕು ಮಗಳೂ ಶಕುಂತಲೆಯನ್ನು ಅತಿಥಿ ಸತ್ಕಾರಕ್ಕಾಗಿ ನಿಯಮಿಸಿ ಹೋಗಿದ್ದರು."[೧]

ಮಹಾಭಾರತದ ಆದಿಪರ್ವದಲ್ಲಿ ಶಕುಂತಲೆಯ ಕಥೆ ಬರುತ್ತದೆ. ಶಕುಂತಲೆ ಭರತನ ತಾಯಿ. ಆಕೆ ಪುರುಕುಲದ ರಾಜ ದುಷ್ಯಂತನನ್ನು ಮದುವೆಯಾದ ಸಂದರ್ಭವು, ಈ ದಂಪತಿಗಳಿಗೆ ಭರತಕುಮಾರನು ಹುಟ್ಟಿದ ಸಂದರ್ಭವು ಈ ಮೂವರ ಸುತ್ತ ಬೆಳೆದ ಕಥೆಯೂ ಈ ಉಪಾಖ್ಯಾನದ ಕಥೆ. ಈ ಕಥೆಯನ್ನು ಎತ್ತಿಕೊಂಡು ನಮ್ಮ ದೇಶದ ಕವಿಗಳಲ್ಲಿ ತಲೆಯೊಡವೆಯಂತಿರುವ ಕಾಳಿದಾಸ ಕವಿ ಹೀಗೆ ಸುಮಾರು ೧೫೦೦ ವರ್ಷಗಳ ಹಿಂದೆ ಉತ್ತಮವಾದ ಒಂದು ನಾಟಕವನ್ನು ಬರೆದು ತನಗೂ ನಮ್ಮ ದೇಶಕ್ಕೂ ಎಂದೆಂದಿಗೂ ನಿಲ್ಲುವ ಕೀರ್ತಿಯನ್ನು ಸಂಪಾದಿಸಿದ್ದಾನೆ. ಮೂಲ ಕಥೆ ಮಹಾಭಾರತದಲ್ಲಿ ಹೇಗಿದೆ ಎಂಬುದನ್ನು ಈ ಮುಂದೆ ಹೇಳಲಾಗಿದೆ.

ಪುರು ವಂಶದಲ್ಲಿ ಹುಟ್ಟಿದ ದುಷ್ಯಂತನು ಬಹಳ ವೀರ್ಯವಂತನು. ತನ್ನ ಆಳಿಕೆಗೆ ಒಳಪಟ್ಟು ಭೂಮಿಯನ್ನು ನ್ಯಾಯದಿಂದ ಪಾಲಿಸುತ್ತಿದ್ದನು. ಎಲ್ಲ ರಾಜರಂತೆ ತನ್ನ ನಾಡಿನ ಉತ್ಪತ್ತಿಯ ಆರರಲ್ಲಿ ಒಂದು ಭಾಗವನ್ನು ರಾಜಭಾಗವಾಗಿ ತೆಗೆದುಕೊಂಡು ಜನರ ಯೋಗಕ್ಷೇಮವನ್ನು ಬಹು ವಿತರಣೆಯಿಂದ ನೋಡಿಕೊಳ್ಳುತ್ತಿದ್ದನು. ಆತನು ಧರ್ಮಿಷ್ಠನೆಂದೂ ಶಕ್ತಿವಂತನೆಂದೂ ದಕ್ಷನಾದ ಅರಸನೆಂದೂ ಲೋಕದಲ್ಲಿ ಕೀರ್ತಿಯಿತ್ತು. ಹೀಗೆಯೇ ಇರಲು, ಒಂದು ದಿನ ಆತನು ದೊಡ್ಡ ಸೈನ್ಯವನ್ನು ಅನೇಕ ಕಥೆಗಳನ್ನು ತೆಗೆದುಕೊಂಡು ಮೃಗದ ಬೇಟೆಗೆ ಸಂತೋಷದಿಂದ ಹೊರಟನು. ಮಧ್ಯಾಹ್ನದವರೆಗೂ ಬಹುವಿಧವಾಗಿ ಬೇಟೆಯಾಡಿ ಕಾಡುಮೃಗಗಳನ್ನು ಪಕ್ಷಿಗಳನ್ನು ಕೊಲ್ಲುತ್ತ ಬಹುದೂರ ಕಾಡಿನಲ್ಲಿ ತಿರುಗಾಡಿದನು. ಸುಮಾರು ಮಧ್ಯಾಹ್ನದ ಹೊತ್ತಿಗೆ ಮೃಗಗಳನ್ನು ಅನುಸರಿಸಿ

ಶ್ರಮವಾಯಿತು, ದಣಿವಾಯಿತು. ಬಳಲಿದ್ದವನು ಸ್ವಲ್ಪ ವಿಶ್ರಮಿಸಿಕೊಂಡು ಹಿಂದಿರುಗಬೇಕೆಂದು ಯೋಚಿಸುತ್ತಿದ್ದನು. ಆಗ ಕಣ್ಣೆದುರಿಗೆ ಉತ್ತಮವಾದ ಒಂದು ವನಭಾಗ ಕಾಣಿಸಿತು. ಅದನ್ನು ಕಾಣುತ್ತಲೆ ರಾಜನ ಮನಸ್ಸಿಗೆ ಆಕರ್ಷಣೆಯಾಯಿತು. ಹಿರಿಯ ಬಿಲ್ಗಾರನಾದ ಆತನು ಆ ಕಡೆ ಹೊರಟು ಅಲ್ಲೊಂದು ಆಶ್ರಮವಿರುವುದನ್ನು ಕಂಡನು.

"ಆಶ್ರಮವನ್ನು ಕಂಡೊಡನೆಯೇ ರಾಜನಿಗೆ ತುಂಬಾ ಆನಂದ ಉಂಟಾಯಿತು. ಅಲ್ಲಿ ಪಶು ಪಕ್ಷಿ ಪ್ರಾಣಿ, ಗಿಡ, ಬಳ್ಳಿ, ಹೂ, ಹಣ್ಣು, ಕೊಳ ಶುಚಿಯಾಗಿ ನಿತ್ಯಕರ್ಮಗಳಲ್ಲಿ ತೊಡಗಿದ್ದ ಜನ, ಈ ಎಲ್ಲವೂ ಆತನಿಗೆ ಮೆಚ್ಚಿಕೆ ತಂದವು. ಜನ ತೃಪ್ತರಾಗಿ ವಿದ್ಯಾ ವ್ಯಾಸಂಗ ಮಾಡುತ್ತಿದ್ದುದನ್ನು ಕಂಡನು. ಆ ಆಶ್ರಮವು ಮಹಾತ್ಮರಾದ ಕಶ್ಯಪ ಋಷಿಗಳಿಗೆ ಸೇರಿದುದೆಂದು ಗೊತ್ತಾಯಿತು. ಪಕ್ಕದಲ್ಲಿಯೇ ಮಾಲಿನೀ ನದಿ, ಅದರ ಎರಡೂ ದಂಡೆಗಳಲ್ಲಿ ಚೆಲುವಾದ ತೋಟಗಳು, ನಡು ನಡುವೆ ಸಣ್ಣ ದ್ವೀಪಗಳು ಅಲಂಕಾರದಂತೆ ಇದ್ದುವು. ಅಲ್ಲಿನ ವ್ಯಾಸಂಗ, ವಿಪ್ರರು, ವ್ರತ, ಜಪ, ಹೋಮಪರರಾದ ಸಿದ್ಧರು, ದೇವಮಂದಿರಗಳು, ಪೂಜಾಕಾರ್ಯ ಮುಂತಾದವುಗಳನ್ನು ಕಂಡು ತಾನು ಬ್ರಹ್ಮಲೋಕಕ್ಕೇ ಬಂದಿರಬೇಕೆಂದುಕೊಂಡನು. ಆಶ್ರಮದ ಬಳಿಗೆ ಬಂದ ಕೂಡಲೇ ರಾಜನು ತನ್ನ ಬೇಟೆಯ ಅಸ್ತ್ರಗಳನ್ನು, ವೇಷವನ್ನು ಕಳಚಿದನು. ರಾಜತನದ ಚಿಹ್ನೆಗಳನ್ನು ತೆಗೆದಿಟ್ಟು ಮಂತ್ರಿ ಪುರೋಹಿತರನ್ನು ಹಿಂದೆಯೇ ಬಿಟ್ಟು ಶುಭಕರವಾದ ಆ ಸ್ಥಳವನ್ನು ಪ್ರವೇಶಿಸಿದನು. ಆತನ ಉದ್ದೇಶ ಆಶ್ರಮದೊಳಕ್ಕೆ ಹೋಗಿ ಕಶ್ಯಪರ ವಂಶದಲ್ಲಿ ಹುಟ್ಟಿದ ಕಣ್ವಮುನಿಯನ್ನು ಕಂಡು ಅವರಿಗೆ ವಂದನೆ ಮಾಡಬೇಕು, ಅವರ ಹರಕೆಯನ್ನು ಪಡೆದು ಹೋಗಬೇಕು ಎಂದಿತ್ತು. ಪರ್ಣಶಾಲೆಯಲ್ಲಿ ಕಣ್ವಋಷಿಗಳು ಇರಲಿಲ್ಲ. ಅಲ್ಲಿ ಎಲ್ಲವೂ ಬರಿದಾಗಿರುವುದನ್ನು ನೋಡಿ ಗಂಭೀರವಾದ, ಎತ್ತಿದ ಧ್ವನಿಯಲ್ಲಿ "ಒಳಗೆ ಯಾರು?" ಎಂದು ಕೇಳಿದನು. ರಾಜನ ಧ್ವನಿಯ ನಾದದಿಂದ ವನ ತುಂಬಿತು. ಈ ಧ್ವನಿಯನ್ನು ಕೇಳಿ ಲಕ್ಷ್ಮಿಯಂತಹ ರೂಪವುಳ್ಳ ಒಬ್ಬ ಕನ್ಯೆ ಹೊರಕ್ಕೆ ಬಂದಳು. ಆಕೆ ತಾಪಸಿಯಂತೆ ಉಟ್ಟು, ತೊಟ್ಟು ಇದ್ದಳು. ಆಶ್ರಮದ ಬಾಗಿಲಿಗೆ ಬಂದು ನಿಂತಾತನ ಆಕಾರವನ್ನು ಲಕ್ಷಣವನ್ನು ರೆಪ್ಪೆ ಇಡದೆ ಒಂದು ಕ್ಷಣ ನೋಡಿ ಆತನು ಮಹಾರಾಜನೇ ಆಗಿರಬೇಕೆಂದು ಊಹಿಸಿದಳು. ಒಳಗೆ ಬರಬೇಕೆಂದು ವಿನಯದಿಂದ ಹೇಳಿ ಉಚಿತವಾದ ಪೀಠದಲ್ಲಿ ಕೂಡಿಸಿ, ಗೌರವಿಸಿ, ಕ್ಷೇಮ ಸಮಾಚಾರಗಳನ್ನು ವಿಚಾರಿಸಿದಳು."[೨]

ಒಳ್ಳೆಯ ಕುಲದಲ್ಲಿ ಹುಟ್ಟಿ ಒಳ್ಳೆಯ ವಿದ್ಯೆ ಕಲಿತ ಹೆಣ್ಣುಮಕ್ಕಳಿಗೆ ಒಪ್ಪುವ ರೀತಿಯಲ್ಲಿ ಆತನಿಗೆ ತೋರಿಸಬೇಕಾದ ಮರ್ಯಾದೆಯನ್ನೆಲ್ಲ ತೋರಿಸಿ ಆಯಿತು. ಮುಗುಳುನಗೆಯಿಂದ "ತಾವು ಯಾರು? ಏತಕ್ಕಾಗಿ ಆಶ್ರಮಕ್ಕೆ ದಯಮಾಡಿಸಿದ್ದೀರಿ? ನಾವು ಮಾಡಬಹುದಾದುದೇನು?" ಎಂದು ಕೇಳಿದಳು. ಸವಿಯಾಗಿ ಆಡಿದ ಮಾತನ್ನು ರಾಜನು ಕೇಳಿದನು. ಆಕೆಯ ಉಪಚಾರಕ್ಕೆ ತೃಪ್ತಿಪಟ್ಟನು. ಉತ್ತರವಾಗಿ "ನನ್ನ ಹೆಸರು ದುಷ್ಯಂತ, ಮಹಾತ್ಮರಾದ ಕಣ್ವಋಷಿಗಳನ್ನು ಸಂದಿಸಿ ಹೋಗೋಣವೆಂದು ಇಲ್ಲಿಗೆ ಬಂದೆ. ಆ ಪೂಜ್ಯರು ಎಲ್ಲಿ ಹೋಗಿದ್ದಾರೆ?" ಎಂದು ಕೇಳಿದನು. ಆಕೆ, "ಹಣ್ಣು ಹೂಗಳನ್ನು

ತರುವುದಕ್ಕಾಗಿ ತಂದೆ ಕಾಡಿಗೆ ಹೋಗಿದ್ದಾರೆ. ಒಂದು ಕ್ಷಣ ಕಾಲ ನಿರೀಕ್ಷಿಸಿ, ಅವರನ್ನು ನೋಡಿ ಹೋಗಬಹುದು" ಎಂದಳು. ಅದಕ್ಕೊಪ್ಪಿ ರಾಜನು ಕುಳಿತನು. ಆತನಿಗೆ ಸ್ವಲ್ಪ ವಿಶ್ರಾಂತಿ ದೊರೆಯಿತು. ಕಣ್ವಋಷಿ ಅಲ್ಲಿಲ್ಲದಿರುವುದು ಅವಕಾಶವಾಯಿತು.

"ನಗುಮೊಗದ ಶಕುಂತಲೆಯನ್ನು ಕಂಡ ಕ್ಷಣದಿಂದಲೂ ರಾಜನಿಗೆ ಆಕೆಯ ಚೆಲುವನ್ನು ಕುರಿತು ಆಶ್ಚರ್ಯವಾಯಿತು. ತಪಸ್ಸಿನಿಂದ ಆಕೆಯ ದೇಹ ಹೊಳೆಯುತ್ತಿತ್ತು. ರೂಪಯೌವನ ಸಂಪನ್ನೆಯಾದ ಇಂತಹ ಚೆಲುವೆ ಇಲ್ಲಿ ಹೇಗಿದ್ದಾಳು ಎಂಬ ಸಂಗತಿ ಚೋದ್ಯವಾಗಿ ಕಾಣುತ್ತಿತ್ತು. ಮನಸ್ಸಿನ ಯೋಚನೆಗಳನ್ನು ನಿಲ್ಲಿಸಬೇಕೆಂದು ಪ್ರಯತ್ನಪಟ್ಟನು. ತಡೆಯಲಾಗಲಿಲ್ಲ. ಆಕೆಯನ್ನು ಕುರಿತು "ಸುಂದರಿ, ನೀನು ಯಾರು? ಯಾರವಳು? ವನಕ್ಕೆ ಏತಕ್ಕಾಗಿ ಬಂದೆ? ನಿನ್ನನ್ನು ಕಂಡಾಗಿನಿಂದ ನೀನು ನನ್ನ ಮನಸ್ಸನ್ನು ಅಪಹಾರ ಮಾಡಿದ್ದೀಯೆ. ನಿನ್ನ ವಿಷಯವನ್ನು ತಿಳಿಯಬೇಕೆಂಬ ಇಚ್ಛೆಯುಂಟಾಗಿದೆ" ಎಂದು ಹೇಳಿದನು. ಶಕುಂತಲೆ ನಗುನಗುತ್ತ "ನಾನು ಭಗವಾನ್ ಕಣ್ವರ ಮಗಳು"? ಎಂದಳು. ಉತ್ತರದಿಂದ ಆತನ ಸಂದೇಹ ನಿವಾರಣೆ ಆಗಲಿಲ್ಲ. ಆಕೆಯನ್ನು ಕುರಿತು, "ಕಣ್ವರು ಲೋಕಪೂಜಿತರು, ಬ್ರಹ್ಮಚರ್ಯೆಯಲ್ಲಿರುವವರು, ಒಳ್ಳೆಯ ವ್ರತನೇಮಗಳನ್ನು ತಪ್ಪದೆ ನಡೆಸುವವರು, ಊರ್ಧ್ವರೇತರು, ನೀನು ಅವರ ಮಗಳು ಹೇಗಾದೆ? ಈ ಅಂಶದಲ್ಲಿ ನನಗೆ ಬಹಳ ಸಂಶಯ ಉಂಟಾಗಿದೆ. ಅದನ್ನು ಪರಿಹರಿಸು ಎಂದನು."[೩]

ಮಹಾಭಾರತದಲ್ಲಿನ ಕತೆಗೆ ತುಂಬಾ ಹತ್ತಿರವಾಗಿದೆ ಎಂಬ ಮಾತನ್ನು ಹೇಳುತ್ತಾರೆ. ಕಾಳಿದಾಸನು ಮಹಾಭಾರತದ ಕಥೆಯಲ್ಲಿ ಅನೇಕ ವ್ಯತ್ಯಾಸ ಮಾಡಿಕೊಂಡು ಮುಖ್ಯವಾದದ್ದು ಶಾಪದ ಪ್ರಸಂಗವನ್ನು ಸೇರಿಸಿದ. ಇದರಿಂದ ದುಷ್ಯಂತನು ಶಕುಂತಲೆ ತನ್ನ ಹೆಂಡತಿ ಎಂದು ತಿಳಿದು ತಿರಸ್ಕರಿಸುವ ದುಷ್ಟನಾಗುವುದಿಲ್ಲ. ಧರ್ಮಾತ್ಮನಾಗಿಯೇ ಕಾಳಿದಾಸ ಅವನನ್ನು ಚಿತ್ರಿಸುತ್ತಾನೆ ಶಾಪದ ಪ್ರಸಂಗವು ಸರಿಯಾಗಿ ಕ್ರಿಯೆಯ ಭಾಗವಾಗಿದೆ.

ಕಾಳಿದಾಸನಿಗಂತೂ ವಿಶ್ವಮಾನ್ಯತೆ ದೊರಕಿದೆ. ನ್ಯೂಯಾರ್ಕಿನಲ್ಲಿ 'ಶಾಕುಂತಲ' ನಾಟಕ ಪ್ರದರ್ಶಿತವಾದಾಗ ಅದನ್ನು 'ನಾವು ಕನಸು ಕಾಣುತ್ತಿದ್ದ ಆರ್ಟ್ ನಾಟಕ ಎಂದು ಶ್ಲಾಘಿಸಿದರು. ಭಾರತದಲ್ಲಂತೂ ಕಾವ್ಯಗಳಲ್ಲಿ ನಾಟಕ ರಮ್ಯವಾದುದ್ದು. ನಾಟಕಗಳಲ್ಲಿ ಶಾಕುಂತಲ' ಎಂದಿದ್ದಾರೆ. ಶುದ್ಧ ನಾಟಕೀಯತೆಯಲ್ಲಿ ಭಾಸ ಕಾಳಿದಾಸನನ್ನು ಮೀರಿಸಬಹುದು. ರಮ್ಯತೆಯಲ್ಲಿ ಕಾಳಿದಾಸನನ್ನು ಮೀರಿಸುವವರಿಲ್ಲ. ಆತನ ಅದ್ಭುತ ಕವಿತಾ ಶಕ್ತಿ ಎಲ್ಲ ಕೊರತೆಗಳನ್ನು ಗೌಣ ಮಾಡಿ ಮನಸ್ಸನ್ನು ಸೂರೆಗೊಳ್ಳುತ್ತದೆ. ಇಡೀ ಸಂಸ್ಕೃತ ಸಾಹಿತ್ಯದಲ್ಲೇ ಅತ್ಯಂತ ರಮ್ಯವೆನಿಸಿಕೊಂಡಿರುವ ಶಾಕುಂತಲ ನಾಟಕದ ಚತುರ್ಥಾಂಕದ ಶ್ಲೋಕ ಚತುಷ್ಟಯದಲ್ಲಿ ಕಾಳಿದಾಸ ಕಣ್ವರಿಗೆ ತನ್ನ ಸಾಕುಮಗಳಾದ ಶಕುಂತಲೆಯನ್ನು ಗಂಡನ ಮನೆಗೆ ಕಳುಹಿಸುವಾಗ ಉಂಟಾದ ಶೋಕವನ್ನು ವರ್ಣಿಸುತ್ತಾನೆ. ಮುನಿಗಳಿಗೆ ಇಷ್ಟು ನೋವಾದಾಗ ಗೃಹಸ್ಥರ ಪಾಡೇನು? ಸೂಚನೆ ವರ್ಣನೆಗಿಂತ ಹೆಚ್ಚು ಪ್ರಭಾವಿಯೆಂಬುದು ತಿಳಿಯುತ್ತದೆ. ಶಕುಂತಲೆ ತನ್ನ ಪ್ರಿಯಜನರಿಗೆ ಮುದ್ದಿನ ಜಿಂಕೆ, ಗಿಡಗಳಿಗೆ

ವಿದಾಯ ಹೇಳುವ ದುಃಖ ಎಲ್ಲಾ ಹಂಗಳೆಯರದು. ನಿತ್ಯದ ಅನುಭವವನ್ನು ಹೃದಯಂಗಮವಾಗಿ ವರ್ಣಿಸಿದಾಗ ಕಲೆಯು ನಿತ್ಯನೂತನತೆಯನ್ನು ಸ್ಥಾಪಿಸಿದಂತಾಗುತ್ತದೆ. ಅಂದಿನ ನಾಟಕದ ಜೀವಾಳ ರಸಪ್ರಕ್ರಿಯೆಯಲ್ಲಿದ್ದಿತು. ರಸಸೃಷ್ಟಿಯಲ್ಲಿ ಕಾಳಿದಾಸ ಪ್ರಮುಖನಾಗಿದ್ದಾನೆ. ಪ್ರೇಮಕ್ಕಿಂತ ವಿರಹವೇ ರಮ್ಯವೆಂದು ಕಾಳಿದಾಸ ನಾಟಕಗಳಲ್ಲಿ ಪ್ರತಿಪಾದನೆ ಮಾಡಿದಂತಿದೆ.

ಕಾಳಿದಾಸನ ಅಭಿಜ್ಞಾನ ಶಾಕುಂತಲೆ ನಾಟಕವನ್ನು ಸಣ್ಣಕತೆಗಳನ್ನಾಗಿ ಮಾಡಿಕೊಂಡು ಅನೇಕ ಕವಿಗಳು ಬರೆದಿದ್ದಾರೆ.

**ಪುರಾಣಗಳಲ್ಲಿ ಶಾಕುಂತಲೆಯ ಕಥೆ**

ದುಷ್ಯಂತ-ಶಕುಂತಲೆಯರ ಈ ಕಥೆಯು ಪುರಾಣಕಾಲದಲ್ಲಿ ತುಂಬಾ ಪ್ರಚಲಿತವಿದ್ದಂತೆ ಕಾಣುತ್ತದೆ. ಮಹಾಭಾರತದಲ್ಲಿ ಅಲ್ಲದೆ, ಪದ್ಮಪುರಾಣಗಳಲ್ಲಿ ಈ ಕಥೆಯು ಬರುತ್ತದೆ. ಪದ್ಮಪುರಾಣದ ಬಂಗಾಳೀ ಪಾಠವನ್ನು ಬಿಟ್ಟು ಇನ್ನಿತರ ಪುರಾಣಗಳಲ್ಲಿ ಈ ಕಥೆಯು ಸ್ವಲ್ಪ ಹೆಚ್ಚುಕಡಿಮೆ ಮಹಾಭಾರತದಲ್ಲಿದ್ದಂತೆಯೇ ಇದೆ. ಆದರೆ ಪದ್ಮಪುರಾಣದ ಬಂಗಾಳೀ ಪಾಠದ ಕಥೆಯು ಮಾತ್ರ ಅಭಿಜ್ಞಾನ ಶಾಕುಂತಲ ನಾಟಕ ಕಥೆ ಹೆಚ್ಚು ಹೋಲುತ್ತದೆ. ನಾಟಕದಲ್ಲಿ ಬರುವ ಪ್ರಿಯಂವದೆ, ಅನಸೂಯೆ ಎಂಬ ಗೆಳತಿಯರ ಪಾತ್ರಗಳು, ದೂರ್ವಾಸರ ಶಾಪ, ಉಂಗುರ ಕಳೆಯುವುದು, ದೇವವಾಣಿ ಕಥೆ ಮುಗಿಯದೆ ಶಕುಂತಲೆಯ ಪರಿತ್ಯಾಗ, ಮೇನಕೆ ಅವಳನ್ನು ಎತ್ತಿಕೊಂಡು ಹೋಗುವುದು, ಉಂಗುರ ದೊರೆತ ನೆನಪಾಗುವುದು, ಮಾರೀಚರ ಆಶ್ರಮದಲ್ಲಿ ಮತ್ತೆ ಸಮಾಗಮ ಈ ಎಲ್ಲ ಘಟನೆಗಳೂ ಪದ್ಮಪುರಾಣದ ಬಂಗಾಳೀ ಪಾಠದಲ್ಲಿ ಬಂದಿವೆ. ಈ ಎಲ್ಲಾ ಘಟನೆಗಳನ್ನು ಪದ್ಮಪುರಾಣ ಕರ್ತನು ಕಲ್ಪಿಸಿ ಮಹಾಭಾರತದ ಕಥೆಗೆ ಜೋಡಿಸಿ ಶಕುಂತಲೆಯ ಕಥೆಯನ್ನು ವಿಸ್ತರಿಸಿದನೋ ಅಥವಾ ಪದ್ಮಪುರಾಣದ ಈ ಭಾಗವು ಸಂಕ್ಷಿಪ್ತವಾಗಿದ್ದು ಕಾಳಿದಾಸನ ನಾಟಕವನ್ನು ಓದಿದ ಯಾರೋ ನಾಟಕದಲ್ಲಿ ಕಾಲಿದಾಸನು ಕಲ್ಪಿಸಿದ ಈ ಘಟನೆಗಳನ್ನು ಪುರಾಣದಲ್ಲಿ ಸೇರಿಸಿದರೋ ಎಂಬುದು ವಿಚಾರಾರ್ಹವಾದ ವಿಷಯವಾಗಿದೆ. ದುಷ್ಯಂತ-ಶಕುಂತಲೆಯರ ಕಥೆಯು ಮಹಾಭಾರತವಲ್ಲದೆ ಇನ್ನೂ ಕೆಲವು ಪುರಾಣಗಳಲ್ಲಿ ಬಂದಿದ್ದು ಅಲ್ಲಿ ಎಲ್ಲಿಯೂ ಈ ಹೊಸ ಘಟನೆಗಳ ಉಲ್ಲೇಖವಿಲ್ಲ.

ಪದ್ಮಪುರಾಣ ಕರ್ತನು ಇಷ್ಟೆಲ್ಲ ಘಟನೆಗಳನ್ನು ಕಲ್ಪಿಸುವ ಅಗತ್ಯವಿಲ್ಲ. ನಾಟಕ ಕರ್ತನಿಗೆ ನಾಟಕವನ್ನು ಪರಿಣಾಮಕಾರಿಯಾಗಿ ಮಾಡಲು ಹೊಸ ಪಾತ್ರ ಮತ್ತು ಘಟನೆಗಳನ್ನು ಕಲ್ಪಿಸುವ ಅಗತ್ಯವೂ ಸ್ವಾತಂತ್ರ್ಯವೂ ಇರುತ್ತದೆ. ಆದುದರಿಂದ ಕಾಳಿದಾಸನ ನಾಟಕವನ್ನು ಓದಿದ ಯಾರೋ ಒಬ್ಬರು ಪದ್ಮಪುರಾಣದ ಕಥೆಗೆ ಈ ಹೊಸ ಅಂಶಗಳನ್ನು ಸೇರಿಸಿದರು ಎಂದು ಹೇಳುವುದೇ ಸೂಕ್ತವು. ಪದ್ಮಪುರಾಣದ ಬಂಗಾಳೀ ಪಾಠವನ್ನು ಬಿಟ್ಟು ಇನ್ನಿತರ ಪದ್ಮಪುರಾಣದ ಪಾಠಗಳಲ್ಲಿ ಈ ಕಥೆಯಿಲ್ಲದಿರುವುದು ಗಮನಾರ್ಹ. ನಾಟಕದ ಪಾಠವನ್ನು ಬಹುಮಟ್ಟಿಗೆ ಅನುಸರಿಸಿದ್ದರೂ ಒಂದೆರಡು ಅಂಶಗಳಲ್ಲಿ ಈ ಪ್ರಕ್ಷೇಪಕರ್ತನು ವ್ಯತ್ಯಾಸಗಳನ್ನು ಮಾಡಿದ್ದಾನೆ. ಉಂಗುರವು

ಶಚೀತೀರ್ಥದಲ್ಲಿ ಕಳೆಯುವುದಿಲ್ಲ, ಸರಸ್ವತೀ ನದಿಯಲ್ಲಿ ಕಳೆಯುವುದು. ಶಕುಂತಲೆಯ ಬೆರಳಿನಿಂದ ಜಾರಿ ಬೀಳುವುದಿಲ್ಲ, ಆದರೆ ಶಕುಂತಲೆಯು ಸ್ನಾನಕ್ಕೆ ಇಳಿಯುವಾಗ ಪ್ರಿಯಂವದೆಗೆ ಕೊಡುವಳು. ಅವಳು ಕಳೆದುಕೊಳ್ಳುವಳು. ಆದರೆ ಶಕುಂತಲೆಗೆ ತಿಳಿಸುವುದಿಲ್ಲ. ಮಗನ ಗುರುತನ್ನು ಮಾರೀಚರು ಹೇಳುವರು. ಪ್ರಕ್ಷೇಪಕರ್ತನ ಈ ಒಂದೆರಡು ಬದಲಾವಣೆಗಳನ್ನು ನೋಡಬಹುದು.

**ಜಾತಕದ ಕಥೆ**

ಕಷ್ಠವಾಹನ ಜಾತಕ(ಕಾಠ್ಠವಾಹನ ಅಥವಾ ಕಾಠ್ಠಹಾರಿ ಜಾತಕ) ಎಂಬ ಬೌದ್ಧ ಜಾತಕದ ಕಥೆಯಲ್ಲಿಯೂ ಶಾಕುಂತಲದ ಕಥೆಯನ್ನು ಹೋಲುವ ಕೆಲವು ಅಂಶಗಳಿವೆ. “ವಾರಾಣಸಿಯ ಬ್ರಹ್ಮದತ್ತನೆಂಬ ರಾಜನು ಒಂದು ದಿನ ಊರಮುಂದಿನ ತೋಟದಲ್ಲಿ ವಿಹರಿಸುತ್ತಿದ್ದಾಗ ಉಲ್ಲಾಸದಿಂದ ಹಾಡುತ್ತ ಕಟ್ಟಿಗೆ ಕಡಿಯುತ್ತಿದ್ದ ಓರ್ವ ಕನ್ನಿಕೆಯನ್ನು ಕಂಡು ಮೋಹಿಸುವನು. ಅವಳು ಗರ್ಭವತಿಯಾಗುವಳು. ಅವಳಿಗೆ ಒಂದು ಉಂಗುರವನ್ನು ಕೊಟ್ಟು ಹೆಣ್ಣಾದರೆ ಇದನ್ನು ಮಾರಿ ವೆಚ್ಚ ಮಾಡಿಕೋ ಗಂಡುಮಗುವಾದರೆ ಈ ಉಂಗುರದ ಗುರುತು ತೋರಿಸಿ ನನ್ನಲ್ಲಿಗೆ ತಾ ಎಂದು ಹೇಳುವನು. ಗಂಡುಮಗುವಾಗುವುದು. ಅವನಲ್ಲಿಗೆ ಕರೆದುಕೊಂಡು ಹೋದಾಗ ರಾಜನಿಗೆ ನೆನಪಿದ್ದರೂ ಅರಿಯದವನಂತೆ ನಟಿಸುವನು. ಉಂಗುರವನ್ನು ತೋರಿಸಿದರೂ ಗುರುತು ಹಿಡಿಯುವುದಿಲ್ಲ. ಆಗ ತಾಯಿಯು ಮಗುವನ್ನು ಆಕಾಶದಲ್ಲಿ ತೂರುವಳು. ಅಂತರಿಕ್ಷದಲ್ಲಿ ಮಗು ಪದ್ಮಾಸನದಲ್ಲಿ ಕುಳಿತುಕೊಳ್ಳುವುದು. ಆಗ ಬೋಧಿಸತ್ವನು ಎಂದು ಗೊತ್ತಾಗಿ ಅರಸನು ಸತಿ–ಪುತ್ರರನ್ನು ಸ್ವೀಕರಿಸುವನು. ಎರಡು ಅಂಶಗಳಲ್ಲಿ ಈ ಕಥೆಗೂ ಶಕುಂತಲೆಯ ಕಥೆಗೂ ಹೋಲಿಕೆಯಿದೆ.”[೪] ರಾಜನು ಓರ್ವ ಕನ್ನಿಕೆಯನ್ನು ಮೋಹಿಸಿ, ಮದುವೆಯಾಗಿ, ಅವಳು ಮಗುವನ್ನು ಪಡೆದು ಬಂದಾಗ ನೆನಪಿಲ್ಲದವನಂತೆ ನಟಿಸಿ ಪರಿತ್ಯಜಿಸಲು ಪ್ರಯತ್ನಿಸುವುದು ಮತ್ತು ದೈವೀ ಸೂಚನೆಯಂತೆ ಸ್ವೀಕರಿಸುವುದು ಒಂದು ಅಂಶ. ಇದು ಮಹಾಭಾರತದ ಕಥೆಯನ್ನು ಹೋಲುತ್ತದೆ. ಉಂಗುರವನ್ನು ಕೊಡುವುದು ಎರಡನೆಯ ಅಂಶ. ಆದರೆ ಆ ಉಂಗುರದ ಪ್ರಯೋಜನ ಏನೂ ಆಗಿಲ್ಲ. ಉಂಗುರವನ್ನು ಕೊಟ್ಟ ಅಂಶವನ್ನು ಮಾತ್ರ ಈ ಜಾತಕದಿಂದ ತೆಗೆದುಕೊಂಡು ಅದನ್ನು ಪರಿಣಾಮಕಾರಿಯಾಗಿ ಕಾಳಿದಾಸನು ಉಪಯೋಗಿಸಿಕೊಂಡಿರಬಹುದು ಎಂದು ಕೆಲವು ವಿದ್ವಾಂಸರು ಊಹಿಸುವರು. ಆದರೆ ಗುರುತಿನ ಉಂಗುರ ಅಥವಾ ಆಭರಣಗಳನ್ನು ಕೊಡುವುದು ಅನೇಕ ಪ್ರಾಚೀನ ಕಥೆಗಳಲ್ಲಿ ಬಂದಿದೆ.

**ಜೈನ ಸಂಪ್ರದಾಯದ ಕಥೆ**

ಜೈನ ಸಂಪ್ರದಾಯದ ಪಾರ್ಶ್ವನಾಥ ಚರಿತ್ರೆಯಲ್ಲಿಯೂ ಶಾಕುಂತಲ ನಾಟಕದ ಕಥೆಯನ್ನು ಹೋಲುವ ಒಂದು ಕಥೆಯಿದೆ. “ಸುರಪುರದ ರಾಜ ಸುವರ್ಣಬಾಹುವು ಒಂದು ದಿನ ಒಂದು ಹೊಸ ಕುದುರೆಯನ್ನೇರಿ ವಿಹಾರಕ್ಕೆ ಹೊರಡುವನು. ಅದು ಅವನನ್ನು ಯಾವುದೋ ಒಂದು ಅಪರಿಚಿತ ಸರೋವರಕ್ಕೆ ಒಯ್ಯುವುದು. ಅದರ ಹತ್ತಿರ ಒಂದು ಋಷ್ಯಾಶ್ರಮವನ್ನು ಕಂಡು ಅವನ್ನು

ಪ್ರವೇಶಿಸುವನು. ಅಲ್ಲಿ ಗೆಳತಿಯರೊಡನೆ ಲತೆಗಳಿಗೆ ನೀರೆರೆಯುತ್ತಿದ್ದ ಕನ್ನಿಕೆಯೋರ್ವಳನ್ನು ಕಂಡು ಮರೆಯಾಗಿ ನೋಡುತ್ತ ನಿಲ್ಲುವನು. ಅಷ್ಟರಲ್ಲಿ ಭ್ರಮರವೊಂದು ಅವಳ ಮುಖಕ್ಕೆರಗುವುದು. ಸಖಿಯರು ರಾಜ ಸುವರ್ಣಬಾಹುವಿಗೆ ಮೊರೆಯಿಡು ಎನ್ನುವರು.

ಕೂಡಲೇ ಮರೆಗೆ ನಿಂತ ಅವನು ಹೊರಗೆ ಬರುವನು. ಪರಸ್ಪರ ನೋಡಿ ಪರಿಚಯ ನಡೆಯುವಷ್ಟರಲ್ಲಿ ಆಶ್ರಮದ ಕುಲಪತಿಗಳಾದ ಗಾಲವರು ಬಂದು ಅವರೀರ್ವರ ವಿವಾಹವನ್ನು ಮಾಡುವರು. ಇದೇ ಸಮಯಕ್ಕೆ ಪದ್ಮೆಯ ತಮ್ಮನು ಬಂದು ಅವನಿಗೆ ವಿದ್ಯಾಧರ ರಾಜ್ಯದ ಆಧಿಪತ್ಯವನ್ನು ವಹಿಸಿಕೊಳ್ಳಲು ಕೇಳಿಕೊಳ್ಳುವನು."೨ ಅದರಂತೆ ಅಲ್ಲಿಗೆ ಹೋಗಿ ಕೆಲಕಾಲವಾದ ನಂತರ ಪುನಃ ತನ್ನ ನಗರಕ್ಕೆ ಸೇರುವನು. ಈ ಕಥೆಯಲ್ಲಿ ಕಾಳಿದಾಸನ ನಾಟಕದ ಮೊದಲನೆಯ ಅಂಕದ ದೃಶ್ಯಗಳ ಹೋಲಿಕೆಯಿದೆ. ಆದರೆ ಗಾಲವರು ಬಂದು ಮದುವೆ ಮಾಡಿಸಿದ ಕಥೆ ಅಲ್ಲಿಗೇ ಮುಗಿದುಹೋಗುತ್ತದೆ.

ಮಹಾಭಾರತದ ಶಕುಂತಲೋಪಾಖ್ಯಾನ ಮತ್ತು ಮೇಲೆ ವಿವರಿಸಿದ ಇನ್ನಿತರ ಪುರಾಣಾದಿಗಳಲ್ಲಿ ಬಂದ ದುಷ್ಯಂತ-ಶಕುಂತಲೆಯರ ಕಥೆಯನ್ನು ಓದಿ ಈ ಕಥೆಯನ್ನು ಕಾಳಿದಾಸನು ತನ್ನ ನಾಟಕದಲ್ಲಿ ಚಿತ್ರಿಸಿರುವುದನ್ನು ನೋಡಿದರೆ ಕಾಳಿದಾಸನ ನಾಟಕ ರಚನಾಕೌಶಲ್ಯವು ವ್ಯಕ್ತವಾಗುವುದು. ಹೊಸ ಪಾತ್ರಗಳು, ಹೊಸ ಘಟನೆಗಳು, ಸಮಸ್ಯೆ ಉದ್ಭವಿಸುವ ಮತ್ತು ಪರಿಹಾರವಾಗುವ ಹೊಸ ರೀತಿ, ದುಷ್ಯಂತ-ಶಕುಂತಲೆಯರ ಸ್ವಭಾವ, ನಡವಳಿಕೆಗಳಲ್ಲಿ ಉದಾತ್ತವಾದ ಹಾಗೂ ಕಲಾತ್ಮಕವಾದ ಬದಲಾವಣೆಗಳು ಈ ನಾಟಕವನ್ನು ವಿಶ್ವವಿಖ್ಯಾತವಾಗಿ ಮಾಡಿವೆ.

ಸಾಹಿತ್ಯವು ಲಲಿತಕಲೆಗಳಲ್ಲಿ ಒಂದಾಗಿದೆ. ಸಾಹಿತ್ಯದಲ್ಲಿ ಕಥೆ, ಕಾದಂಬರಿ, ಕಾವ್ಯ ನಾಟಕಗಳೆಂದು ಹಲವು ಪ್ರಕಾರಗಳಿವೆ. ಪ್ರಾಚೀನಕಾಲದಲ್ಲಿ ಸಾಹಿತ್ಯವನ್ನು 'ಕಾವ್ಯ' ಎಂದೇ ಕರೆಯುತ್ತಿದ್ದರು. ಕಾವ್ಯಗಳಲ್ಲೆಲ್ಲ ನಾಟಕವೇ ಬಹಳ ರಮ್ಯವಾದದ್ದು ಎಂದು ಬಣಿಸಲ್ಪಟ್ಟಿದೆ. ಯಾಕೆಂದರೆ ನಾಟಕದಲ್ಲಿ ಎಲ್ಲ ಕಲೆಗಳ ಸಮಾವೇಶವಾಗುತ್ತದೆ. ನಾಟಕವು ಕಿವಿಯಿಂದ ಕೇಳುವುದಿಷ್ಟೇ ಅಲ್ಲ, ಕಣ್ಣಿನಿಂದ ನೋಡುವುದೂ ಆಗಿರುವುದರಿಂದ ಅದು ರಸಿಕ ಜನರ ಮನಸ್ಸನ್ನು ಆನಂದಗೊಳಿಸುತ್ತದೆ. ಈ ಕಾರಣದಿಂದಲೇ ಕಾಳಿದಾಸನು 'ನಾಟಕವು ಭಿನ್ನರುಚಿಗಳ ಜನರಿಗೆ ಒಂದು ಸಮಾರಾಧನೆಯಾಗಿದೆ. ಎಂದು ಸಾರಿದ್ದಾನೆ. ರಸಿಕನ ದೃಷ್ಟಿಯಿಂದ ನಾಟಕವು ದುಷ್ಕರವಾದ ಸಾಹಿತ್ಯ ಪ್ರಕಾರವಾಗಿದೆ. ಯಾಕೆಂದರೆ ಕಥೆ, ಕಾದಂಬರಿ, ಮಹಾಕಾವ್ಯಗಳ ರಚನೆಗಿಂತಲೂ ನಾಟಕವನ್ನು ರಚಿಸುವುದು ಬಹಳ ಕಠಿಣವಾದ ಕೆಲಸವಾಗಿದೆ. ಆದುದರಿಂದ ಆಗಿನ ಕಾಲದಲ್ಲಿ ಕವಿಗಳು ತಮ್ಮ ಉಳಿದ ಕೃತಿಗಳನ್ನು ಮೊದಲು ಮುಗಿಸಿ ಅನಂತರ ತಮ್ಮ ಪ್ರತಿಭೆ ಕೊನಗೊಂಡಿತೆಂದು ಅವರು ತಿಳಿಯುತ್ತಿದ್ದರು. ಆದುದರಿಂದಲೇ 'ನಾಟಕಾಂತಂ ಕವಿತ್ವಂ' ಎಂಬ ನಾಣ್ಣುಡಿ ಸಂಸ್ಕೃತದಲ್ಲಿ ರೂಢಿಯಾಗಿದೆ.

ಲೇಖಕರು ಇಲ್ಲಿ ಸಾಂಪ್ರದಾಯಿಕವಾದ ರೀತಿಯನ್ನು ಬಿಟ್ಟು ತಮ್ಮದೇ ಆದ ಒಂದು ಹೊಸ ದೃಷ್ಟಿಕೋನವನ್ನು ಉಪಯೋಗಿಸಿದ್ದಾರೆ. ದೂರ್ವಾಸರ ಶಾಪದಿಂದ ದೈವವು ಶಕುಂತಲೆಯ

ಬಾಳಿನಲ್ಲಿ ದುರಂತ ನಾಟಕವನ್ನು ಆಡುತ್ತದೆ. ಮುಂದೆ ಅದೇ ದೈವವೇ ಶಕುಂತಲೆ ದುಷ್ಯಂತರನ್ನು ಕೂಡಿಸುತ್ತದೆ. ಈ ದೈವದಾಟಕ್ಕೆ ದುಷ್ಯಂತನು ಕೊಟ್ಟ ಉಂಗುರವು ಸಾಧನವಾಗುವುದರಿಂದ ಶಕುಂತಲೆಯು ಅದನ್ನು ಅಂದರೆ ಉಂಗುರವನ್ನು ಮತ್ತೆ ಸ್ವೀಕರಿಸುವುದಿಲ್ಲ. ಈ ಉಂಗುರದ ಕಾರಣದಿಂದಲೇ ಈ ನಾಟಕಕ್ಕೆ 'ಅಭಿಜ್ಞಾನ ಶಾಕುಂತಲ' ಎಂಬ ಹೆಸರು ಬಂದಿದೆ. ಅಭಿಜ್ಞಾನ ಎಂದರೆ ಗುರುತಿಸಲ್ಪಟ್ಟ ಶಾಕುಂತಲ ಎಂದರೆ ಶಕುಂತಲೆಯನ್ನು ಕುರಿತು ಬರೆದ ಕೃತಿ ಅಭಿಜ್ಞಾನ ಶಾಕುಂತಲ ಎಂದರೆ 'ಒಂದು ವಸ್ತುವಿನ ಮುಖಾಂತರ ನೆನಪು ಮಾಡಿಕೊಳ್ಳಲ್ಪಟ್ಟ ಶಕುಂತಲೆಯ ಕಥೆಯನ್ನು ಒಳಗೊಂಡುದು'. ಹೀಗೆ ದೂರ್ವಾಸರ ಶಾಪದ ಸಫಲತೆಗೆ ಕಾರಣವಾದ ಈ ಉಂಗುರವೂ ಈ ನಾಟಕದಲ್ಲಿ ದುರಂತವಾದ ಪಾತ್ರವನ್ನು ಚಿತ್ರಿಸುತ್ತದೆ.

**ಕ.ನರಸಿಂಹಶಾಸ್ತ್ರೀ–ಶಕುಂತಲೆ**

ಶಕುಂತಲೆ ಎಂಬ ಕಥೆಯನ್ನು ಕ.ನರಸಿಂಹಶಾಸ್ತ್ರೀ ಅವರು ಕಾಳಿದಾಸನ ಸಂಸ್ಕೃತ ಭಾಷೆಯಿಂದ ರಚಿತವಾದ ಅಭಿಜ್ಞಾನ ಶಾಕುಂತಲ ನಾಟಕದ ಪ್ರೇರಣೆ ಪಡೆದು ಬರೆದಿದ್ದಾರೆ. ಈ ಸಣ್ಣಕತೆಯಿಂದ ಪ್ರಾಥಮಿಕ ಶಾಲೆಯ ಮಕ್ಕಳಿಗೆ ಹಾಗೂ ಪ್ರೌಢಶಾಲಾ ಮಕ್ಕಳಿಗೆ ಅನುಕೂಲವಾಗುವಂತೆ ಭಾಷೆ ಬಳಸಿಕೊಂಡು ಬರೆದಿದ್ದಾರೆ. ಈ ಕತೆಯನ್ನು ೭(ಏಳು) ಭಾಗಗಳನ್ನಾಗಿ ವಿಂಗಡಿಸಿಕೊಂಡು ಕಥಾವಸ್ತುವಿಗೆ ಧಕ್ಕೆಯಾಗದಂತೆ ತಮ್ಮ ಸೃಜನಶೀಲತೆಯಿಂದ ಶಕುಂತಲೆ ಕಥೆಯನ್ನು ೧೯೪೪ರಲ್ಲಿ ಬರೆದರು. ಆಗಿನ ಸಾಂಸ್ಕೃತಿಕ ಅಥವಾ ಸಾಮಾಜಿಕ ಸನ್ನಿವೇಶಕ್ಕೆ ಅನುಗುಣವಾಗಿ ತಮ್ಮ ಬರವಣಿಗೆಯಲ್ಲಿ ಅಭಿವ್ಯಕ್ತಿಪಡಿಸಿದ್ದಾರೆ. ಪ್ರಮುಖವಾದ ವಿಭಾಗಗಳನ್ನು ಈ ಕೆಳಗಿನಂತೆ ವಿಂಗಡಿಸಲಾಗಿದೆ. ಪ್ರೇಮಾಂಕುರ, ಗಾಂಧರ್ವವಿವಾಹ, ದೂರ್ವಾಸರ ಶಾಪ, ಪತಿಯ ಗೃಹಕ್ಕೆ ಪ್ರಯಾಣ, ಪತಿಯ ತಿರಸ್ಕಾರ, ಮಾಯದ ಉಂಗುರ, ಸತಿಪತಿಯರ ಪುನರ್ಮಿಲನ,

**ಪ್ರೇಮಾಂಕುರ**

ಶಕುಂತಲೆ ಸಣ್ಣಕಥೆಯ ಪ್ರಾರಂಭವೇ ಈ ಕೆಳಗಿನಂತಿದೆ.

"ಬೆಳಗಿನ ಹೊತ್ತು ಶಕುಂತಳೆಯು ಹೂ–ಗಿಡಗಳಿಗಳಿಗೆ ನೀರೆರೆಯುತ್ತಿದ್ದಾಳೆ. ಗಿಡಗಳೆಂದರೆ ಅವಳಿಗೆ ಬಹಳ ಅಕ್ಕರೆ. ನೀರೆರೆಯದೆ ಅವಳು ನೀರು ಕುಡಿಯಳು. ಅಲಂಕಾರ ಪ್ರಿಯಳಾದರೂ ಅವುಗಳ ಹೂ ಚಿಗುರುಗಳನ್ನು ಕೊಯ್ಯಳು. ಅವು ಮೊದಲು ಹೂ ಬಿಟ್ಟಾಗ ಅವಳ ಸಂಭ್ರಮವೇ ಸಂಭ್ರಮ."[೬]

ಹೀಗೆ ಸರಳವಾಗಿ ಆಡುಭಾಷೆಯಲ್ಲಿ ಬರೆದಿದ್ದಾರೆ. ನೇರವಾಗಿ ಶಕುಂತಲೆಯು ಕಣ್ವರಾಶ್ರಮದಲ್ಲಿ ದಿನನಿತ್ಯ ಮಾಡುವ ಕಾಯಕವನ್ನು ವರ್ಣಿಸಿದ್ದಾರೆ. ಶಕುಂತಲೆಯ ಮನಸ್ಥಿತಿಯನ್ನು ಓದುಗರಿಗೆ ಸುಲಭವಾಗಿ ಅರ್ಥವಾಗುವಂತೆ ವಿವರಿಸಿದ್ದಾರೆ. ಕಾಳಿದಾಸನ ಅಭಿಜ್ಞಾನ ಶಾಕುಂತಲ ನಾಟಕದ ಕಥಾವಸ್ತುವನ್ನು ತಾವು ಗ್ರಹಿಸಿಕೊಂಡ ಬಗೆಯನ್ನು ಓದುಗರಿಗೆ ಮುದ ನೀಡುವಂತೆ ಕಥೆಯನ್ನು

ಬರೆದಿದ್ದಾರೆ. ಸ್ವಚ್ಛಂದವಾದ ಶಕುಂತಲೆಯ ಮನಸ್ಸನ್ನು ಕಾಳಿದಾಸ ವರ್ಣಿಸಿದ ಬಗೆಯನ್ನು ಕ.ನರಸಿಂಹಶಾಸ್ತ್ರಿಯವರು ೧೦, ೧೨ ವರ್ಷದ ಮಕ್ಕಳಿಗೆ ಅರ್ಥವಾಗುವಂತೆ ಬರೆದಿದ್ದಾರೆ. ನಾಟಕಕ್ಕಿಂತ ಈ ಕತೆಯು ಭಿನ್ನವಾಗಿದೆ. ನಾಟಕದಲ್ಲಿ ಪ್ರಾರಂಭವಾಗುವುದು ದುಷ್ಯಂತನು ಭೇಟೆಯಾಡುವ ದೃಶ್ಯದಿಂದ. ಆದರೆ ಇಲ್ಲಿ ಕಥೆಗಾರರು ನೇರವಾಗಿ ಶಕುಂತಲೆಯನ್ನು ಋಷಿಯ ಆಶ್ರಮದ ಪರಿಸರವನ್ನು ಚಿತ್ರಿಸಿದ್ದಾರೆ. ಮುಖ್ಯವಾಗಿ ಕಾಳಿದಾಸನ ಅಭಿಜ್ಞಾನ ಶಾಕುಂತಲ ನಾಟಕವು ಏಳು ಅಂಕಗಳಿಂದ ಕೂಡಿದೆ. ನಾಟಕದಲ್ಲಿನ ಅಂಕಗಳಂತೆ ಲೇಖಕರು ತಮ್ಮ ಕಥೆಯಲ್ಲಿ ಏಳು ಭಾಗಗಳನ್ನು ಮಾಡಿಕೊಂಡಿದ್ದಾರೆ. ಒಂದನೇ ಅಂಕ ಮುಗಿದಂತೆ ತಮ್ಮ ಕಥೆಯನ್ನು ಮುಗಿಸಿದ್ದಾರೆ.

ಮೊದಲಿನ ಅಂಕ ಕೊನೆಗೊಂಡಂತೆ ಈ ಕಥೆಯನ್ನು ಲೇಖಕರು ನಿಲ್ಲಿಸಿದ್ದಾರೆ. ಆದರೆ ಸರಳವಾದ ಸಂಕುಚಿತವಾದ ಬರವಣಿಗೆಯಾಗಿದೆ. ಕೆಲವೊಂದು ಸನ್ನಿವೇಶಗಳನ್ನು ವರ್ಣಿಸಿಲ್ಲ. ನಾಟಕದಲ್ಲಿ ಬಂದಿರದ ಕೆಲವು ಸ್ವಂತ ಮಾತುಗಳನ್ನು ಬಳಸಿದ್ದಾರೆ.

ಉದಾಹರಣೆಗೆ: "ಇವನನ್ನು ನೋಡಿದಾಗಿನಿಂದ ಶಕುಂತಳೆಯ ಮನಸ್ಸೂ ಬದಲಾಯಿಸಿತ್ತು. ಪ್ರೇಮದ ಬಗೆ ಮೂಡಿತ್ತು. ಭಯ ನಾಚಿಕೆಗಳು ಅಂಕುರಿಸಿದ್ದವು. ಅವಳು ಏನೂ ಮಾತನಾಡದೆ ಪರವಶಳಾಗಿದ್ದಳು. ಇದನ್ನು ನೋಡಿ ಪ್ರಿಯವಂದೆಯು "ತಂದೆ ಈಗ ಇಲ್ಲಿ ಇದ್ದಿದ್ದರೆ" ಎಂದು ಭಾವಗರ್ಭಿತವಾಗಿ ನುಡಿದಳು. 'ಏನಾಗುತಿತ್ತು' ಎಂದು ಶಕುಂತಳೆಯೂ ದಿಟ್ಟತನದಿಂದ ಉತ್ತರ ಕೊಟ್ಟಳು."[೭]

ಈ ಮೇಲಿನ ಮಾತುಗಳು ಕೆಲವೊಂದು ಕನ್ನಡಕ್ಕೆ ಅನುವಾದಗೊಂಡಿರುವ ಅಭಿಜ್ಞಾನ ಶಾಕುಂತಲ ನಾಟಕದಲ್ಲಿ ಬಳಸಿಲ್ಲ. ಕಾರಣ ಇಲ್ಲಿ ಲೇಖಕನ ಚಾತುರ್ಯವನ್ನು ನೋಡಬಹುದಾಗಿದೆ. ಸರಳವಾಗಿ ಬಳಸಿರುವ ಭಾಷೆಯಿಂದ ಸಂಪೂರ್ಣ ಶಾಕುಂತಲೆಯ ಬಗ್ಗೆ ತಿಳಿಯದಿದ್ದರೂ ಸಹ ಸ್ವಲ್ಪ ಮಟ್ಟಿಗಾದರೂ ಮೊದಲಿಗೆ ಶಕುಂತಲೆಯನ್ನು ಅರ್ಥ ಮಾಡಿಕೊಳ್ಳಬಹುದಾಗಿದೆ. ನಾಟಕವನ್ನು ಓದಿ ತಮ್ಮ ಹಿಡಿತಕ್ಕೆ ತಕ್ಕಂತೆ, ಓದುಗರಿಗೆ ಪ್ರಿಯವಾಗುವಂತೆ, ಅರ್ಥವಾಗುವಂತೆ ಮೊದಲಿನ ಅಂಕವನ್ನು ಪ್ರಥಮ ಪ್ರೇಮಾಂಕುರವೆಂದು ಹೆಸರಿಸಿದ್ದಾರೆ. ಕಾರಣ ಶಕುಂತಲೆಗೂ ದುಷ್ಯಂತನಿಗೆ ಪ್ರೇಮಾಂಕುರವಾಗುವುದು ಸೂಕ್ತವಾಗಿದೆ.

**ಗಾಂಧರ್ವ ವಿವಾಹ:** ಈ ಭಾಗದಲ್ಲಿ ವಿರೂಪಾಕ್ಷನ ಪಾತ್ರವೇ ಬರುವುದಿಲ್ಲ. ಶಕುಂತಲೆಯ ವಿರಹ, ದುಷ್ಯಂತನ ವಿರಹ, ಸಖಿಯರ ಸಹಾಯ ಇಷ್ಟನ್ನೇ ಬಳಸಿಕೊಂಡು ಸುಮಾರು ಹತ್ತು ಪುಟಗಳ ನಾಟಕದ ಬರವಣಿಗೆಯನ್ನು ಸಣ್ಣ ಕಥೆಯಲ್ಲಿ ಕೇವಲ ಎರಡು ಪುಟದಲ್ಲಿ ಬರೆದಿದ್ದಾರೆ. ಮನುಷ್ಯನ ಸಹಜಗುಣ ಸುಂದರವಾದ ಹೆಣ್ಣನ್ನು ನೋಡಿದಾಗ ಆಸೆ ಪಡುವುದು. ಅದರಂತೆ ದುಷ್ಯಂತ ಮೊದಲಿಗೆ ರಾಜ. ತಾನು ಎಷ್ಟು ಬೇಕಾದರೂ ಮದುವೆ ಆಗಬಹುದು. ಆದ್ದರಿಂದ ಈ ನಮ್ಮ ಸಖಿಗೆ ತೊಂದರೆಯಾಗಬಾರದು ಎಂದು ಪ್ರಿಯಂವದೆಯು ಕೇಳಿದಳು. ಅದಕ್ಕೆ ರಾಜನಾದವನು ಸಹ ಯಾವ ತೊಂದರೆಯೂ ಬಾರದು ಎಂದು ಹೇಳುವನು. ಹೀಗೆ ಶಕುಂತಲೆ ಮತ್ತು ದುಷ್ಯಂತರ ಪ್ರೇಮ ಒಂದಾಗಿ ಗಾಂಧರ್ವ ವಿವಾಹವಾಗುವರು.

**ಗಂಧರ್ವ ವಿವಾಹ:** ಯುವಕ ಯುವತಿಯರ ಪರಸ್ಪರ ಅನುರಾಗದಿಂದ ಉಂಟಾದ ಸಂಬಂಧ ಗಂಧರ್ವ ವಿವಾಹ ಪದ್ಧತಿ ಎನಿಸಿಕೊಂಡಿದೆ.

"ಗಂಧರ್ವ ಮದುವೆಯ ಮೊರೆಯಿಂದ
ಹಲವು ಮನ್ನೆಯರು,
ರಾಜಋಷಿ ಕನ್ಯೆಯರನು ಮದುವೆ ಆದರು, ಎಂದೂ
ಅದನು ಅವರ ತಂದೆಯರು ಸಂತಸದಿಂದ
ಅನುಮತಿಸಿ ಆಶೀರ್ವದಿಸಿದರು, ಎಂದೂ
ಹೇಳಿರುವ ಕಥೆಗಳನ್ನು ನೀನು ಕೇಳಿಲ್ಲವೇ?"[೮]

ಎಂದು ದುಷ್ಯಂತನು ಮನುವಿನ ಮಾತಿನಂತೆ ರಾಜನಿಗೆ ಮಾತ್ರ ಮೀಸಲೂ ಮೇಲೂ ಆದ ಗಾಂಧರ್ವ ವಿವಾಹದ ಆಲೋಚನೆಯನ್ನು ಹೇಳಿದ್ದಾನೆ.

**ದೂರ್ವಾಸರ ಶಾಪ:** ಆಶ್ರಮದಲ್ಲಿಯ ದಿನಗಳು ಕಳೆದವು. ರಾಜನು ಆಶ್ರಮದಲ್ಲಿ ಇರಬೇಕಾದ ಕೆಲಸವು ಮುಗಿಯಿತು. ಅವನು ಹೊರಡುವ ಮಾತನ್ನು ಎತ್ತಿದಾಗ ಶಕುಂತಲೆಯ ಅವನ ಕೈ ಹಿಡಿದು ಕಣ್ಣೀರು ಸುರಿಸಿದಳು. ದುಷ್ಯಂತನು ತನ್ನ ಹೆಸರಿನ ಉಂಗುರವನ್ನು ಅವಳ ಬೆರಳಿಗೆ ತೊಡಿಸಿ "ಇದರಲ್ಲಿರುವ ಅಕ್ಷರಗಳನ್ನು ಎಣಿಸುತ್ತಿರು. ಅದು ಮುಗಿಯುವುದರೊಳಗೆ ನಿನ್ನನ್ನು ಕರೆದುಕೊಂಡು ಹೋಗಲು ನಮ್ಮ ಜನ ಬರುತ್ತಾರೆ ಎಂದು ಸಮಾಧಾನ ಪಡಿಸಿದನು. ಶಕುಂತಲೆಯು ವ್ಯಸನದಿಂದ ರಾಜನನ್ನು ಬೀಳ್ಕೊಟ್ಟಳು. ಈ ನಡುವೆ ಒಂದು ಅಚಾತುರ್ಯವು ಸಂಘಟಿಸಿತು. ಅದೇನೆಂದರೆ ಆಶ್ರಮಕ್ಕೆ ದೂರ್ವಾಸ ಮಹರ್ಷಿಗಳು ಬಂದರು. ಅವರಿಗೆ ಮೂಗಿನ ಮೇಲೆ ಸಿಟ್ಟು. ಅವರು ಬಂದದ್ದನ್ನು ಶಕುಂತಲೆಯು ಗಮನಿಸಲಿಲ್ಲ. ಎಡಗೈ ಮೇಲೆ ಕೆನ್ನೆಯನ್ನಿಟ್ಟು ಚಿತ್ರದಲ್ಲಿ ಬರೆದಂತೆ ಕುಳಿತೇ ಇದ್ದಳು. ದೂರ್ವಾಸರಿಗೆ ಕೋಪ ಬಂತು. "ಎಲೈ ಅತಿಥಿ ತಿರಸ್ಕರಿಣಿ, ನೀನು ಯಾರನ್ನು ಕುರಿತು ಯೋಚಿಸುತ್ತಿದ್ದೀಯೋ ಅವನು ನಿನ್ನನ್ನು ಮರತೇ ಹೋಗಲಿ" ಎಂದು ಶಪಿಸಿ ಹೊರಟುಹೋದರು."[೯]

ಈ ಶಾಪದ ಮಾತು ಹೂ ಕೊಯ್ಯುತ್ತಿದ್ದ ಸಖಿಯರಿಗೆ ಕೇಳಿಸಿತು. ಪ್ರಿಯಂವದೆಯು ಓಡಿ ಬಂದು ಋಷಿಯ ಕಾಲುಗಳನ್ನು ಹಿಡಿದು "ತಿಳಿಯದೆ ಅಪರಾಧ ಮಾಡಿದಳು. ಇದು ನಮ್ಮ ಸಖಿಯ ಮೊದಲನೆಯ ತಪ್ಪು. ದಯವಿಟ್ಟು ಕ್ಷಮಿಸಬೇಕು" ಎಂದು ಬೇಡಿ ಕೊಂಡಳು. ಋಷಿಯು "ನನ್ನ ಮಾತು ತಪ್ಪತಕ್ಕದಲ್ಲ, ಆಗಲಿ ಗುರುತಿನ ಆಭರಣವನ್ನು ತೋರಿಸಿದರೆ ಶಾಪವು ಪರಿಹಾರವಾಗುವುದು" ಎಂದು ಅನುಗ್ರಹಿಸಿ ತೆರಳಿದರು. ದೂರ್ವಾಸ ಮುನಿಯು ಸತ್ಕರಿಸಲಿಲ್ಲ ಎಂಬ ಕಾರಣಕ್ಕಾಗಿ ಋಷಿಮುನಿಗಳಾದ್ದರಿಂದ ತಾಳ್ಮೆಯಿರಬೇಕಿತ್ತು. ಆದರೆ ಕಾಳಿದಾಸನು ಬರೆದ ಅಭಿಜ್ಞಾನ ಶಾಕುಂತಲ ನಾಟಕಕ್ಕೆ ಈ ಸನ್ನಿವೇಶವೇ ಅತ್ಯಂತ ಪ್ರಧಾನವಾಗಿದೆ. ಋಷಿಯು ಕೋಪಿಸಿಕೊಂಡರೆ ಮನುಷ್ಯರಲ್ಲಿ ಹೇಗೆಲ್ಲ ಆಗುತ್ತದೆ ಎಂಬುದಕ್ಕೆ ಇದೊಂದು ಉದಾಹರಣೆ

ಎನ್ನಬಹುದು. ಕಥನಕಾರರು ಶಾಕುಂತಲೆ ಕಥೆಯನ್ನು ತಮ್ಮದೇ ಶೈಲಿಯಲ್ಲಿ ಚಾಣಾಕ್ಷತನದಿಂದ ಬರೆದಿದ್ದಾರೆ. ಸುಮಾರು ಹತ್ತು ಹನ್ನೆರಡು ಪುಟವಿರುವ ನಾಟಕವನ್ನು ಓದಿ ತಾವು ಗ್ರಹಿಸಿಕೊಂಡಿದ್ದನ್ನು ಒಂದು ಪುಟದಲ್ಲಿ ಓದುಗರಿಗೆ ಹೇಳಲು ಮುಂದಾಗಿದ್ದಾರೆ. ಇದು ಅಭಿಜ್ಞಾನ ಶಾಕುಂತಲ ನಾಟಕದ ಪ್ರಮುಖವಾದ ಭಾಗವಾಗಿದೆ. ಕಾರಣ ಶಾಕುಂತಲೆ ಮತ್ತು ದುಷ್ಯಂತರಿಗೆ ವಿಸ್ಮೃತಿ ಉಂಟಾಗುವುದೇ(ಈ ಕಥನ ಭಾಗದಿಂದ) ದೂರ್ವಾಸರ ಶಾಪದಿಂದ. ಪ್ರೇಮ ಮರೆವು, ಪತಿವ್ರತೆಯ ನಿಷ್ಠೆ, ಶಕುಂತಲೆಯ ರೋದನೆ, ರಾಜನ ಘನತೆ, ಅನೇಕ ಬಗೆಯಲ್ಲಿ ತೊಳಲಾಟಗಳನ್ನು ಈ ಸಂದರ್ಭದಲ್ಲಿ ರೂಪಿಸಲಾಗಿದೆ. ಈ ಕಥೆಯಲ್ಲಿ ದೂರ್ವಾಸರ ಶಾಪದ ಭಾಗವೇ ಅತ್ಯಂತ ಮುಖ್ಯವಾಗಿದೆ.

**ಪತಿ ಗೃಹಕ್ಕೆ ಪ್ರಯಾಣ:** ಪತಿಯ ಗೃಹಕ್ಕೆ ಪ್ರಯಾಣ ಬೆಳೆಸಲು ಶಕುಂತಲೆಗೆ ಬೇಕಾದ ಅಭರಣಗಳನ್ನು ಪ್ರಕೃತಿಯೇ ಸಹಕರಿಸಿ ಎಂಬ ಮಾತು ಅತ್ಯಂತ ಅಮೂಲ್ಯವಾಗಿದೆ. ಶಕುಂತಲೆಯು ಒಂದು ಕಡೆಗೆ ದುಃಖ, ಇನ್ನೊಂದು ಕಡೆಗೆ ಸಂತೋಷ ಪಡುತ್ತಿದ್ದಳು. ಕಾರಣ ಪತಿಯನ್ನು ಕಾಣುವುದು ಸಂತೋಷವಾದರೆ, ಆಶ್ರಮ ಬಿಡುವುದು ದುಃಖ ಎಂದು ಕವಿ ವರ್ಣಿಸಿದ್ದಾರೆ. ಇದು ನಿಜ. ನಾವು ಪ್ರಸ್ತುತ ಸನ್ನಿವೇಶದಲ್ಲಿ ಇದ್ದು ಗಮನಿಸುವುದಾದರೆ ಪ್ರತಿಯೊಬ್ಬ ಮನುಷ್ಯನಿಗೂ ತನ್ನ ಜೀವಿತಾವಧಿಯಲ್ಲಿ ಒಂದು ಬಾರಿ ಇಂತಹ ಸನ್ನಿವೇಶ ಬಂದೇ ಬರುತ್ತದೆ. ಗಂಡನ ಮನೆಯಲ್ಲಿರಬೇಕಾದ ನಿಯಮಗಳನ್ನೆಲ್ಲಾ ಕಣ್ವಋಷಿಗಳು ಸಾಕುಮಗಳಾದ ಶಕುಂತಲೆಗೆ ಹೇಳಿ ಅತ್ಯಂತ ದುಃಖದಿಂದ ಕಳಿಸಿಕೊಡುವ ಸನ್ನಿವೇಶ ಈ ಕಥೆಯ ಭಾಗದಲ್ಲಿ ಕಂಡುಬರುತ್ತದೆ. ವಿಧಿಯ ಕೈವಾಡ ಎಂಬಂತೆ ಶಕುಂತಲೆಯ ಉಂಗುರ ಶಚೀನದಿಯಲ್ಲಿ ಕಳೆದುಹೋಗುತ್ತದೆ. ಅದೇ ಶಕುಂತಲೆಯ ಬದುಕಿಗೆ ಮುಂದೆ ಆಪತ್ತನ್ನು ತರುವುದು. ನದಿಯಲ್ಲಿ ಬಿದ್ದ ಉಂಗುರವನ್ನು ಮೀನು ನುಂಗಿತು. ಸರಿ ಒಂದು ವೇಳೆ ನುಂಗದೆ ಹೋಗಿದ್ದರೆ, ಆ ಉಂಗುರ ಅಲ್ಲಿಯೇ ಕೊಳೆತು ಹೋಗುತ್ತಿತ್ತು. ಆದರೆ ಇಲ್ಲಿ ಕವಿಯ ಚಾತುರ್ಯ, ಚಿಂತನೆ, ಪ್ರತಿಭೆ, ಸೃಜನಶೀಲತೆಯನ್ನು ಗಮನಿಸಬಹುದು. ಕವಿಯು ತನ್ನ ಕಥೆಗೆ ಭಂಗ ಬರದಂತೆ ಕತೆಗೆ ಒಂದು ಉತ್ತಮವಾದ ಕೊನೆ ದೊರೆಯುವಂತೆ ಬರೆದಿದ್ದಾರೆ. ತಾವು ಸೃಷ್ಟಿಸಿಕೊಂಡು ಬರೆದಿರುವ ಸನ್ನಿವೇಶಗಳು ಅದ್ಭುತವಾಗಿವೆ. ಹಾಗೆಯೇ ಇಲ್ಲಿ ಕಥನಕಾರರು ಸಹ ತಮ್ಮ ಕಥೆಗೆ ವ್ಯಥೇ ಬರದಂತೆ ಅತ್ಯಂತ ಸೂಕ್ಷ್ಮವಾಗಿ ಸರಳವಾಗಿ ಅರ್ಥವಾಗುವಂತೆ ತಮ್ಮ ಕಥೆಯಲ್ಲಿ ತಿಳಿಸಿದ್ದಾರೆ. ರಾಜನ ದರ್ಪ, ಆಶ್ರಮದವರ ವ್ಯಕ್ತಿತ್ವ ಈ ಸನ್ನಿವೇಶದಲ್ಲಿ ಉತ್ತಮವಾಗಿ ಮೂಡಿಬಂದಿದೆ. ಈ ಭಾಗದಲ್ಲಿ ಬರುವ ಸನ್ನಿವೇಶಗಳಲ್ಲಿ ಮಾನವೀಯತೆ ಇರುವುದನ್ನು ಗಮನಿಸಬಹದು.

**ಪತಿಯ ತಿರಸ್ಕಾರ:** ಗರ್ಭಿಣಿಯಾದ ಶಕುಂತಲೆಯನ್ನು ರಾಜನ ಆಸ್ಥಾನಕ್ಕೆ ಕರೆತರುವ ದೃಶ್ಯ ಅತ್ಯಂತ ಸುಂದರವಾಗಿದೆ. ಆದರೆ ದುಷ್ಯಂತನ ಅರಮನೆಗೆ ಬಂದಾಗ ದುಷ್ಯಾಂತನ ಮರೆವು ಶಕುಂತಲೆಯನ್ನು ತಿರಸ್ಕರಿಸುವಂತೆ ಮಾಡುತ್ತದೆ. ಹೆಸರಿನ ಉಂಗುರ ತೋರಿಸಲು ಹೋದಾಗ ಅದು ಶಚಿ ನದಿಯಲ್ಲಿ ಬಿದ್ದಿದ್ದನ್ನು ಗೌತಮಿ ನೆನಪಿಸುತ್ತಾಳೆ. ಆದರೂ ದೂರ್ವಾಸ ಮುನಿಯ ಶಾಪ

ಇಲ್ಲಿ ಅತ್ಯಂತ ಚತುರತೆಯ ಕೆಲಸ ಮಾಡುತ್ತದೆ. ಕಥನಕಾರರುಥಿಲ್ಲಿ ಗ್ರಾಮೀಣ ಭಾಷೆಯನ್ನು ಬಳಸಿ ಬರೆದಿದ್ದಾರೆ. ಉದಾಹರಣೆ: "ಬಿಸಿ ಬಿಸಿ ಮಾತು ನಡೆದವು. ಗುರುತು ಸಿಕ್ಕಲಿ ಎಂದು ಗೌತಮಿಯು ಶಕುಂತಲೆಯ ಮೇಲುಮುಸುಕುನ್ನು ತೆಗೆದಳು. ರಾಜನು ಗುರುತಿಸಲಿಲ್ಲ. ಶಕುಂತಲೆ ಮಾತನಾಡಿದಳು. ಚಿತ್ರಾಂಗನೆಂಬ ಮರಿಜಿಂಕೆಗೆ ಕಮಲದ ಎಲೆಯಲ್ಲಿ ರಾಜನು ನೀರು ಕೊಟ್ಟರೆ ಅದು ಕುಡಿದಿರಲಿಲ್ಲ, ಅದೇ ಕೆಲಸವನ್ನು ಶಕುಂತಲೆ ಮಾಡಿದರೆ ಅದು ನೀರನ್ನು ಕುಡಿಯಿತು. ಇದನ್ನು ಜ್ಞಾಪಿಸಿದಳು. "ಸಜಾತಿಯ ಸ್ನೇಹ" ಎಂದು ರಾಜನು ಪರಿಹಾಸ್ಯ ಮಾಡಿದ್ದನ್ನು ಜ್ಞಾಪಿಸಿದಳು. ರಾಜನು ಒಪ್ಪಲಿಲ್ಲ. ಇದೆಲ್ಲಾ ದಾರಿ ತಪ್ಪಿದ ಸ್ತ್ರೀಯರ ಚಮತ್ಕಾರವಾದ ಮಾತು ಎಂದು ಹೇಳಿದನು. ಶಕುಂತಲೆಯು ರೇಗಲಿಲ್ಲ. ನಿನ್ನ ನಾಮಾಂಕಿತವಾದ ಉಂಗುರವನ್ನು ತೋರಿಸುತ್ತೇನೆಂದಳು. ಆದರೆ ಉಂಗುರ ಅವಳ ಬೆರಳಲ್ಲಿ ಇರಲಿಲ್ಲ."[೧೦]

ಋಷಿಮುನಿಗಳಿಗೂ ರಾಜನಿಗೂ ವಾಗ್ವಾದ ನಡೆಯಿತು. ನಂತರ ಅವರು ಶಕುಂತಲೆಯನ್ನು ಬೈದು ನಾವು ಋಷಿಗಳ ಆಶ್ರಮಕ್ಕೆ ಹೋಗುತ್ತೇವೆ ಎಂದು ಹೊರಟುಹೋದರು. ಶಕುಂತಲೆಯು ಅತ್ಯಂತ ದುಃಖದಿಂದಿರುವಾಗ ಅವಳ ತಾಯಿ ಪ್ರತ್ಯಕ್ಷಳಾಗಿ ಅವಳನ್ನು ಕರೆದುಕೊಂಡು ಹೋಗುತ್ತಾಳೆ.

**ಮಾಯದ ಉಂಗುರ:** ಗಾಂಧರ್ವ ವಿವಾಹದ ನಂತರ ದುಷ್ಯಂತ ತನ್ನ ಅರಮನೆಗೆ ಹೋಗುವಾಗ ಕೊಟ್ಟಿದ್ದ ಉಂಗುರದ ಬಗ್ಗೆ ವಿವರವಾಗಿ ವಿಸ್ತರಿಸಿದ್ದಾರೆ. ಮುಂದೆ ಐದು ವರ್ಷಗಳು ಕಳೆದವು. ವಸಂತಕಾಲ ಬಂದಿತು. ರಾಜನ ಮನಸ್ಸಿನಲ್ಲಿ ಒಂದು ವಿಧವಾದ ರೋದನೆ ಬೆಳೆಯಿತು. ಪ್ರಿಯವಾದ ವಸ್ತುವನ್ನು ಕಳೆದುಕೊಂಡಂತೆ ಸಂಕಟವಾಗುತ್ತಿತ್ತು. ಎಷ್ಟು ಯೋಚಿಸಿದರೂ ಅದಕ್ಕೆ ಕಾರಣ ತಿಳಿಯುತ್ತಿರಲಿಲ್ಲ. ಒಂದು ದಿನ ನಗರ ರಕ್ಷಕನು ರಾಜಮುದ್ರೆಯ ಉಂಗುರವನ್ನು ಕಂಡು ರಾಜನಿಗೆ ಒಪ್ಪಿಸಿದನು. ಶಚೀತೀರ್ಥದ ಸಮೀಪದ ಬೆಸ್ತನೊಬ್ಬನು ಅದನ್ನು ಮಾರಾಟಕ್ಕೆ ತಂದಿದ್ದನು. ನಗರ ಶೋಧಕರು ಕಳ್ಳನನ್ನು ಹಿಡಿದುತಂದಿದ್ದಾರೆ ಎಂದು ಜ್ಞಾಪಿಸಿ ಅಪ್ಪಣೆಯನ್ನು ಕಾಯುತ್ತಾ ನಿಂತನು. ರಾಜನು ಬೆರಗಾಗಿ ಇದು ಅವನಿಗೆ ಹೇಗೆ ಸಿಕ್ಕಿತು ಎಂದು ಪ್ರಶ್ನಿಸಿದನು. ಮೀನನ್ನು ಸೀಳಿದಾಗ ಬೆಸ್ತನಿಗೆ ಅದರ ಹೊಟ್ಟೆಯಲ್ಲಿ ದೊರೆಯಿತು ಪ್ರಭು ಎಂದನು. ರಾಜನಿಗೆ ಉಂಗುರ ನೋಡಿದ ಕ್ಷಣದಲ್ಲೇ ಶಕುಂತಲೆಯ ನೆನೆಪು ಸ್ಮರಣೆಗೆ ಬಂದಿತು. ಕತ್ತಲೆಯು ಕಳೆದು ಬೆಳಕಿನಲ್ಲಿ ಸಕಲ ಪದಾರ್ಥಗಳೂ ಗೋಚರಿಸುವಂತೆ ಉಂಗುರವನ್ನು ನೋಡಿದ ಕೂಡಲೆ ದುಷ್ಯಂತನಿಗೆ ಶಕುಂತಲೆಯ ಎಲ್ಲಾ ನೆನಪುಗಳೂ ಜ್ಞಾಪಕ್ಕೆ ಬಂದವು. ಬೆಸ್ತನಿಗೆ ಉಂಗುರದ ಬೆಲೆಗಿಂತ ಅಧಿಕಾಧಿಕವಾಗಿ ಹಣವನ್ನು ಕೊಟ್ಟು ಕಳಿಸುವಂತೆ ಅಪ್ಪಣೆ ಮಾಡಿದನು.

ಹದ್ದು ನಾಯಿಗಳಿಗೆ ಬಲಿಯಾಗುವುದರ ಬದಲು ಹೀಗೆ ಬಹುಮಾನ ಹೊಂದಿದ ಬೆಸ್ತನ ಅದೃಷ್ಟವನ್ನು ಕುರಿತು ಊರಜನರೆಲ್ಲ ಕಥೆ ಕಟ್ಟಿದರು. ರಾಜನು ಆ ವರ್ಷದ ವಸಂತೋತ್ಸವವನ್ನು ನಿಲ್ಲಿಸಿದನು. ಶಕುಂತಲೆಯನ್ನು ಹುಡುಕಿದನು. ಅವಳು ಮಾಯವಾದ ಸಂಗತಿಯನ್ನು ಆಲೋಚಿದನು. ಅವಳ ತಾಯಿಯ ಕಡೆಯವರು ಎತ್ತಿಕೊಂಡು ಹೋಗಿರಬಹುದೆಂದು ಊಹಿಸಿದನು.

ಶಕುಂತಲೆಯ ನೆನಪಿನಿಂದ ರಾಜನ ಹೃದಯವು ಬೆಂದುಹೋಯಿತು. ಆಶ್ರಮದಲ್ಲಿ ಅವಳು ನೀರೆರೆಯುತ್ತಿದ್ದ ಚಿತ್ರವನ್ನು ಬರೆದುಕೊಂಡನು. ಒಂದು ದಿನ ಸುತ್ತಮುತ್ತಲಿನ ಸನ್ನಿವೇಶವನ್ನು ಅದರಲ್ಲಿ ಚಿತ್ರಿಸಬೇಕೆಂದನು. ಕೆಲವು ಕಾಲ ನಿಜರೂಪವನ್ನು ಕಂಡಂತೆ ಚಿತ್ರವನ್ನು ನೋಡಿ ಸಂತೋಷ ಪಡುವನು. ತಾನು ನೋಡುತ್ತಿರುವುದು ಭಾವಚಿತ್ರವೆಂದು ಕೇಳಿದೊಡನೆ ದುಃಖ ಪಡುವನು. ಹೀಗೆ ದುಷ್ಯಂತನ ಸಂಕಟದಿಂದ ಕೂಡಿದಾಗ ಅಷ್ಟೊತ್ತಿಗೆ ಅಂತರಿಕ್ಷದಿಂದ ಒಂದು ರಥವು ಇಳಿದು ಬಂದಿತು. ಇಂದ್ರ ಸಾರಥಿಯಾದ ಮಾಕಳಿಯು ರಥದಿಂದ ಬಂದು ಮಹಾರಾಜನಿಗೆ ಇಂದ್ರನ ಸಂದೇಶವನ್ನು ಕಳಿಸಿದನು. ಕಾಲನೇಮಿಯ ಮಗನಾದ ದುರ್ಜಯನೊಡನೆ ಇಂದ್ರನಿಗೆ ಯುದ್ಧ ಸಂಭವಿಸಿತ್ತು. ಈ ಯುದ್ಧದಲ್ಲಿ ದೇವೆಂದ್ರರು ಮಹಾರಾಜನ ಸಹಾಯವನ್ನು ಕೋರಿದ್ದರು. ಮಹೇಂದ್ರರ ಅಪ್ಪಣೆಯನ್ನು ಶಿರಸಾವಹಿಸಿ ದೇವರಥದಲ್ಲಿ ಕುಳಿತು ಮಹಾರಾಜನು ಅಮರಾವತಿಗೆ ಪ್ರಯಾಣ ಮಾಡಿದನು.

**ಸತಿಪತಿಯರ ಪುನರ್ಮಿಳನ:** ಯುದ್ಧದಲ್ಲಿ ದೇವೆಂದ್ರನು ಜಯಿಸಿದನು. ದುಷ್ಯಂತನ ಸಹಾಯವನ್ನು ಅವನು ಬಾಯಿತುಂಬಾ ಹೊಗಳಿದನು. ತನ್ನ ಅರ್ಧಾಸನವನ್ನು ಕೊಟ್ಟು ದೇವತೆಗಳ ಸಮಕ್ಷಮದಲ್ಲಿ ಅವನಿಗೆ ಮಂದಾರ ಮಾಲಿಕೆಯನ್ನು ಹಾಕಿ ಗೌರವಿಸಿದನು. ಇಂದ್ರಲೋಕದ ವೈಭವವನ್ನು ಸವಿದು ರಾಜನು ಮರಳುವಾಗ, ಮಾರ್ಗಮಧ್ಯದಲ್ಲಿ ಸುವರ್ಣಕಾಂತ ಪರ್ವತ ಶಿಖರವು ಕಾಣಿಸಿತು. ಅದು ಹೇಮಕೂಟವೆಂದೂ, ಸಿದ್ಧ ತಾಪಸಕರ ವಾಸಸ್ಥಳವೆಂದೂ, ಕಶ್ಯಪರು ಅಲ್ಲಿ ವಾಸ ಮಾಡುವರೆಂದೂ, ಮಾಕಳಿಯು ತಿಳಿಸಿದನು. ಅಲ್ಲಿ ಇಳಿಯಬೇಕೆಂದು ರಾಜನು ಅಪೇಕ್ಷಿಸಿದನು. ಸ್ವರ್ಗಕ್ಕಿಂತಲೂ ಸುಖಕರವಾದ ಆ ಸ್ಥಳದಲ್ಲಿ ಇಬ್ಬರೂ ಇಳಿದರು. ಅಮೃತದ ಮಡುವಿನಲ್ಲಿ ಮಿಂದಂತೆ ರಾಜನ ಮನಸ್ಸು ಉಲ್ಲಾಸಗೊಂಡಿತು. ಮಾಕಳಿಯು ಅಶೋಕವನದ ನೆಳಲಿನಲ್ಲಿ ರಾಜನನ್ನು ಬಿಟ್ಟು ಕಶ್ಯಪರ ಸಮಯಾವಕಾಶವನ್ನು ತಿಳಿದುಕೊಂಡು ಬರಲು ಆಶ್ರಮದ ಕಡೆಗೆ ಹೊರಟನು.

ಸಕಲ ಸಂಪತ್ತಿನಿಂದ ಸಮೃದ್ಧವಾಗಿರುವ ಆ ಗಿರಿಯಲ್ಲಿ ತಪಸ್ಸು ಮಾಡುವ ಮಹಾನುಭಾವರ ಮಹಿಮೆಯನ್ನು ರಾಜನು ಮನಸ್ಸಿನಲ್ಲಿಯೇ ಕೊಂಡಾಡಿದನು. ಆಗ 'ಅಯ್ಯಾ ನಿನ್ನ ಚೇಷ್ಟೆಯೇ ದುಷ್ಟ ಸ್ವಭಾವ ನೀನು ಬಿಟ್ಟೀಯಾ' ಎಂಬ ಮಾತು ಕೇಳಿತು. ತಪೋವನದಲ್ಲಿ ಇಂತಹ ಮಾತು ಬರಲು ಕಾರಣವೇನೆಂದು ಯೋಚಿಸುತ್ತಾ ಬಾಯಿ ಆಕಳಿಸಿ ಹಲ್ಲು ಎಣಿಸುತ್ತಿದ್ದಾನೆ. ಕುತ್ತಿಗೆಯ ಕೇಸರಿಗಳನ್ನು ಹಿಡಿದು ಎಳೆದು ಜಗ್ಗುತ್ತಿದ್ದಾನೆ. ತಾಪಸಸ್ತ್ರೀಯರಿಗೆ ಮರಿಯನ್ನು ಇವನಿಂದ ಬಿಡಿಸಲು ಆಗಲಿಲ್ಲ ಬೇರೆ ಆಟದ ಸಾಮಾನು ತರಲು ಒಬ್ಬಳು ಆಶ್ರಮಕ್ಕೆ ಓಡಿಹೋದಳು. ಮತ್ತೊಬ್ಬಳು ಅಲ್ಲಿ ಬಂದ ರಾಜನನ್ನು ಕುರಿತು ಮರಿಯನ್ನು ಬಿಡಿಸುವಂತೆ ಪ್ರಾರ್ಥಿಸಿದಳು. ರಾಜನು ಸಮೀಪಕ್ಕೆ ಬಂದು ಮಗುವನ್ನು ಬಿಡಿಸಿದನು. ಆ ಮಗುವಿನಲ್ಲಿ ಕೇವಲ ಆತ್ಮೀಯತೆಯು ತೋರಿ ರಾಜನ ಕಳವಳವು ಹೆಚ್ಚಿತು. ಪುತ್ರನಿಲ್ಲದವರಿಗೆ ಈ ಮಮತೆ ಸಹಜ ಎಂದುಕೊಂಡನು. ಇವನು ಯಾವ ವಂಶದವನೆಂದು ತಾಪಸಸ್ತ್ರೀಯನ್ನು ಕೇಳಿದನು. "ಪುರುವಂಶದವನು" ಎಂದು ಅವಳು ಉತ್ತರ

ಕೊಟ್ಟಳು. ಇಬ್ಬರನ್ನು ನೋಡಿ ರೂಪದ ಹೋಲಿಕೆಯನ್ನು ಕಂಡು ಅವಳು ಬೆರಗಾದಳು. ನಮ್ಮ ವಂಶದವನು ಎಂದು ರಾಜನು ಮಗುವನ್ನು ಸೆಳೆದುಕೊಂಡು ಮುದ್ದಿಟ್ಟನು. ರಾಜರು ಏನೇನೋ ಯೋಚಿಸುತ್ತಿರುವಲ್ಲಿ ಮತ್ತೊಬ್ಬಳು ಆಟದ ನವಿಲನ್ನು ತಂದು ಶಕುಂತಲಾವಣ್ಯವನ್ನು ನೋಡು ಎಂದು ನವಿಲನ್ನು ತೋರಿಸಿದಳು(ಶಕುಂತ ಎಂದರೆ=ಹಕ್ಕಿ, ಲಾವಣ್ಯ ಎಂದರೆ=ಸೊಬಗು).

ಶಕುಂತಲಾ ಎಂಬ ಮಾತು ಕೇಳಿದ್ದೇ ತಡ 'ಅಮ್ಮ' ಎಂದು ಮಗುವು ಕರೆಯಿತು. ಬಿಡು ಬಿಡು ಎಂದು ದುಷ್ಯಂತನಿಂದ ಬಿಡಿಸಿಕೊಳ್ಳಲು ಪ್ರಯತ್ನಿಸಿದನು. ಇವನ ತಾಯಿ ಶಕುಂತಲೆಯೆಂದು ತಿಳಿದಕೂಡಲೆ ದುಃಖ ಸಂತೋಷಗಳಿಂದ ರಾಜನ ಮನಸ್ಸು ಕದಡಿಹೋಯಿತು. ಮಗುವು ಹೋಗಿ ಬಹಳ ಹೊತ್ತಾಗಿತ್ತು. ಶಕುಂತಲೆ ಕುಗೂತ್ತಾ ಬಂದಳು. ಮಾಸಿದ ಬಟ್ಟೆ ಸೊರಗಿದ ಮುಖ ಕೃಶವಾದ ದೇಹ ಇವಳನ್ನು ನೋಡಿ ರಾಜನು ದುಃಖಪಟ್ಟನು. ಮಗುವನ್ನು ಮುಟ್ಟಿ ಮಲಿನ ಗೊಳಿಸುತ್ತಿರುವ ಇವನಾರೆಂದು ಶಕುಂತಲೆಯು ತೀಕ್ಷ್ಣವಾಗಿ ನೋಡಿದಳು. ಆರ್ಯಪುತ್ರ! ದುಷ್ಯಂತ, ತನ್ನ ಕಣ್ಣನ್ನು ತಾನು ನಂಬಲಾರದೆ ಹೋದಳು. "ಪ್ರಿಯೆ, ನನ್ನ ಮರೆವು ದೂರವಾಯಿತು. ಅದೃಷ್ಟದಿಂದ ನೆನಪುಃ ದೊರೆತಿದೆ" ಎಂದು ರಾಜನು ಮಾತನಾಡಿಸಿದನು. "ಆರ್ಯ ಪುತ್ರನಿಗೆ ಜಯವಾಗಲಿ" ಎಂದು ಹೇಳುವಷ್ಟರಲ್ಲಿ ಶಕುಂತಲೆಯ ಕಣ್ಣಲ್ಲಿ ನೀರು ತುಂಬಿತು. ಕೊರಳು ಬಿಗಿಯಿತು. "ಅಮ್ಮ ಇವರು ಯಾರು?" ಎಂದು ಮಗು ಕೇಳಿತು. "ನಿನ್ನ ಭಾಗ್ಯದೇವತೆಯನ್ನು ಕೇಳು" ಎಂದಳು ತಾಯಿ. ದುಷ್ಯಂತನು ಶಕುಂತಲೆಯ ಕಣ್ಣೀರು ತೊಡೆದು "ನನ್ನ ಬುದ್ಧಿಯಲ್ಲಿ ನಿನ್ನ ಸ್ಮರಣೆ ಸ್ವಲ್ಪವೂ ಇರಲಿಲ್ಲ ಆದ್ದರಿಂದ ತಿರಸ್ಕರಿಸಿದೆ. ನನ್ನ ಅಪರಾಧವನ್ನು ಕ್ಷಮಿಸು" ಎಂದು ಬೇಡಿದನು.

"ಆರ್ಯಪುತ್ರ ನಿನ್ನಂತಹವನು ತಪ್ಪು ಮಾಡುವುದಿಲ್ಲ. ನನ್ನ ದುರದೃಷ್ಟ" ಎಂದು ಶಕುಂತಲೆ ಸಮಾಧಾನಪಡಿಸಿದಳು. ಪತಿ ಪತ್ನಿಯರು ತಿರುಗಿ ಸಂದರ್ಶಿಸಿದ ವರ್ತಮಾನವು ಆಶ್ರಮಕ್ಕೆ ಹಬ್ಬಿತು. ಆದರೆ ಕಶ್ಯಪರು ಕೂಡಲೆ ಇವರನ್ನು ಕರೆಸಿಕೊಂಡರು. ವೃದ್ಧಕಶ್ಯಪರು "ದೂರ್ವಾಸರ ಶಾಪದಿಂದ ನಿಮಗೆ ಈ ಕಷ್ಟ ಸಂಭವಿಸಿತು. ತಪ್ಪು ನಿಮ್ಮಿಬ್ಬರದೂ ಅಲ್ಲ. ಮುಂದೆ ನೀವು ಸುಖವಾಗಿರುವಿರಿ" ಎಂದು ಆಶೀರ್ವದಿಸಿದರು. ಭರತಕುಮಾರನು ಭೂಮಂಡಲವನ್ನೆಲ್ಲಾ ಗೆದ್ದು ಚಕ್ರವರ್ತಿಯಾಗಿ ಯಶೋವಂತನಾಗುವನು ಎಂದು ಅನುಗ್ರಹಿಸಿದರು.

ಕಣ್ವರಿಗೂ ಮೇನಕೆಗೂ ವರ್ತಮಾನ ಕಳಿಸಿದರು. ಶುಭಮುಹೂರ್ತದಲ್ಲಿ ಅವರೆಲ್ಲರನ್ನು ಬೀಳ್ಕೊಂಡು ದುಷ್ಯಂತನು ಪತ್ನಿ ಪುತ್ರರೊಂದಿಗೆ ಹಸ್ತಿನಾವತಿಗೆ ಬಂದನು. ಜನರೆಲ್ಲರೂ ಸಂತೋಷ ಪಟ್ಟರು. ಅವನು ಬಹುಕಾಲ ಸುಖವಾಗಿ ರಾಜ್ಯವಾಳಿದನು. ಅವನ ಮಗ ಭರತನು ಗುಣಭರಿತನಾಗಿ ಸುಚರಿತನಾಗಿ ಸಕಲ ಸಂಪದ್ಭರಿತವಾದ ಈ ಭೂಮಿಯನ್ನು ಯಶೋವಂತನಾಗಿ ಆಳಿದನು. ಆದ್ದರಿಂದ ನಮ್ಮ ಮಾತೃಭೂಮಿಗೆ "ಭರತಭೂಮಿ" ಎಂಬ ಹೆಸರು ಬಂದಿದೆ ಎಂಬ ವಾದವು ಇದೆ.

**ಮಂ.ಅ.ಲಕ್ಷ್ಮೀತಾತಾಚಾರ್:** ಶಕುಂತಳೆ ಇವರು ಬರೆದಿರುವ ಸಣ್ಣಕಥೆಯು ಭರತನಿಂದ ಪ್ರಾರಂಭವಾಗಿ ಭರತನಿಗೆ ಕೊನೆಯಾಗುತ್ತದೆ. ಪ್ರಕೃತಿಯ ವರ್ಣನೆ, ದುಷ್ಯಂತನ ಗುಣಗಾನ, ಕಣ್ವರ ವಿದ್ವತ್, ಶಕುಂತಲೆಯ ಸೌಂದರ್ಯವನ್ನು ಆಲಂಕಾರಿಕ ಪದಗಳಿಂದ ವರ್ಣಿಸಿದ್ದಾರೆ. ಇದೊಂದು ಆದರ್ಶ ಗುಣಗಳನ್ನು ಹೇಳುವ ಕಥೆಯ ಪುಟ್ಟ ಪುಸ್ತಕದಂತೆ ಕಾಣುತ್ತದೆ. ಈ ಕಥೆಯ ಬರವಣಿಗೆ ಅಥವಾ ಅನುವಾದ ಕಾರ್ಯ ಉತ್ತಮವಾಗಿ ಮೂಡಿ ಬಂದಿದೆ. ಸಣ್ಣಕಥೆಯಲ್ಲಿ ವಿವಿಧ ಸನ್ನಿವೇಶಗಳ ರೇಖಾಚಿತ್ರಗಳನ್ನೊಳಗೊಂಡಿದೆ. ನಿಮ್ಮ ಗೆಳತಿಯಾದ ಈಕೆ ಯಾರು? ಎಂಬ ಚಿತ್ರದಲ್ಲಿ ಶಕುಂತಲೆ, ದುಷ್ಯಂತ, ಅನುಸೂಯ, ಪ್ರಿಯಂವದೆಯರನ್ನು ಕಾಣಬಹುದು. ಋಷಿಯ ಆಶ್ರಯದಲ್ಲಿರುವುದನ್ನು ಗಮನಿಸಬಹುದು.

**"ದೊರೆಯೆ! ನನ್ನನ್ನು ಮರೆತಿರೇನು?"** ಈ ಮಾತಿನಂತೆ ದುಷ್ಯಂತ, ಭರತ, ಸಿಂಹ, ಶಕುಂತಲೆ ಇಬ್ಬರು ಸಖಿಯರು ಇರುವ ಚಿತ್ರ ಇದೆ. ಈ ಚಿತ್ರದಲ್ಲಿ ಕಂಡುಬರುವ ಸನ್ನಿವೇಶವೆಂದರೆ, ದುಷ್ಯಂತನಿಗೆ ಪುನರ್‌ಸ್ಮರಣೆ ಬಂದು ಶಕುಂತಲೆಯ ನೆನಪು ಬಂದಾಗ ತನ್ನ ತಪ್ಪನ್ನು ಕ್ಷಮಿಸು ಎಂದು ಕೇಳಿಕೊಂಡಾಗ ಶಕುಂತಲೆಯು ಈ ಮೇಲಿನಂತೆ ಮಾತನಾಡುವಳು.

"ಹಿಂದಿನ ಜನ್ಮದಲ್ಲಿ ನಾನು ಪಾಪ ಮಾಡಿದ್ದೆ. ಅದ್ದರಿಂದಲೇ ದಯಾವಂತನಾದ ನೀನು ಹಾಗೆ ನಡೆದೆ." ಶಕುಂತಲೆಯು ದುಷ್ಯಂತನ ಅರಮನೆಗೆ ಹೋದಾಗ ನಡೆಯುವ ಸನ್ನಿವೇಶವನ್ನು ಈ ಚಿತ್ರದಲ್ಲಿ ತೋರಿಸಿದ್ದಾರೆ. ಗೌತಮಿ, ಇಬ್ಬರು ಋಷಿಮುನಿಗಳು, ಪರೋಹಿತ, ದುಷ್ಯಂತ, ಶಕಂತಲೆಯರನ್ನು ಈ ಚಿತ್ರದಲ್ಲಿ ಕಾಣಬಹುದು. ಭರತನಿಂದಲೇ ಈ ಕಥೆಯು ಕೊನೆಗೊಳ್ಳುತ್ತದೆ.

**ವಿ.ಎಂ.ಇನಾಂದರ್ ಅವರ 'ಶಾಕುಂತಲ' ಸಣ್ಣಕತೆ:** ಈ ಕಥೆಯು ಮೂಲ ನಾಟಕದಿಂದ ಆರಂಭವಾಗುವಂತೆಯೇ ಇದೆ. ಈ ಕಥೆಯಲ್ಲಿ ದುಷ್ಯಂತನ ಬೇಟೆಯಾಡುವ ಸನ್ನಿವೇಶದ ಮೂಲಕ ಪ್ರಾರಂಭವಾಗುತ್ತದೆ. ತನ್ನ ಸುಖಕ್ಕಾಗಿ ಹಿತಕ್ಕಾಗಿ ತನಗೆ ತೋರಿದ ತಿಳಿದ ಸತ್ಯವನ್ನು ಬಿಟ್ಟುಕೊಡಲಾರ. ದುಷ್ಯಂತನಿಗೆ ಸರಿಸಮನಾಗಿ ಶಕುಂತಲೆ ಅರಮನೆಯ ದಾಸಿಯಾಗಲಿ, ರಾಜಪುತ್ರಿಯಾಗಲಿ, ಸ್ವರ್ಗಲೋಕದ ಅಪ್ಸರೆಯಾಗಲಿ ಅಲ್ಲ. ಅಪ್ಸರೆಯ ಮಗಳಾದರೂ ಈ ನೆಲದ ಮೇಲೆ ಬೆಳೆದವಳು. ಮೊದಲು ಹಕ್ಕಿಗಳು ಆಕೆಯನ್ನು ಸಲಹಿದವು. ಆಮೇಲೆ ಕಣ್ವಋಷಿಗಳು ಆಕೆಯನ್ನು ಬೆಳೆಸಿದರು. ಮೇನಕೆಯಿಂದ ಸೌಂದರ್ಯವನ್ನು ವಿಶ್ವಾಮಿತ್ರನಿಂದ ನಿಷ್ಠೆಯನ್ನು ಪಡೆದು ಕಣ್ವರಿಂದ ಧರ್ಮಾಚರಣೆಯನ್ನು ತಿಳಿದು ಆಶ್ರಮದಲ್ಲಿ ಬೆಳೆದವಳು ಆಕೆ. ಸ್ವರ್ಗ ಮರ್ತ್ಯಗಳಿಗೆರಡಕ್ಕಲ್ಲದೆ ಅವೆರಡರ ನಡುವಿನ ಆಶ್ರಮ ಜೀವನಕ್ಕೂ ಸಂಬಂಧವಿದ್ದವಳು. ದುಷ್ಯಂತ ಲೋಕದೊಡೆಯ, ಇಂದ್ರಸಖ, ಆಶ್ರಮ ಪರಿಪಾಲಕ. ಆತನಾದರೂ ಈ ಮೂರಕ್ಕೆ ಸಂಬಂಧ. ಇಂಥ ಇವರಿಬ್ಬರ ಪ್ರೀತಿಯ ಕಥೆ **ಶಕುಂತಲ** ಕಥೆಯಲ್ಲಿದೆ. ನಾಯಕ–ನಾಯಕಿ ಇಬ್ಬರೂ ಅದ್ವಿತೀಯವಾಗಿದ್ದಾರೆ. ದುಷ್ಯಂತ ಶಕುಂತಲೆಯರ ಕಥೆಯು ಪರಂಪರೆಯಿಂದ ಬೆಳೆದು ಬಂದಿದೆ. ಮಹಾಭಾರತದಲ್ಲಿ ಭಾಗವತ ಮುಂತಾದ ಪುರಾಣಗಳಲ್ಲಿ ಈ ಕಥೆಯು ಬರುತ್ತದೆ. ಆದರೆ ಕಥಾವಸ್ತು ಹಳೆಯದಾದರೂ

ಕಾಳಿದಾಸನ ಕೈಯಲ್ಲಿ ಅದೊಂದು ಹೊಸ ಕಲಾಕೃತಿಯಾಗಿದೆ. ಮೂಲಕಥೆಯಲ್ಲಿ ದುಷ್ಯಂತ ಆಶ್ರಮದಿಂದ ಹಿಂದಿರುಗಿದ ಮೇಲೆ ಶಕುಂತಲೆಯ ಮಗು ಬೆಳೆದು ದೊಡ್ಡವನಾದಾಗ ಆಕೆ ದುಷ್ಯಂತನೆಡೆಗೆ ಬರುತ್ತಾಳೆ. ಬಂದಾಗಲೂ ರಾಜನಿಗೆ ಮರವೆಯಾಗಿರುವುದಿಲ್ಲ, ಆದರೂ ನಿರಾಕರಿಸುತ್ತಾನೆ. ಆದರೆ ಆಕಾಶದಿಂದ ಅಶರೀರವಾಣಿ ಕೇಳಿದಾಗ ಎಲ್ಲವೂ ಸರಿಹೋಗುತ್ತದೆ. ಕಾಳಿದಾಸ ಈ ಕಥಾಭಾಗವನ್ನು ಬದಲಾಯಿಸಿಕೊಂಡಿದ್ದಾನೆ. ದೂರ್ವಾಸರ ಶಾಪದ ಯೋಜನೆಯನ್ನು ಮಾಡಿಕೊಂಡು ಅದರ ಮೂಲಕ ಅರಸ ಮರೆತುಬಿಡುತ್ತಾನೆ ಎಂದು ಕಥೆಯನ್ನು ಹೆಚ್ಚು ಸ್ವಾಭಾವಿಕವಾಗಿ ಬೆಳೆಯಿಸಿಕೊಂಡಿದ್ದಾರೆ. ತಾನು ಮದುವೆಯಾದುದನ್ನು ತಿಳಿದು ಬಂದವಳನ್ನು ಅನ್ಯಾಯವಾಗಿ ನಿರಾಕರಿಸುವ ದುಷ್ಯಂತನ ನಡತೆಗಿಂತಲೂ ಶಾಪದ ಪರಿಣಾಮವಾಗಿ ಶಕುಂತಲೆಯನ್ನು ಮರೆತುಬಿಡುವ ದುಷ್ಯಂತನ ನಡತೆ ಹೆಚ್ಚು ಸ್ವಾಭಾವಿಕ. ಹೀಗೆ ಒಂದು ಕಡೆ ದುಷ್ಯಂತನ ನಡತೆ ಸ್ವಾಭಾವಿಕವೆನಿಸುವ ಹಾಗೆ ಮಾಡಿ, ಇನ್ನೊಂದು ಕಡೆ ಅವರಿಬ್ಬರ ಪ್ರೀತಿ ಕಡುವಿರಹದ ಬೆಂಕಿಯಲ್ಲಿ ಪರಿಷ್ಕಾರವಾಗಿ ಚೊಕ್ಕ ಚಿನ್ನವಾಗುವ ಹಾಗೆ ಕಾಳಿದಾಸ ಶಾಪವನ್ನು ಉಪಯೋಗಿಸಿಕೊಂಡಿದ್ದಾನೆ. ಕಷ್ಟ ಬಂದಾಗಲೇ ಮನುಷ್ಯನ ಯೋಗ್ಯತೆ ತಿಳಿಯುತ್ತದೆ. ಕಷ್ಟದಿಂದಲೇ ಮನುಷ್ಯನ ಹೃದಯ ಸಂಸ್ಕಾರ ಹೊಂದಿ ನಯವಾಗುತ್ತದೆ. ತಿಳಿವು ಮೂಡುವುದು ಕಷ್ಟದಲ್ಲಿಯೆ ದೂರ್ವಾಸರ ಶಾಪ ಇಂಥ ಕಷ್ಟವನ್ನು ದುಷ್ಯಂತ ಶಕುಂತಲೆಯರಿಗೂ ಒದಗಿಸುತ್ತದೆ. ಯುವಕ ಹೃದಯಗಳು ಹಾರೈಕೆಗಾಗಿ ಮೊದಲಾದ ಅವರ ಪ್ರೀತಿ ತಿಳಿಯಾಗಿ, ಎರಡು ಹೃದಯಗಳು ಬೆಸುಗೆಯಾಗುವ ಸಾಧನವಾಗುತ್ತದೆ. ತಪೋಭೂಮಿಯಲ್ಲಿ ಮೊದಲಾದದ್ದು ತಪಸ್ಸಿದ್ಧಿಸ್ಥಾನವಾದ ಮಾರೀಚರ ಆಶ್ರಮಮಲ್ಲಿ ತನ್ನ ಸಿದ್ಧಿಯನ್ನು ಪಡೆಯುತ್ತದೆ. ದುಷ್ಯಂತ ಶಕುಂತಲೆಯರ ಪ್ರೀತಿಯಲ್ಲಿ ಅಗ್ನಿಮಿತ್ರನ ಮೋಹವಾಗಲಿ, ಪುರೂರವನ ಉನ್ಮಾದವಾಗಲಿ, ಊರ್ವಶಿಯ ಸ್ವಾರ್ಥವಾಗಲಿ, ಯಾವುದೂ ಇಲ್ಲ. ಇವರಿಬ್ಬರ ನಡುವೆ ನಿಸರ್ಗಸಿದ್ಧವಾಗಿ ಹುಟ್ಟಿ ಬೆಳೆದು ಬಾಳುವೆಯ ಏರಿಳಿತಗಳಲ್ಲಿ ಪರಿಪಕ್ವವಾಗಿ ನಿಂತ ಒಲುಮೆ ಅದು. ಅದರ ಸಿದ್ದಿಸಂಪತ್ತೆಂದರೆ ಒಂದು ದೃಷ್ಟಿಯಿಂದ ಅವರಿಬ್ಬರಲ್ಲಿ ಹುಟ್ಟಿದ ಭರತ, ಇನ್ನೊಂದು ದೃಷ್ಟಿಯಿಂದ ಅವರಿಬ್ಬರೂ ಪಡೆದ ಹೃದಯಸಂಸ್ಕಾರ ಅವರಿಬ್ಬರಲ್ಲಿ ಅಜಾರಮರವಾಗಿ ನೆಲೆ ನಿಂತ ಅನ್ಯೋನ್ಯತೆ ದುಷ್ಯಂತ, ಶಕುಂತಲೆಯನ್ನು ಭರತನನ್ನು ಪಡೆದು ಮಾರೀಚರನ್ನು ನಮಸ್ಕರಿಸಿದಾಗ ಅವರು ಹೇಳುವ ಮಾತು ಅರ್ಥವಾಗುತ್ತದೆ. ಆ ಮೂವರು ಒಂದೆಡೆ ಸೇರುವುದೆಂದರೆ ಶ್ರದ್ಧೆ ವಿಧಿ ಸಂಪತ್ತುಗಳು ಒಂದೆಡೆ ಸೇರಿದಂತೆ. ಇನ್ನು ಬಯಸಬೇಕಾದದ್ದು ಯಾವುದು ಉಳಿಯಿತು? ಅಂಥ ಸಮಾಗಮದಿಂದ ಲೋಕಕ್ಕೆ ಕಲ್ಯಾಣ.

ವಿ.ಎಂ.ಇನಾಂದಾರ್ ಅವರು ಹೇಳುವಂತೆ, ಪ್ರೀತಿಯೆಂದರೆ ಸೌಂದರ್ಯದ ಮೋಹವಲ್ಲ, ಪ್ರೀತಿಯೆಂದರೆ ಉನ್ಮಾದವಲ್ಲ, ಪ್ರೀತಿಯೆಂದರೆ ಲೋಕದ ಕಲ್ಯಾಣವನ್ನು ಸಾಧಿಸಬಲ್ಲ ಹೃದಯ ಸಂಸ್ಕಾರ ಪಡೆಯಬೇಕು. ಸ್ವಾರ್ಥವನ್ನು ಮೀರಿದ ಅದರಾಚೆಯ ಕಲ್ಯಾಣ ಸಾಧನೆಗೊಂದು ಸಾಧನವಾಗಬೇಕು. ಅಂಥ ಸಿದ್ಧಿಯನ್ನು ಪಡೆಯುವಾಗಲೇ ಆ ಸಾಧನಕ್ಕೆ ಬೆಲೆ. ಅಂಥ ಹೃದಯ ಸಂಸ್ಕಾರವನ್ನು ಯಾರಾದರೂ ಪಡೆಯಬಹುದು. ಅರಸರಾಯಿತು, ಅಪ್ಸರೆಯಾಯಿತು. ಅರಮನೆಯಾಯಿತು, ಆಶ್ರಮವಾಯಿತು, ಸ್ವರ್ಗವಾಯಿತು, ಮರ್ತ್ಯವಾಯಿತು ಎಲ್ಲೆಡೆಯಲ್ಲಿಯೂ

ಅವಕಾಶವಿದೆ. ಎಲ್ಲೆಡೆಯಲ್ಲಿಯೂ ಈ ಪ್ರೀತಿ ಅವತರಿಸತಕ್ಕದ್ದೇ. ಎಲ್ಲಾ ಬಾಗಿಲುಗಳೂ ಅದಕ್ಕೆ ತೆರೆದಿಟ್ಟಿವೆ. ಅಂತೆಯೇ ಅದು ಸ್ವಾಭಾವಿಕ, ನಿಸರ್ಗಸಹಜ. ಆದರೆ ಅದನ್ನು ಪರಿಪಾಕಗೊಳಿಸುವುದು ಅವರವರ ಯೋಗ್ಯತೆ ದೃಷ್ಟಿಗಳನ್ನು ಕೂಡಿದ್ದು ಅಂಥ ಯೋಗ್ಯತೆ, ದೃಷ್ಟಿ ಹೃದಯ ಸಂಸ್ಕಾರಗಳನ್ನು ನಾವು ದುಷ್ಯಂತ ಶಕುಂತಲೆಯಲ್ಲಿ ಕಾಣುತ್ತೇವೆ. ಅಂಥ ಭವ್ಯಸುಂದರವಾದ ದರ್ಶನವನ್ನು ಶಾಕುಂತಲ ನಾಟಕವು ಒದಗಿಸುತ್ತದೆಯೆಂದೇ ಅದು ಕಾಳಿದಾಸನ ಅಮರಕಲಾಕೃತಿಯಾಗಿದೆ.

**ರೇ.ಸಿದ್ದಪ್ಪ: 'ಅಭಿಜ್ಞಾನ ಶಾಕುಂತಲ'– ೧೯೬೨:** ರೇ.ಸಿದ್ದಪ್ಪನವರು ಈ ಕಾವ್ಯನಾಟಕಗಳನ್ನು ತಿಳಿಗನ್ನಡದಲ್ಲಿ ಕಥೆಯ ರೂಪದಲ್ಲಿ ಬರೆದು ಸಂಸ್ಕೃತ ಪರಿಚಯವಿಲ್ಲದವರಿಗೂ ಸಾಮಾನ್ಯ ಜನಕ್ಕೂ ವಿದ್ಯಾರ್ಥಿಗಳಿಗೂ ಅರ್ಥವಾಗುವಂತೆ ಬರೆದಿದ್ದಾರೆ. ಇವರ ಭಾಷಾಶೈಲಿ ಸುಲಭವೂ ಸರಳವೂ ಆಗಿದೆ. ಕಥೆಯು ನೇರವಾಗಿ ಓದುಗರ ಮನಮುಟ್ಟುತ್ತದೆ. ಅವರ ಭಾಷಾಜ್ಞಾನವನ್ನು ಪದಸಂಪತ್ತನ್ನು ವೃದ್ಧಿಪಡಿಸಲು ಈ ಕಥೆಯ ಬರವಣಿಗೆ ಸಹಕಾರಿಯಾಗಿವೆ. ಅಭಿಜ್ಞಾನ ಶಾಕುಂತಲ ನಾಟಕವನ್ನು ವ್ಯಾಸಂಗ ಮಾಡಿ ಕಥೆಯ ರೂಪದಲ್ಲಿ ಅಚ್ಚಗನ್ನಡದಲ್ಲಿ ಬರೆದಿದ್ದಾರೆ. ಸಾಮಾನ್ಯರಿಗೂ ಉಪಯುಕ್ತವಾದ ಇವರ ಸಾಹಿತ್ಯ ಸೇವೆ ಪ್ರಶಂಸನೀಯವಾದುದು.

ಭಾರತದ ಕಾಳಿದಾಸ, ಇಂಗ್ಲೆಂಡಿನ ಷೇಕ್ಸ್‌ಪಿಯರ್ ಮತ್ತು ಜರ್ಮನಿಯ ಗಯಟೆ, ಈ ಮೂವರು ಜಗತ್ತಿನ ಸರ್ವೋತ್ತಮ ಕವಿಗಳು. ಷೇಕ್ಸ್‌ಪಿಯರ್ ಕವಿಯ ವಿಚಾರ ಯುರೋಪಿನಲ್ಲಿ ಮನೆಮಾತಾಗಿದೆ. ಆದರೆ, ಮಹಾಕವಿ ಕಾಳಿದಾಸನ ವಿಚಾರ ನಮ್ಮ ದೇಶದಲ್ಲಿ ಅನೇಕರಿಗೆ ತಿಳಿಯದು. ಕಥೆಯ ರೂಪದಲ್ಲಿ ತಂದಿರುವುದು ಇವರ ಮೊದಲ ಪ್ರಯತ್ನವಾಗಿದೆ. ಬಾಲಕ ಬಾಲಕಿಯರಿಗೂ, ಜನಸಾಮಾನ್ಯರಿಗೂ ತಿಳಿಯುವಂತೆ ತಿಳಿಯಾದ ಕನ್ನಡದಲ್ಲಿ ಬರೆಯಲು ಪ್ರಯತ್ನಿಸಿದ್ದಾರೆ. ಇದನ್ನು ಓದಿದ ಬಾಲಕ ಬಾಲಕಿಯರು ಕಾಳಿದಾಸನ ಮೂಲ ಕೃತಿಗಳನ್ನು ಓದಲು ಅಸಕ್ತಿ ಮೂಡುವಂತೆ ಅನುವಾದಿಸಿದ್ದಾರೆ. 'ಅಭಿಜ್ಞಾನ ಶಾಕುಂತಲ' ಎಂಬ ಸಣ್ಣಕತೆಯನ್ನು ಗ್ರಾಮೀಣ ಪ್ರದೇಶದಲ್ಲಿರುವ ಅಜ್ಜಿಯರು ಹೇಳುವ ಶೈಲಿಯಲ್ಲಿ ಬರೆದಿದ್ದಾರೆ. ದುಷ್ಯಂತನ ಗುಣಗಾನ, ಶಕುಂತಲೆಯ ಸೌಂದರ್ಯದ ಬಗ್ಗೆ ವಿವರಿಸಿದ್ದಾರೆ.

ಕಥೆಯ ಪ್ರಾರಂಭ: "ಹಸ್ತಿನಾಪುರದಲ್ಲಿ ದುಷ್ಯಂತನೆಂಬ ರಾಜನಿದ್ದನು. ಪುರುವಂಶದಲ್ಲಿ ಹುಟ್ಟಿದ ರಾಜನು ನ್ಯಾಯದಿಂದ ರಾಜ್ಯ ಪರಿಪಾಲನೆ ಮಾಡುತ್ತಿದ್ದನು. ಧರ್ಮಿಷ್ಠನೆಂದೂ ಶಕ್ತಿವಂತನೆಂದೂ ಕೀರ್ತಿ ಪಡೆದಿದ್ದನು. ಒಮ್ಮೆ ದುಷ್ಯಂತ ಮಹಾರಾಜನು ಬೇಟೆಯಾಡಲು ರಥವನ್ನೇರಿ ಕಾಡಿಗೆ ಹೋದನು. ಕಾಡಿನಲ್ಲಿ ಒಂದು ಜಿಂಕೆ ಒಂಟಿಯಾಗಿ ಸಂಚರಿಸುತ್ತಿತ್ತು. ಭಯಚಕಿತವಾಗಿ ಅತ್ತ ಇತ್ತ ನೋಡುತ್ತ ನಿಂತಿದ್ದ ಜಿಂಕೆಯು ರಾಜನ ಮನಸ್ಸನ್ನು ಸೆಳೆಯಿತು. ಕ್ಷಣಮಾತ್ರದಲ್ಲಿ ಬಿಲ್ಲಿಗೆ ಬಾಣ ಹೂಡಿ ರಾಜನು ಜಿಂಕೆಗೆ ಗುರಿಯಿಟ್ಟನು. ಅದರ ಸುಳಿವು ತಿಳಿದ ಜಿಂಕೆ ಚಂಗನೆ ನೆಗೆಯುತ್ತ ಕಾಡಿನೊಳಕ್ಕೆ ಓಡಿಹೋಯಿತು. ಮಹಾರಾಜನು ಹೂಡಿದ ಬಾಣವನ್ನು ಹಾಗೆಯೇ ಇರಿಸಿ, ಗುರಿಯನ್ನು ಬದಲಿಸುತ್ತ ಜಿಂಕೆಯನ್ನು ಬೆನ್ನಟ್ಟಿದನು. ಜಿಂಕೆಯು ಪ್ರಾಣಭಯದಿಂದ ಓಂದಕ್ಕೆ

ತಿರುತಿರುಗಿ ಮರುಕವುಂಟಾಗುವಂತೆ ನೋಡುತ್ತ ಮಿಂಚಿನ ವೇಗದಲ್ಲಿ ನೆಗೆದು ನೆಗೆದು ಓಡಿತು." ಈ ಕಥೆ ಸರಳ ಓದುಗರಿಗೆ ಸುಲಭವಾಗಿ ಅರ್ಥವಾಗುವಂತೆ ಕಥಾವಸ್ತುವಿನಲ್ಲಿ ಬದಲಾಗದಂತೆ ಬರೆದಿದ್ದಾರೆ. ಹೀಗೆ ಪ್ರಾರಂಭವಾದರೆ ಕೊನೆಗೆ ಬರುವ ಸನ್ನಿವೇಶದ ವರ್ಣನೆ.

ಕಥೆಯ ಕೊನೆಯ ಭಾಗ "ಗುಣವಂತೆಯಾದ ಶಕುಂತಲೆಯು ತನ್ನ ಸೌಜನ್ಯದಿಂದ ಎಲ್ಲವೂ ವಿಧಿ ಕರ್ಮವೆಂದು ತಿಳಿದಳು. ದುಷ್ಯಂತನಿಗೂ ತಾನು ಅನ್ಯಾಯದಿಂದ ವರ್ತಿಸಲಿಲ್ಲವೆಂದು ಸಮಾಧಾನವಾಯಿತು. ಹೀಗೆ ಇಬ್ಬರೂ ತಿಳಿವಿನ ಹೊಸಬೆಳಕಿನಲ್ಲಿ ಸಂಶಯವಿಲ್ಲದೆ ಮುಕ್ತರಾದರು. ದೇವಪಿತೃಗಳ ಸನ್ನಿಧಿಯಲ್ಲಿ ಪುನಃ ಶಕುಂತಲೆಯನ್ನು ಪಡೆದು ದುಷ್ಯಂತನು ಸುಖಿಯಾದನು."[೧೨]

ಕಣ್ವ ಋಷಿಗಳಿಗೆ ಈ ಸಂತೋಷ ಸಮಾಚಾರವನ್ನು ತಿಳಿಸಲು ಮಾರೀಚ ಮುನಿಗಳು ಕಣ್ವಾಶ್ರಮಕ್ಕೆ ಶಿಷ್ಯನೊಬ್ಬನನ್ನು ಕಳುಹಿಸಿದರು. ತಾಯಿಯಾದ ಮೇನಕೆಯು ತನ್ನ ಮಗಳ ಕಷ್ಟ ಪರಿಹಾರವಾದದ್ದನ್ನು ನೋಡಿ ಸಂತೋಷಪಟ್ಟಳು. ಆಶ್ರಮವಾಸಿಗಳೆಲ್ಲಾ ಶಕುಂತಲೆಯ ಸೌಭಾಗ್ಯಕ್ಕೆ ಬಹಳ ಹರ್ಷಗೊಂಡರು. ರಾಜದಂಪತಿಗಳು ಮಗನೊಡನೆ ಎಲ್ಲಾ ತಾಪಸಿಗಳ ಆಶೀರ್ವಾದ ಪಡೆದು, ಮಾರೀಚ ಮುನಿಗಳ ಮತ್ತು ಅವರ ಪತ್ನಿಯ ಅಪ್ಪಣೆ ಹೊಂದಿ, ಇಂದ್ರನ ರಥದಲ್ಲಿ ಹಸ್ತಿನಾವತಿಯನ್ನು ಸೇರಿದರು. ದುಷ್ಯಂತ ಮಹಾರಾಜನು ಶಕುಂತಲೆಯೊಡನೆ ಅನೇಕ ವರ್ಷಗಳವರೆಗೆ ಸುಖ ಸಂತೋಷಗಳಿಂದ ರಾಜ್ಯಭಾರ ಮಾಡಿದನು. ಅವರ ಮಗನಾದ ಸರ್ವದಮನ ಮುಂದೆ ಭರತ ಚಕ್ರವರ್ತಿಯೆಂದು ಪ್ರಖ್ಯಾತಿ ಪಡೆದನು. ಹೀಗೆ ಕಥೆಯು ಮುಕ್ತಾಯವಾಗುತ್ತದೆ.

**ಚಿ.ಶ್ರೀ.ಕುಲಕರ್ಣಿ–'ಶಕುಂತಲೆ':** "ಮೊದಲಿಗೆ ವಾಚಕರಿಗೆ ಹೊಸ ಸಾಹಿತ್ಯವನ್ನು ಒದಗಿಸುವ ಸಾಹಸ ಮಾಡುತ್ತಿರುವೆವು. ಅದರಲ್ಲಿ ಇದು ಪ್ರಥಮ ಪ್ರಯತ್ನವೆಂದು ಹೇಳಬಹುದು. ಕಥೆಯು ಹಳೆಯ ಕಾಲದಿದ್ದರೂ ಜನಸಾಮಾನ್ಯರು ನೆನಪಿಡತಕ್ಕ ಅನೇಕ ವಿಷಯಗಳನ್ನು ಸವಿಯಾಗುವಂತೆ ಇದರಲ್ಲಿ ಸೇರಿಸಿವೆ" ಎಂದಿದ್ದಾರೆ ಕುಲಕರ್ಣಿಯವರು. ಮುಖಚಿತ್ರವು ಮೋಹಕವಾಗುವುದಕ್ಕಾಗಿ ಮೂರು ಬಣ್ಣದ ಚಿತ್ರವನ್ನು ಅಂಟಿಸಿದ್ದಾರೆ. ಶಕುಂತಲೆಯು ಆದರ್ಶ ಆರ್ಯಮಹಿಳೆ. ಅವಳು ಕಷ್ಟಪಟ್ಟಳು. ಧೈರ್ಯದಿಂದ ದಿವಸ ಕಳೆದಳು. ತನ್ನ ದೈವವನ್ನು ಹಳಿದುಕೊಂಡಳು. ಕೊನೆಗೆ ಪತಿಯನ್ನು ಕೂಡಿದಳು. ಅವಳ ಜೀವನ ಸಕಲರಿಗೂ ಆದರ್ಶಪ್ರಾಯವಾಗಿದೆ. ಅವಳ ಚರಿತ್ರೆಯನ್ನು ಸ್ವಲ್ಪದರಲ್ಲೇ ಬರೆದಿದ್ದಾರೆ.

* ಭಗ್ನ ಮನೋರಥ, ಶಕುಂತಲೆಯ ಬಾಲ್ಯ, ದುಷ್ಯಂತನ ದರುಶನ, ಗಾಂಧರ್ವ ವಿವಾಹ, ದೂರ್ವಾಸರ ಶಾಪ, ಪತಿಗೃಹಕ್ಕೆ ಪ್ರಯಾಣ, ಸತಿಯ ತ್ಯಾಗ, ಭರತನ ಜನ್ಮ, ಶಾಪ ವಿಮೋಚನೆ, ಪುನರ್ಮಿಲನ, ಭಗ್ನ ಮನೋರಥ, ಶಕುಂತಲೆಯ ಬಾಲ್ಯ, ಈ ಕಥೆಯಲ್ಲಿ ಮುಖ್ಯವಾಗಿ **ಭಗ್ನ ಮನೋರಥ, ಮತ್ತು ಶಕುಂತಲೆಯ ಬಾಲ್ಯ** ಎಂಬ ಎರಡು ಭಾಗಗಳನ್ನು ಹೊಸದಾಗಿ ಸೇರಿಸಿ ಬರೆದಿದ್ದಾರೆ.

**ಭಗ್ನ ಮನೋರಥ:** ಹಿಂದಕ್ಕೆ ವಿಶ್ವಾಮಿತ್ರನೆಂಬ ಅರಸು ರಾಜ್ಯವಾಳುತ್ತಿದ್ದನು. ಒಂದು ದಿನ ಆತನು ತನ್ನ ಸೈನ್ಯದೊಡನೆ ಅಡವಿಗೆ ಬೇಟೆಗೆ ಹೋದನು. ಮಧ್ಯಾಹ್ನದತನಕ ಬೇಟೆಯಾಡಿ ದಣಿದು ಸಮೀಪದಲ್ಲಿರುವ ವಸಿಷ್ಠ ಋಷಿಗಳ ಆಶ್ರಮಕ್ಕೆ ವಿಶ್ರಮಿಸಲು ಹೋದನು. ವಸಿಷ್ಠಋಷಿಗಳು ವಿಶ್ವಾಮಿತ್ರನನ್ನು ಆದರದಿಂದ ಬರಮಾಡಿಕೊಂಡರು. ಮಧ್ಯಾಹ್ನದ ಊಟ ಮುಗಿಸಿಕೊಂಡು ಹೋಗಲು ಹೇಳಿದರು. ವಿಶ್ವಾಮಿತ್ರನು ಒಪ್ಪಿದನು. 'ವಸಿಷ್ಠರು ತನ್ನ ಹತ್ತಿರ ಕಾಮಧೇನು' ಎಂಬ ಆಕಳು ಇದೆ, ಅದರಿಂದ ಇಷ್ಟು ಜನರಿಗೆ ಊಟ ದೊರಕಿತೆಂದೂ ಹೇಳಿದರು. ವಿಶ್ವಾಮಿತ್ರನು ಕಾಮಧೇನುವನ್ನು ತನಗೆ ಕೊಡಬೇಕೆಂದು ಬೇಡಿದನು. ವಸಿಷ್ಠ ಋಷಿಗಳು ಅದಕ್ಕೊಪ್ಪಲಿಲ್ಲ. ವಿಶ್ವಾಮಿತ್ರನು ಬಲವಂತದಿಂದ ಕಾಮಧೇನುವನ್ನು ತೆಗೆದುಕೊಂಡು ಹೋಗಲು ಸಿದ್ಧನಾದನು. ವಸಿಷ್ಠರು ಸಾಮಾನ್ಯ ಋಷಿಗಳಲ್ಲ. ಬ್ರಹ್ಮದೇವರ ಮಾನಸ ಪುತ್ರರು. ಪದ್ಮಾಸನ ಹಾಕಿಕೊಂಡು ಕುಳಿತುಬಿಟ್ಟರು. ವಿಶ್ವಾಮಿತ್ರನು ಉಂಡಮನೆಗೆರಡು ಬಗೆದನು. ವಸಿಷ್ಠರ ಮೇಲೆ ಬಾಣ ಸುರಿಸಲು ತನ್ನ ಸೈನ್ಯಕ್ಕೆ ಆಜ್ಞಾಪಿಸಿದನು. ಆದರೆ ಸೈನಿಕರು ಬಿಟ್ಟ ಬಾಣಗಳೆಲ್ಲ ಸೈನಿಕರಿಗೆ ತಿರುಗಿ ಬಂದು ಬಡಿದವು. ವಿಶ್ವಾಮಿತ್ರನಿಗೆ ಪಶ್ಚಾತಾಪವಾಯಿತು. ಆಗ ಆತನು "ಈ ಜಗತ್ತಿನಲ್ಲಿ ಬ್ರಹ್ಮಬಲವೇ ಬಲವು ಅದರ ಮುಂದೆ ಕ್ಷತ್ರಿಯ ಬಲವನ್ನು ಸುಡಬೇಕು" ಎಂದು ಯೋಚಿಸಿ ರಾಜ್ಯವನ್ನು ತೊರೆದು ವನಕ್ಕೆ ತಪಶ್ಚರ್ಯಕ್ಕೆ ಹೋದನು.

ವಿಶ್ವಾಮಿತ್ರನು ಹಠಮಾರಿಯು. ಮನಸ್ಸಿಗೆ ಬಂದದ್ದನ್ನು ಮಾಡಿಯೇ ತೀರತಕ್ಕಂಥವನು. ಭಗವಾನ್ ಶ್ರೀವಿಷ್ಣುನನ್ನು ಕುರಿತು ಕಠಿಣತರವಾದ ತಪಶ್ಚರ್ಯವನ್ನು ಮಾಡಲು ಆರಂಭಿಸಿದನು. ಆತನ ತಪಶ್ಚರ್ಯಕ್ಕೆ ಭೂದೇವಿಯು ನಡಗಿದಳು. ಇಂದ್ರನೂ ವಿಶ್ವಾಮಿತ್ರನ ತಪಶ್ಚರ್ಯದಿಂದ ಹೆದರಿದನು. ಆತನಿಗೆ ಸಕಲರೂ ರಾಜರ್ಷಿ ಎಂದು ಕರೆದರು. ಆದರೆ ಆತನು ಬ್ರಹ್ಮರ್ಷಿ ಆಗುವವರೆಗೆ ತಪವು ಬಿಡಲಿಕ್ಕಿಲ್ಲವೆಂಬ ಪಣವನ್ನು ಮಾಡಿದ್ದನು. ದೇವತೆಗಳು ವಿಶ್ವಾಮಿತ್ರನ ಮನಸ್ಸು ಪೂರ್ಣ ಪಕ್ವವಾಗಿರುವುದೋ ಇಲ್ಲವೋ ಎಂಬುದನ್ನು ಪರೀಕ್ಷಿಸುವುದಕ್ಕಾಗಿ 'ಮೇನಕೆ' ಎಂಬ ಅಪ್ಸರಾ ಸ್ತ್ರೀಯನ್ನು ಭೂಲೋಕಕ್ಕೆ ಕಳಿಸಿದರು.

"ಮೇನಕೆಯು ಇಂದ್ರನ ಆಸ್ಥಾನದ ನರ್ತಕಿಯು, ಸ್ವರ್ಗ ಸುಂದರಿಯು, ಅವಳು ಜನರನ್ನು ಮೋಹಿಸುವವರಲ್ಲಿ ಒಳ್ಳೇ ನಿಷ್ಣಾತಳು. ಅವಳು ವಿಶ್ವಾಮಿತ್ರನು ತಪಶ್ಚರ್ಯಕ್ಕೆ ಕುಳಿತಲ್ಲಿಗೆ ಬಂದಳು. ಒಳ್ಳೇ ಹಾವ-ಭಾವದಿಂದ ವಿಶ್ವಾಮಿತ್ರನ ಮುಂದೆ ಬಂದು ಗಾಯನ, ನರ್ತನವನ್ನು ಆರಂಭಿಸಿದಳು. ವಿಶ್ವಾಮಿತ್ರನು ಅಪ್ಸರೆಯ ಗಾಯನಕ್ಕೆ ಮನಸೋತು ಕಣ್ಣುತೆರೆದು ಅವಳನ್ನು ನೋಡಿದನು. ಆಗ ವಿಶ್ವಾಮಿತ್ರನ ಮನಸ್ಸು ಚಂಚಲವಾಯಿತು. ಮೇನಕೆಯಲ್ಲಿ ಅವನ ಮನಸ್ಸು ರಮಿಸಿತು. ವಿಶ್ವಾಮಿತ್ರನು ತಪವನ್ನು ಬಿಟ್ಟನು. ಮೇನಕೆಯ ಕೂಡ ಆನಂದದಿಂದ ಕಾಲಕಳೆಯ ಹತ್ತಿದನು. ಹೀಗೆ ಕೆಲವು ದಿವಸಗಳು ಗತಿಸಿದವು. ಮೇನಕೆಯು ಸ್ತ್ರೀರತ್ನವನ್ನು ಹಡೆದಳು. ಮೇನಕೆಯು ತನ್ನ ಕೆಲಸವಾಯಿತೆಂದು ತಿಳಿದು ಆ ಕೂಸನ್ನು ಅಲ್ಲಿಯೇ ಗಿಡದಡಿಯಲ್ಲಿ ಬಿಟ್ಟು ದೇವಲೋಕಕ್ಕೆ ಹೊರಟು ಹೋದಳು. ಆ ಕೂಸೆ 'ಶಕುಂತಲೆ'."[೧೧]

ವಿಶ್ವಾಮಿತ್ರನಿಗೆ ಮೇನಕೆಯು ಹೊರಟುಹೋಗಲು ಪಶ್ಚಾತ್ತಾಪವಾಯಿತು. ತಾನು ಸಕಲ ಐಶ್ವರ್ಯ, ಸ್ತ್ರೀ, ರಾಜ್ಯಗಳನ್ನು ಬಿಟ್ಟು ಬಂದಾಗ್ಯೂ ಮೋಹ ಪಾಶದಲ್ಲಿ ಪುನಃ ಸಿಕ್ಕದ್ದಕ್ಕಾಗಿ ಕೆಡುಕೆನಿಸಿತು. ಆ ಕೂಸನ್ನು ಅಲ್ಲಿಯೇ ಬಿಟ್ಟು ಬೇರೆ ಕಡೆಗೆ ತಪಶ್ಚರ್ಯಕ್ಕೆ ಹೊರಟು ಹೋದನು.

**ಶಕುಂತಲೆಯ ಬಾಲ್ಯ:** ಅಲ್ಲಿಯೇ ಸ್ವಲ್ಪ ದೂರದಲ್ಲಿ ಕಣ್ವ ಋಷಿಗಳ ಆಶ್ರಮವಿತ್ತು. ನಿತ್ಯದಂತೆ ಕಣ್ವಋಷಿಗಳು ಸ್ನಾನಕ್ಕಾಗಿ ನದಿಗೆ ಹೊರಟ್ಟಿದ್ದರು. ಅವರ ದೃಷ್ಟಿಗೆ ಅಕಸ್ಮಾತ್ತಾಗಿ ಆ ಕೂಸು ಬಿದ್ದಿತು. ಆ ಕೂಸಿನ ಸುತ್ತಲೂ ಶಕುಂತ ಪಕ್ಷಿಗಳ ಗುಂಪೊಂದನ್ನು ಕಂಡರು. ತೀರ ಸಮೀಪಕ್ಕೆ ಹೋಗಿ ನೋಡಿದರು. ಕೂಸು ಆಟವಾಡುತ್ತಾ ಮಲಗಿತ್ತು. ಈ ಮುದ್ದಾದ ಮಗುವನ್ನು ಇಲ್ಲಿ ಯಾರು ಬಿಟ್ಟು ಹೋಗಿರುವರೋ ಎಂದು ಮನದಲ್ಲೇ ಮರಗಿದರು. ಕೂಸಿನ ಮೇಲೆ ಕನಿಕರ ಪಟ್ಟು ತಾವು ಬ್ರಹ್ಮಚಾರಿಗಳಾದರೂ ಆ ಕೂಸನ್ನು ಎತ್ತಿಕೊಂಡು ಆಶ್ರಮಕ್ಕೆ ತೆಗೆದುಕೊಂಡು ಬಂದರು. ಕೆಲವು ದಿವಸಗಳ ತರುವಾಯ ಅವರಿಗೆ ನಾರದರಿಂದ ಇದು ವಿಶ್ವಾಮಿತ್ರನ ತಪಶ್ಚರ್ಯದ ಫಲವೆಂದು ತಿಳಿಯಿತು. ಆ ಕೂಸನ್ನು ಶಕುಂತ ಪಕ್ಷಿಗಳು ಜೋಕೆ ಮಾಡಿದ್ದರಿಂದ ಆ ಕೂಸಿಗೆ ಶಕುಂತಲೆ ಎಂದು ಹೆಸರಿಟ್ಟರು.

ಶಕುಂತಲೆಯು ಕಣ್ವಋಷಿಗಳ ಆಶ್ರಮದಲ್ಲಿ ಹುಣ್ಣಿಮೆಯ ಚಂದ್ರನಂತೆ ಬೆಳೆದಳು. ಅವಳ ರೂಪಲಾವಣ್ಯಗಳು ಮನೋಹರವಾಗಿದ್ದವು. ಅವಳು ಗುಣದಿಂದ ಸದ್ಗುಣಿಯಾಗಿದ್ದಳು. ಬುದ್ಧಿಯಿಂದ ಚತುರಳಾಗಿದ್ದಳು. ಅವಳು ಅಲ್ಲಿ ತಂದೆಯಾದ ಕಣ್ವಋಷಿಗಳ ಸೇವೆಯಲ್ಲಿ ಸದಾಕಾಲ ಮಗ್ನಳಾಗಿರುತ್ತಿದ್ದಳು. ಕಣ್ವಋಷಿಗಳಿಗೂ ಶಕುಂತಲೆಯನ್ನು ಬಿಟ್ಟು ಒಂದು ಅರ್ಗಳಿಗೆ ಕೂಡ ಇರಲು ಆಗುತ್ತಿರಲಿಲ್ಲ.

ಶಕುಂತಲೆಯ ಜೊತೆಗೆ ಪ್ರಿಯಂವದೆ, ಅನಸೂಯೆ ಮೊದಲಾದ ಋಷಿಪುತ್ರಿಯರು ಇರುತ್ತಿದ್ದರು. ಶಕುಂತಲೆಯು ಅವರ ಜೊತೆಗೆ ಆಶ್ರಮದಲ್ಲಿ ಗಿಡಗಳಿಗೆ ನೀರು ಹಾಕುವುದು, ಋಷಿಗಳ ಪೂಜೆಯ ಸಾಮಗ್ರಿಗಳನ್ನು ಸಿದ್ಧಪಡಿಸಿಡುವುದು ಇತ್ಯಾದಿ ಕಾರ್ಯಗಳನ್ನು ಮಾಡುತ್ತಿದ್ದಳು. ಶಕುಂತಲೆಯು ಬೆಳೆದು ದೊಡ್ಡವಳಾದಳು. ಅವಳು ಪ್ರಾಯಕ್ಕೆ ಬಂದಳು. ಕಣ್ವಋಷಿಗಳಿಗೆ ಅವಳ ಲಗ್ನದ ಚಿಂತೆಯೂ ಆವರಿಸಿತು. ಆದರೆ ಅವರು ಶಕುಂತಲೆಯ ಮುಂದೆ ಈ ಮಾತನ್ನು ಆಡುತ್ತಿದ್ದಿಲ್ಲ. ಶಕುಂತಲೆಯು ರಾಜಕುಮಾರಿಯಾದರೂ ಋಷಿಕುಮಾರಿಯರ ಮಧ್ಯದಲ್ಲಿ ಬೆಳೆದಳು. ವೇಷಭೂಷಣಗಳನ್ನು ಋಷಿಕುವರಿಯಂತೆ ಧರಿಸಿದ್ದರೂ ಬೂದಿ ಮುಚ್ಚಿದ ಕೆಂಡದಂತೆ ಅವಳು ತೇಜೋವಂತಳಾಗಿ ಕಾಣುತ್ತಿದ್ದಳು. ಋಷಿಗಳ ಆಶ್ರಮದಲ್ಲಿ ಜಿಗರೆ, ನವಿಲು, ಕೋಗಿಲೆ ಮುಂತಾದ ಪಶು ಪಕ್ಷಿಗಳಿದ್ದವು. ಅವು ಸಹ ಶಕುಂತಲೆಯನ್ನು ಬಹಳ ಪ್ರೀತಿಸುತ್ತಿದ್ದವು. ಕಾಳಿದಾಸನ ಅಭಿಜ್ಞಾನ ಶಾಕುಂತಲ ನಾಟಕಕ್ಕಿಂತ ಮುಂದೆ ಹೋಗಿ ವಿಶ್ವಾಮಿತ್ರನ ಬಗ್ಗೆ ಶಕುಂತಲೆಯ ಬಾಲ್ಯದ ಬಗ್ಗೆ ನಿಕರವೆನಿಸುವಂತಹ ಮಾಹಿತಿಯನ್ನು ತಮ್ಮ ಕಥೆಯಲ್ಲಿ ಬರೆದಿದ್ದಾರೆ.

**ಎನ್.ಎಸ್.ಎ.ರಂಗಾಚಾರ್:** ಕೃಷ್ಣ ಚೈತನ್ಯ ಅವರ ಕಥೆಯನ್ನು ಕನ್ನಡಕ್ಕೆ ಅನುವಾದಿಸಿದ್ದಾರೆ. **ಶಕುಂತಳೆ** ಕತೆಯು ಉತ್ತಮವಾದ ಭಾಷಾಕೌಶಲ್ಯದಿಂದ ಕೂಡಿದೆ. ಏಳು ಅಂಕಗಳನ್ನು ಏಳು ಭಾಗಗಳನ್ನಾಗಿ ವಿಂಗಡಿಸಿಕೊಂಡು ಕತೆಯನ್ನು ಬರೆದಿದ್ದಾರೆ.

ಕಣ್ವರ ತಪೋವನವನ್ನು ಅಲ್ಲಿ ವಾಸಿಸುತ್ತಿದ್ದ ಅಪೂರ್ವ ಸುಂದರಿ ಶಕುಂತಳೆಯನ್ನು ಚಿತ್ರಿಸುವ ಪ್ರಯತ್ನದಲ್ಲಿ ತನ್ನ ದುಃಖವನ್ನು ಸ್ವಲ್ಪ ಶಮನ ಮಾಡಿಕೊಳ್ಳಲು ರಾಜನು ಬಯಸಿದನು. ಚಿತ್ರಫಲಕದ ಮೇಲೆ ಆ ದೃಶ್ಯ ಕ್ರಮ ಕ್ರಮವಾಗಿ ರೂಪುಗೊಳ್ಳುತ್ತಾ ಬಂದಿತು. ಮಾಲಿನೀ ನದಿಯನ್ನು ಅದರ ಮಳಲದಂಡೆಯ ಮೇಲೆ ವಿಶ್ರಮಿಸುತ್ತಿದ್ದ ಹಂಸಪಕ್ಷಿಗಳ ಜತೆಯನ್ನು ಮಾಢವ್ಯ ನೋಡುತ್ತಿದ್ದ ನದಿಯ ಹಿಂಬದಿಯಲ್ಲಿ ನೆಲವು ಕಡಿದಾಗಿ ಏಳುತ್ತಿತ್ತು. ಹಿಮಾಲಯದ ತಪ್ಪಲು ಕಾಣಿಸುತ್ತಿದ್ದವು. ಮರದ ನೆರಳಲ್ಲಿ ಹೆಣ್ಣು ಜಿಂಕೆಯೊಂದು ಕಣ್ಣಿನ ನವೆಯನ್ನು ಹೋಗಲಾಡಿಸಿಕೊಳ್ಳಲು ತನ್ನ ಗಂಡಿನ ಕೊಂಬಿಗೆ ಕೆರೆಯುತ್ತಿತ್ತು.

ಶಕುಂತಳೆಯ ರೂಪ ಬಲು ಮನೋಹರ ಬಣ್ಣಗಳಲ್ಲಿ ಮೂಡಿ ಬಂದಿತ್ತು. ಆಗ ತಾನೇ ನೀರೆರದ ವೃಕ್ಷವೊಂದಕ್ಕೆ ಅವಳು ಒರಗಿ ನಿಂತಿದ್ದಳು. ಅವಳ ಮುಖ ಕೆಂಪಾಗಿತ್ತು. ಸಡಿಲವಾದ ಅವಳ ಜಡೆಯ ಕೂದಲಿಂದ ಹೂವುಗಳು ಉದುರುತ್ತಿದ್ದವು. ದಣಿದ ಬಳ್ಳಿಗಳಂತೆ ಅವಳ ತೋಳುಗಳು ಕೆಳಗೆ ಜೋತಿದ್ದವು. ಅವಳು ತುಸು ಆಯಾಸಗೊಂಡವಳಂತೆ ಕಾಣಿಸುತ್ತಿದ್ದಳು. ಅವಳ ಕಿವಿಯ ಮೇಲೆ ಸಿಕ್ಕಿಸಿಕೊಂಡಿದ್ದ ಕಾಡು ಹೂವಿನ ಕೇಸರಗಳು ಅವಳ ಕಪೋಲವನ್ನು ಸವರುತ್ತಿದ್ದವು.

ನದಿಯ ನೀರನ್ನು ಕಡೆಗಣಿಸಿ, ಮರೀಚಿಕೆಯಿಂದ ಬಾಯಾರಿಕೆಯನ್ನು ಕಳೆದುಕೊಳ್ಳಲು ಯತ್ನಿಸುವ ದಣಿದ ದಾರಿಹೋಕನಂತೆ ತನ್ನ ಸ್ಥಿತಿ ಆಗಿದೆಯೆಂಬುದನ್ನು ದುಃಖಿತನಾದ ಆ ದೊರೆ ಮನಗಂಡನು. ಅವನ ಕಣ್ಣುಗಳಿಂದ ಕಂಬನಿ ಹರಿದು ಆ ಚಿತ್ರದ ಬಣ್ಣವನ್ನೆಲ್ಲಾ ಕೆಡಿಸಿತು. ಆತ ಹೀಗೆಂದು ವಿಲಪಿಸಿದ. ಅವಳನ್ನು ನಾನು ಕನಸಿನಲ್ಲಿಯೂ ಕಾಣಲಾರೆ. ಏಕೆಂದರೆ ನನಗೆ ನಿದ್ರೆಯೇ ಬಾರದು. ಈ ಚಿತ್ರದಲ್ಲಿಯಾದರೂ ಅವಳ ರೂಪವನ್ನು ನೋಡುವೆನೆಂದರೆ ಅದೂ ಸಾಧ್ಯವಾಗಲಿಲ್ಲ. ಏಕೆಂದರೆ ನನ್ನ ದೃಷ್ಟಿಯನ್ನು ಎಡೆಬಿಡದೆ ಹರಿಯುವ ಕಣ್ಣೀರಿನಿಂದ ತೊಯ್ಯುತ್ತಿದೆ. ಹೀಗೆ ಕಥೆಯೂ ಉತ್ತಮವಾಗಿ ಮೂಡಿ ಬಂದಿದೆ. ಇದೊಂದು ಕನ್ನಡ ಸಾಹಿತ್ಯ ಪರಿಸರದಲ್ಲಿ ಮರು ಬರವಣಿಗೆಯಂತಿದೆ.

**ಡಾ.ವೀಣಾ ಶಾಂತೇಶ್ವರ ಅವರ ನಿರಾಕರಣೆ ಕತೆ:** ಈ ಕತೆಯು ಅಭಿಜ್ಞಾನ ಶಾಕುಂತಲಾ ನಾಟಕದ ಕಥಾವಸ್ತುವಿಗಿಂತ ಭಿನ್ನವಾಗಿದೆ. ಒಬ್ಬ ಸ್ತ್ರೀಯು ತನ್ನ ಮನಸ್ಸಿನ ತುಮುಲಗಳನ್ನು ಪಡೆಯುವ ವಿಧಾನದಿಂದ ಬೇಸತ್ತು ಅದಕ್ಕೆ ಕಾರಣರಾದವರನ್ನು ಸಹಿಸದೆ ಅವರ ವಿರುದ್ಧ ಸೇಡು ತೀರಿಸಿಕೊಳ್ಳುವ ವಿಧಾನವನ್ನು ಕಥೆಯಲ್ಲಿ ಲೇಖಕಿ ವಿವರಿಸಿದ್ದಾರೆ. ಕಾರಣ ಆಧುನಿಕ ಪರಂಪರೆಯಲ್ಲಿ ಪುರುಷಪ್ರಧಾನ ವ್ಯವಸ್ಥೆಯನ್ನು ತಿರಸ್ಕರಿಸುವುದರ ಮೂಲಕ ಪ್ರಶ್ನೆ ಮಾಡಿದ್ದಾರೆ ಹಾಗೂ ಆಶ್ಚರ್ಯ ಚಿಹ್ನೆಯ ಮೂಲಕ ಪ್ರಶ್ನಿಸಿದ್ದಾರೆ.

ಉದಾ: 'ದುಷ್ಯಂತನ ತಿರಸ್ಕಾರದಿಂದ ಮನನೊಂದ ಶಕುಂತಲೆ ತನ್ನ ಪುತ್ರನ ಮುಖದಿಂದ ಅನೇಕ ಸಂಗತಿಗಳನ್ನು ಸಹಿಸಿಕೊಂಡು ಬದುಕಿದ ವಿವರಣೆಯನ್ನು ಈ ಕಥೆಯ ಮೂಲಕ ವ್ಯಕ್ತಪಡಿಸಿದ್ದಾರೆ. ಪರಂಪರೆಯನ್ನು ಧಿಕ್ಕರಿಸಿ ದುಷ್ಯಂತನನ್ನು ನಿರಾಕರಿಸಿ ಪುನಃ ತನ್ನ ರಾಜ್ಯಕ್ಕೆ

ಹಿಂದಿರುಗುವಂತೆ ಕಥೆಯ ನಾಯಕಿಯನ್ನು ಚಿತ್ರಿಸಿದ್ದಾರೆ. ಹಲವು ವರ್ಷಗಳಿಂದ ರಾತ್ರಿ ಹಗಲೆನ್ನದೆ ಅವಮಾನದ ಅಗ್ನಿಯಲ್ಲಿ ಬೇಯುತ್ತಿರುವ, ನಿರೀಕ್ಷೆಯ ನೋವಿನಲ್ಲಿ ನಲುಗುತ್ತಿರುವ ತನ್ನದೇ ತಪ್ತ ಮನಸ್ಸಿನ ದೇಹವೇ ಇದು? ದುಷ್ಯಂತ! ಕಾಡಿನಲ್ಲಿ ಮೊಗ್ಗಾಗಿದ್ದ ತನ್ನ ಮುಗ್ಧಜೀವನದಲ್ಲಿ ಪ್ರವೇಶಿಸಿ ಪ್ರೀತಿಯ ಮೊದಲ ಪಾಠ ಕಲಿಸಿದ ಪುರುಷ ತನಗೇ ಅರಿವಿಲ್ಲದಂತೆ ತನ್ನಲ್ಲಿ ಪ್ರೀತಿಯ ಮೊದಲ ಹೆಣ್ತನದ ಅಪಾರ ಆಸೆ ಆಕಾಂಕ್ಷೆಗಳನ್ನು ಪ್ರಚೋದಿಸಿ ಅರಳಿಸಿದಾತ. ತನ್ನ ಬಿಸಿ ಅಪ್ಪುಗೆಯಲ್ಲಿ ಜಗವನ್ನೇ ಮರೆಸಿದಾತ. ಜೀವನ ಒಂದು ಸುಂದರ ಕನಸು ಎಂದು ನಂಬಿಸಿದಾತ. ಕ್ಷಣದಲ್ಲಿ ತನ್ನ ಸರ್ವಸ್ವವನ್ನು ಆತನ ಪದತಲದಲ್ಲಿ ಅರ್ಪಿಸುವ ಹಾಗೆ ಮೋಡಿ ಮಾಡಿದಾತ. ನಂತರ... ನಂತರ... ಒಡಲಲ್ಲಿ ಆತನ ವಂಶದ ಕುಡಿಹೊತ್ತು ತುಂಬು ಸಂಕೋಚ, ಕಾತರ, ನಂಬಿಕೆಗಳಿಂದ ಅತನೆಡೆ ಹೋದಾಗ 'ಈಕೆ ಯಾರೋ ಗೊತ್ತಿಲ್ಲ' ಎಂದು ಕೈಜಾಡಿಸಿಬಿಟ್ಟ ಪುರುಷೋತ್ತಮ ಮಹಾರಾಜ ದುಷ್ಯಂತ!

ಮಳೆ ಸುರಿಯುತ್ತಿರುವ ಅದೆಷ್ಟು ರಾತ್ರಿಗಳನ್ನು ತಾನು ಆತನ ನೆನಪಿನಲ್ಲಿ ಕಣ್ಣೀರು ಸುರಿಸುತ್ತ ಕಳೆದೆ... ಹೂಗಳು ಅರಳಿ ಪರಿಮಳ ಬೀರುತ್ತಿರುವಾಗ ಕೋಗಿಲೆಗಳು, ಮಾವಿನೆಲೆಗಳ ಹಿಂದೆ ಅಡಗಿ ಹಾಡುತ್ತಿರುವಾಗ, ನವಿಲುಗಳು ಗರಿಬಿಚ್ಚಿ ಕುಣಿಯುವಾಗ, ಅದೆಷ್ಟೋ ಸಂಜೆ ಮುಂಜಾವುಗಳನ್ನು ತಾನು ಆತನ ವ್ಯರ್ಥ ನಿರೀಕ್ಷೆಯಲ್ಲಿ ಸಂಕಟಪಡುತ್ತಾ ಕಳೆದೆ... ಇಡಿಯ ಜೀವನವೇ ಆತನಿಗಾಗಿ ಕಾಯುವಿಕೆಯಾಗಿ ಹೋಯಿತು...

ಓಹ್! ನಾರಿಯ ಮನೋವ್ಯಾಪಾರವು ನಿಜವಾಗಿ ವಿಚಿತ್ರವಾದುದು. ಯಾವ ಪುರುಷನಿಗಾಗಿ ಹಲವಾರು ವರ್ಷ ಹಗಲಿಡೀ ಕಾಯ್ದು-ಕಾಯ್ದು, ಯಾರಿಗಾಗಿ ಜೀವನವನ್ನೇ ಒಂದು ತಪಸ್ಸನ್ನಾಗಿಸಿದೆನೋ ಆತನು ನಿಜವಾಗಿಯೂ ಬಂದಿರುವಾಗ ಮನಸ್ಸಿನಲ್ಲಿ ಇದೆಂತಹ ನಿರ್ಲಿಪ್ತತೆ? ಇದೆಂತಹ ತಾಟಸ್ಥ್ಯ? ಅದೇಕೆ ತನ್ನ ಮನಸ್ಸು ಹೂವಾಗಿ ಅರಳಲೊಲ್ಲದು? ಗರಿಬಿಚ್ಚಿ ಹಾರಲೊಲ್ಲದು? ಇಷ್ಟು ವರ್ಷಗಳಿಂದ ನಿರೀಕ್ಷಿಸಿದ್ದ ಈ ಸಮಯ ಇಂದು ನಿಜವಾಗಿ ಒದಗಿ ಬಂದಾಗ ಇದೇನು ತನ್ನ ಮನಸ್ಸಿನಲ್ಲಿ ಈ ಬಗೆಯ ವಿಚಿತ್ರ ಕಾಠಿಣ್ಯ?

ವಿನೀತನಾಗಿ ಮೊಳಕಾಲೂರಿದ್ದಾನೆ. ನಾನಂದು ಯಾವುದೋ ಬುದ್ಧಿಮಾಂದ್ಯಕ್ಕೊಳಗಾಗಿ ನಿನ್ನನ್ನು ತಿರಸ್ಕರಿಸಿದೆ. ನನ್ನನ್ನು ಕ್ಷಮಿಸು ಎಂದು ಬೇಡಿದರೂ ಕನಿಕರಿಸದಂತಹ ಮನಸ್ಥಿತಿಯನ್ನು, ಶಾಕುಂತಲೆಯ ಪಾತ್ರವನ್ನು ಚಿತ್ರಿಸಿದ್ದಾರೆ.

ಛೆ! ಅಪರಾಧ-ಕ್ಷಮೆ-ಪಶ್ಚಾತ್ತಾಪ ಈ ಶಬ್ದಗಳಿಗೀಗ ನನ್ನ ದೃಷ್ಟಿಯಲ್ಲಿ ಯಾವ ಅರ್ಥವೂ ಉಳಿದಿಲ್ಲ. ನೂರು ಆಸೆ ಹೊತ್ತು ನಿನ್ನೆಡೆ ಬಂದಿದ್ದ ನನ್ನನ್ನು ನೀನು ಎಂದು ತಿರಸ್ಕರಿಸಿದೆಯೋ ಜೀವನದ ಬಹುಪಾಲು ಮಧುರ ಭಾವನೆಗಳೆಲ್ಲಾ ಆ ದಿನವೇ ಸತ್ತುಹೋದವು. ಅಂದಿನಿಂದ ಇಂದಿನವರೆಗೂ ನಿರಂತರವಾಗಿ ಈ ಶಾಕುಂತಲೆಯ ಬದುಕು ಒಂದು ಅಗ್ನಿಕುಂಡವಾಗಿದೆ...

ಬೆಂಗಾಡಾಗಿದೆ... ಬತ್ತಿ ಹೋದ ಸಮುದ್ರವೂ ಆಗಿದೆ. ಇಂತಹ ನಾನು ಈತನನ್ನು ಸ್ವೀಕರಿಸಬೇಕಂತೆ! ಏನಿದು ವಿಧಿಯ ಕ್ರೂರ ಅಪಹಾಸ್ಯ...!

"ಶಕುಂತಲೆಯ ಆತ್ಮಸಮ್ಮಾನ ಜಾಗೃತವಾಗಿದೆ. ಗೊಡ್ಡು ಸಂಪ್ರದಾಯಗಳ ರೀತಿ-ನೀತಿಗಳ ಎಲ್ಲ ಬಗೆಯ ಸಂಕೋಲೆಗಳನ್ನು ಕಿತ್ತೊಗೆದು ತನ್ನ ಆತ್ಮಸಾಕ್ಷಿಗೆ ಮಾತ್ರ ನಿಷ್ಠಳಾಗಿ ಆಕೆಯೀಗ ನಡೆದುಕೊಳ್ಳಬೇಕಾಗಿದೆ. ಹಳೆಯದನ್ನೆಲ್ಲಾ ಮರೆತು ನೀನು ಮತ್ತೆ ತುಂಬು ಉತ್ಸಾಹದಿಂದ ಹೊಸ ಜೀವನ ಶುರು ಮಾಡಬಹುದು. ಆದರೆ ನೀನು ಘಾಸಿಗೊಳಿಸಿದ ನನ್ನ ಒಳಗು ಮತ್ತೆ ಚೇತರಿಸಲಾರದು. ನೀನು ಹೊಸಕಿಹಾಕಿದ ನನ್ನ ಭಾವನೆಗಳು ಮತ್ತೆ ಜೀವ ತಳೆಯಲಾರವು. ಈ ಶಕುಂತಲೆಯ ಆತ್ಮಸಮ್ಮಾನಕ್ಕೆ ಮಾಯಲಾರದ ಗಾಯವಾಗಿದೆ. ಆಕೆಯಿನ್ನೆಂದೂ ಮೊದಲಿನಂತಾಗಲಾರಳು..."[೧೪] ಎಂದು ಶಕುಂತಲೆಯ ಮನಸ್ಸಿನ ವೇದನೆಯನ್ನು ಲೇಖಕಿ ಕತೆಯಲ್ಲಿ ಬರೆದಿದ್ದಾರೆ.

ಮಹಾರಾಜ ನಾನು ಈ ಅರಮನೆಗೆ ಬಂದಿರುವುದು ಕುಮಾರ ಭರತನ ಶ್ರೇಯಸ್ಸಿಗಾಗಿ ಮಾತ್ರ. ಆತನ ವಿದ್ಯಾಭ್ಯಾಸ, ತರಬೇತಿ ಸರಿಯಾಗಿ ನಡೆಯಬೇಕು ಎಂಬ ಹಂಬಲದಿಂದ ಮಾತ್ರ ನಾನು ಬಂದಿರುವೆ. ನಿನ್ನ ನಂತರ ಅವನು ಈ ಸಾಮ್ರಾಜ್ಯದ ಕೀರ್ತಿಯನ್ನು ಎಲ್ಲ ಕಡೆ ಹರಡುವಂತೆ ನೋಡಿಕೊಳ್ಳಬೇಕಲ್ಲ. ಅವನನ್ನು ಹಾಗೆ ಬೆಳೆಸುವ ಜವಾಬ್ದಾರಿ ನಮ್ಮಿಬ್ಬರದು ಅಲ್ಲವೇ? ಈ ಏಕಮಾತ್ರ ಕಾರಣದಿಂದ ನಾನು ಇಲ್ಲಿರುವೆ. ಇದೊಂದು ಬಿಟ್ಟರೆ ನಮ್ಮಿಬ್ಬರ ಮಧ್ಯೆ ಇನ್ನಾವ ಸಂಬಂಧವೂ ಇನ್ನು ಸಾಧ್ಯವಿಲ್ಲ ಎಂದು ತಿರಸ್ಕರಿಸುತ್ತಾಳೆ.

ಅಂದರೆ ದೇವಿ, ನೀನೇನು ನನ್ನ ತಪ್ಪಿಗಾಗಿ ಶಿಕ್ಷೆ ಕೊಡಲೆಂದು ಹೀಗೆ ಮಾಡುತ್ತಿದ್ದೀಯಾ? ಅಥವಾ ಇದು ಪ್ರತಿರೋಧವೋ?

ಶಕುಂತಲೆಯ ದನಿಯಲ್ಲಿ ನೋವು ಇಣುಕಿತು. "ಇಲ್ಲ ಮಹಾರಾಜ, ನಾನು ಶಿಕ್ಷೆ ಕೊಡುವಷ್ಟು ಕಠಿಣ ಮನಸ್ಸಿನವಳಾಗಲೀ, ಪ್ರತಿರೋಧ ಮಾಡುವಷ್ಟು ಸಣ್ಣ ವಯಸ್ಸಿನವಳಾಗಲೀ ಇಲ್ಲ. ದಯವಿಟ್ಟು ವಿವರಣೆ ಕೇಳಬೇಡ. ಶಕುಂತಲೆಯ ಜೀವನದಲ್ಲಿ ಲೌಕಿಕ ಪ್ರೇಮದ ಅಧ್ಯಾಯ ಮುಗಿದುಹೋಯಿತು." ಮಹಾರಾಜನು ಹೇಳಿದ ಮಾತುಗಳು-ದೂರ್ವಾಸ ಮುನಿಗಳ ಶಾಪದಿಂದ ಉಂಗುರವು ಕಳೆದುಹೋಗಿ ನನ್ನ ಬುದ್ಧಿಗೆ ಮಾಂದ್ಯವುಂಟಾಗಿ ಇಷ್ಟೆಲ್ಲ ಅನಾಹುತವಾಯಿತೆಂದು ಪೂಜ್ಯರಾದ ಮಾರೀಚರು ಹೇಳಲಿಲ್ಲವೆ?

ಶಕುಂತಲೆಯ ಬಾಡಿದ ಮುಖದ ಮೇಲೆ ವಿಷಾದದ ಮುಗುಳ್ನಗು ಮೂಡಿತು. ತಾನು ಮಾಡಿದ ತಪ್ಪಿನಿಂದ ಸುಲಭವಾಗಿ ಪಾರಾಗಲು ಪುರುಷನಿಗೆ ನೂರು ದಾರಿಗಳಿವೆ. ತನ್ನ ಅನುಚಿತ ವರ್ತನೆಯಿಂದ ಬೇರೆಯವರಿಗೆ ಆಗುವ ನೋವಿನ ಹೊಣೆಯಿಂದ ತಪ್ಪಿಸಿಕೊಳ್ಳಲೂ ಆತನಿಗೆ ಹಲವು ಮಾರ್ಗಗಳಿವೆ. ಪುರುಷ ತಪ್ಪು ಮಾಡಿದನೆಂದರೆ ನಮ್ಮ ಸಮಾಜ ಗಂಭೀರವಾಗಿ ಪರಿಗಣಿಸುವುದೂ ಇಲ್ಲ. ಆದ್ದರಿಂದ ಆತನೂ ಲಜ್ಜಿತನಾಗುವುದಿಲ್ಲ ಮತ್ತು ಇದನ್ನೆಲ್ಲ ನಾನೀಗ ಚರ್ಚೆ ಮಾಡಬಯಸುವುದೂ ಇಲ್ಲ. ಮಾತು ಆಡುತ್ತಿದ್ದಂತೆ ಶಕುಂತಲೆ ಗಂಭೀರಳಾದಳು. "ನಾನು

ಹೇಳುವುದಿಷ್ಟೆ, ಮುನಿಗಳ ಶಾಪದಂತಹ ಬಾಹ್ಯಕಾರಣಗಳಿಂದ ಉಂಗುರವು ಕಳೆದುಹೋಯಿತೆಂಬ ಸಣ್ಣ ನೆಪದಿಂದ ಒಬ್ಬ ಗಂಡಸು ತಾನು ಪ್ರೀತಿಸಿದ, ಕೂಡಿದ, ಫಲಿಸಿದ ಹೆಣ್ಣನ್ನು ದೂರ ಮಾಡುವುದಾದರೆ ಆ ಪ್ರೀತಿಗೆ ಅರ್ಥವಿಲ್ಲ. ಅಂಥವನನ್ನು ಕೂಡಲು ನನ್ನ ಆತ್ಮಸಮ್ಮಾನ ಒಪ್ಪುವುದಿಲ್ಲ. ಹೆಣ್ಣಾಗಿ ನಾನು ಆತ್ಮಸಾಕ್ಷಿಗೆ ವಿರುದ್ಧವಾಗಿ ವರ್ತಿಸಲಾರೆ. ಪ್ರಾಜ್ಞನಾದ ನಿನಗೆ ಹೆಚ್ಚಿಗೆ ಹೇಳಲಾರೆ.

ಹೊರಗಡೆ ನಿಧಾನವಾಗಿ ಕತ್ತಲು ಪಸರಿಸುತ್ತಿತ್ತು. ಭಾರವಾದ ಕಾಲುಗಳನ್ನೆತ್ತಿ ಅಸ್ಥಿರ ಹೆಜ್ಜೆಗಳನ್ನಿಡುತ್ತ ಪುರುವಂಶದ ಚಕ್ರವರ್ತಿ ಧೀರೋದಾತ್ತ ಪುರುಷಶ್ರೇಷ್ಠ ದುಷ್ಯಂತನು ನಿಧಾನವಾಗಿ ಶಕುಂತಲೆಯ ಅಂತಃಪುರದಿಂದ ಹೊರಗೆ ನಡೆದನು..."[೧೫] ಹೀಗೆ ಕಥೆಯು ಕೊನೆಗೊಳ್ಳುತ್ತದೆ.

**ಮಾಸ್ತಿಯವರ ಕಥೆಗಳು: ಹೇಮ ಕೂಟದಿಂದ ಬಂದ ಮೇಲೆ:** ಇದು ಗೌತಮಿಯ ಕಥೆಯಂತೆಯೇ 'ಶಾಕುಂತಲ'ದಿಂದ ಪ್ರಚೋದಿತವಾದದ್ದು. ಶಕುಂತಲೆ ರಾಣಿಯಾಗಿ ಪ್ರತಿಷ್ಠಿತಳಾದ ಮೇಲೆ ಕಣ್ವರ ಆಶ್ರಮಕ್ಕೆ ಭೇಟಿ ಕೊಟ್ಟ ಕಥೆ. ಗೌತಮಿ ತನ್ನ ಕಥೆಯನ್ನು ಹೇಳಿದ್ದೂ ಇದೇ ಸಂದರ್ಭದಲ್ಲಿ. ಇದನ್ನು ಕಥೆ ಎನ್ನುವುದಕ್ಕಿಂತ ಚಿತ್ರ ಎನ್ನುವುದು ಸರಿ. ಚಿತ್ರ ಎನ್ನುವುದಕ್ಕೆ ಬದಲಾಗಿ ಗೀತೆ ಎಂದರೂ ಸಮಂಜಸವಾಗುತ್ತದೆ. ಗೌತಮಿಯ ಕಥೆಯ ಮಧ್ಯಭಾಗದಲ್ಲಿ ಅವಳು ದತ್ತನಲ್ಲಿ ಪ್ರಣಯಭಿಕ್ಷೆಯನ್ನು ಬೇಡಲು ಬಂದ ದೃಶ್ಯದಲ್ಲಿ ಒಳ್ಳೆಯ ನಾಟಕದ ಗುಣವಿದೆ. ಅದು ಈ ಗೀತೆ ಅಪಚಾರವಾಗದಂತೆ, ಮನಸ್ಸು ನೋಯದಂತೆ ನಡೆದುಕೊಳ್ಳುತ್ತಾಳೆ. ಅವಳಂಥ ಸರಳ ಹೃದಯಕ್ಕೆ ಇದು ಸಹಜವೇ. ಆದರೂ ರಾಣಿಯಾದ ಮೇಲೆ, ರಾಣಿತನ ಸಿದ್ಧಿಸಿದ ಮೇಲೆ, ಅವಳ ಗುಣಗಳು ಸ್ಥಾನದ ಪ್ರಭಾವದಿಂದ ಮಸಕಾಗುವ ಬದಲು ತನ್ನ ಪದವಿಯ ಜೊತೆಗೆ ಬಂದ ಜವಾಬ್ದಾರಿಯ ಅರಿವಿನಿಂದಾಗಿ ಮತ್ತಷ್ಟು ಹಿರಿಮೆ ಪಡೆಯುತ್ತವೆ.

ಇಲ್ಲಿ ಮಾಸ್ತಿಯವರು ಶಕುಂತಲೆಯ ಸ್ವಭಾವ ಎಷ್ಟು ಉದಾತ್ತವಾದದ್ದೆಂದು ತೋರಿಸಲು ಹಂಸಪದಿಕೆಯನ್ನು ಉಪಯೋಗಿಸಿಕೊಂಡಿದ್ದಾರೆ. ಶಕುಂತಲೆ ಬಂದಾಗ ಹಂಸಪದಿಕೆ 'ಇನ್ನು ತಾನು ಜೀವನದಲ್ಲಿ ನಿರೀಕ್ಷಿಸಬೇಕಾದ ಸುಖವೇನೂ ಇಲ್ಲ' ಎಂದುಕೊಂಡಳು. ಆದರೆ ಶಕುಂತಲೆ ತಾನು ಮಗನನ್ನು ಹೆತ್ತ ಮುಖ್ಯರಾಣಿ ಎಂದು ಅರಮನೆಯಲ್ಲಿ ಎಲ್ಲರಿಗೂ ಆಜ್ಞೆಯಾಗಿತ್ತಾದರೂ ತಾನೇ ಆಕೆಯ ಬಳಿಗೆ ಹೋದಳು. 'ನೀವು ನನಗೆ ಹಿರಿಯರು. ತಿಳಿಯದ್ದನ್ನು ಹೇಳಿಕೊಡಬೇಕು' ಎಂದಳು. ಸಪತ್ನೀಮಾತ್ಸರ್ಯವನ್ನು ಜಯಿಸಿ ಅವಳ ಸ್ನೇಹವನ್ನು ಸಂಪಾದಿಸಿದಳು. ಬಲವಂತ ಮಾಡಿ ತಾನೇ ರಾಜನ ಮತ್ತು ರಾಜಮಾತೆಯ ಅನುಮತಿ ಪಡೆದು ಹಂಸಪದಿಕೆಯನ್ನು ಆಶ್ರಮಕ್ಕೆ ಕರೆದುಕೊಂಡು ಹೋದಳು. ಎಷ್ಟೋ ವರ್ಷಗಳಾದ ಮೇಲೆ ಅನಸೂಯೆಯನ್ನು ನೋಡಿ ಕ್ಷಣಮಾತ್ರ ಧೃತಿಗೆಟ್ಟ ಸಮಯದಲ್ಲೂ ಹಂಸಪದಿಕೆಯನ್ನು ಮರೆಯದೇ "ಇಕೋ ನೋಡು, ಯಾರು ಬಂದಿದ್ದಾರೆ. ನಮ್ಮ ಅಕ್ಕ, ನನ್ನನ್ನು ತಂಗಿಗಿಂತ ಹೆಚ್ಚಾಗಿ ನೋಡಿಕೊಳ್ಳುತ್ತಿದ್ದಾರೆ" ಎಂದು ಆಕೆಯ ಪರಿಚಯ ಮಾಡಿಕೊಟ್ಟಳು.

ಇತರರ ವಿಷಯದಲ್ಲೂ ಶಕುಂತಲೆ ಇಷ್ಟೇ ಎಚ್ಚರಿಕೆಯಿಂದ ನಡೆದುಕೊಳ್ಳುತ್ತಾಳೆ. ಮಾಢವ್ಯನಿಗೆ ಆ ಗುಂಪಿನಲ್ಲಿ ತಾನು ಒಂಟಿಯಾದೆ ಎನ್ನಿಸದಂತೆ ಅವನನ್ನು ಮಾತಿನಲ್ಲಿ ಸೇರಿಸಿಕೊಳ್ಳುತ್ತಾಳೆ. ಶಾಙ್ಗರವನಿಗೆ "ಅಂದು ನೀನು ಹೇಳಿದ್ದು ಆಗಣ ಸಂದರ್ಭದಲ್ಲಿ ತಪ್ಪಲ್ಲ" ಎಂದು ಸಮಾಧಾನ ಮಾಡಿ ತನ್ನನ್ನು ಬಹುವಚನದಲ್ಲಿ ಕರೆಯಕೂಡದೆಂದು ಬೇಡಿಕೊಳ್ಳುತ್ತಾಳೆ. ದುಷ್ಯಂತನಲ್ಲಿ ಅವಳು ಈಗ "ನಾನು ನಿನ್ನ ಪಕ್ಷದ ರಾಯಭಾರಿಯೇ?" ಎಂದು ಮುಂತಾಗಿ ಹಾಸ್ಯಧ್ವನಿಯಿಂದ ಮಾತಾಡಬಲ್ಲಳು. ಅವರಿಬ್ಬರ ಪ್ರೇಮವು ಕಾಲ, ದುಃಖ, ಪಶ್ಚಾತ್ತಾಪ, ಕ್ಷಮೆಯ ಮಹಿಮೆ ಇವೆಲ್ಲದರಿಂದ ಪರಿಣತವಾಗಿದೆ. ಆದರೂ ಕಣ್ವರು ಹೇಳಿದ ಮಾತನ್ನು ಅವನಿಗೆ ತಿಳಿಸುವಾಗ ಅವಳು "ನಿನ್ನ ಮಗನಿಗೆ ಪಟ್ಟ ಕಟ್ಟಿ" ಎಂಬ ಭಾಗವನ್ನು ಮಾತ್ರ ತಿಳಿಸಲಿಲ್ಲ. ಪಟ್ಟ ಕಟ್ಟುವನೆಂಬ ವಿಷಯದಲ್ಲಿ ಸಂದೇಹವಿರಲಿಲ್ಲ." ಆದರೂ "ಯಾವ ವಿಷಯದಲ್ಲೂ ಅತಿ ನಿಶ್ಚಯ ಬೇಡ." ತನ್ನ ದಾರುಣವಾದ ಅನುಭವ ಅವಳಿಗೆ ಈ ಪಾಠ ಕಲಿಸಿದೆ. ಅವಳಲ್ಲಿ ಈಗ ಅಂತರ್ಮುಖತೆ ಬೆಳೆದಿದೆ. "ನೋವನ್ನು ಕಾಣದೆ ನಕ್ಕ ನಗೆಯೇ ನಗೆ, ನೊಂದು ನೋವನ್ನು ನುಂಗಿ ಆಮೇಲೆ ನಗುವ ನಗೆಯಲ್ಲ" ಎಂದುಕೊಂಡಿದ್ದಾಳೆ. ಆದರೆ ಅವಳ ಈಗಿನ ನಗೆ ನಲಿಸಿ ಕುಣಿಸಲಾರದು. ಆದರೆ ನೆಮ್ಮದಿ ಕೊಡುತ್ತದೆ. ವಿಚಾರದ ಫಲವಾದ ವ್ಯಾಕುಲದಿಂದ ಉಕ್ಕಿ ಬರುವ ದುಃಖದಿಂದ ಆನಂದಕ್ಕೆ ಪೂರ್ಣತೆ ಬರುತ್ತದೆಯೆನೋ ಎನ್ನಿಸುತ್ತದೆ.

ಶಕುಂತಲೆಯಲ್ಲಿ ಕಾಣುವ ಪರಿಣತಿ ಪ್ರಿಯಂವದೆ ಅನಸೂಯೆ ಶಾಙ್ಗರವ ಮೊದಲಾದವರಲ್ಲೂ ಕಾಣುತ್ತದೆ. ಕಣ್ವರ ಮಾತನ್ನಂತೂ ಹೇಳಬೇಕಾಗಿಯೇ ಇಲ್ಲ. ಅವರು ಸಮಾಧಾನರಾಗಿರುವಷ್ಟೇ ಆರ್ದ್ರಹೃದಯರು. ಇವೆರಡರ ಸಮ್ಮಿಲಿತವಾಹಿನಿ ಕಾಳಿದಾಸನ ಕೃತಿಯಿಂದ ಇಲ್ಲಿಗೆ ಹರಿದುಬಂದಿದೆ. ಅವರು ಎಷ್ಟೋ ವರ್ಷದಿಂದ ನಕ್ಕೇ ಇರಲಿಲ್ಲವಂತೆ. ಶಕುಂತಲೆ ದುಷ್ಯಂತನನ್ನು ಮತ್ತೆ ಪಡೆದು ಸುಖವಾಗಿದ್ದಾಳೆಂಬ ವರ್ತಮಾನ ಖಚಿತವಾಗಿ ಬಂದಮೇಲೆ ನಕ್ಕರು, ಉತ್ಸಹಿತರಾದರು. ದುಷ್ಯಂತ ಶಕುಂತಲೆಯೊಡನೆ ಏಕೆ ಬರಲಿಲ್ಲವೆಂದು ಅವರಿಗೆ ಗೊತ್ತು. ಆದ್ದರಿಂದಲೇ ಅವನು ಶಕುಂತಲೆ ಭರತನನು ಮಲಗಿಸಿದ್ದು. ಇದೇ ನಾವು ನಮ್ಮ ಮನೆಯಲ್ಲಿ ದಿನವೂ ಕೇಳಿರುವ ಮಾತು ನೋಡಿರುವ ದೃಶ್ಯ. ಇದೆಲ್ಲದರಿಂದಾಗಿ 'ಇದು ಸತ್ಯ ಚಿತ್ರ' ಎಂಬ ನಂಬಿಕೆ ಬರುತ್ತದೆ. ಇದೊಂದು ಉತ್ತಮವಾದ ಕಥೆಯಾಗಿದೆ. ಕಾಳಿದಾಸ ಬಿಟ್ಟ ಕಡೆಯಿಂದ ಮಾಸ್ತಿಯವರು ಕಥೆಯನ್ನು ಮುಂದುವರಿಸಿದ್ದಾರೆಂಬುದನ್ನು ನೆನಪಿನಲ್ಲಿಡಬೇಕು. ಅವರು 'ಕಾಳಿದಾಸನ ಅಭಿಜ್ಞಾನ ಶಾಕುಂತಲ' ನಾಟಕದ ಪ್ರಯೋಜನ ಪಡೆದಿದ್ದಾರೆ.

ಈ ಕಥೆಯನ್ನು ಮಾಸ್ತಿಯವರು ಕಾಳಿದಾಸನ ಅಭಿಜ್ಞಾನ ಶಾಕುಂತಲ ನಾಟಕದ ಮುಂದುವರಿದ ಭಾಗದಂತೆ ರಚಿಸಿದ್ದಾರೆ. ಪುನಃ ರಾಜನ ಅರಮನೆಗೆ ಹೋಗುವುದು, ಕಣ್ವಾಶ್ರಮಕ್ಕೆ ಹೋಗುವುದು ಅಲ್ಲಿಯ ಪರಿಸರದಲ್ಲಾದ ಬದಲಾವಣೆಯನ್ನು ಈ ಕಥೆಯಲ್ಲಿ ಗಮನಿಸಬಹುದಾಗಿದೆ. ಕಾಳಿದಾಸನ

ಅಭಿಜ್ಞಾನ ಶಾಕುಂತಲ ನಾಟಕದ ಮುಂದುವರಿದ ಭಾಗವಾಗಿದೆ ಹಾಗೂ ಮಾಸ್ತಿಯವರ ಸ್ವಂತಿಕೆಯಿಂದ ಅಭಿಜ್ಞಾನ ಶಾಕುಂತಲ ನಾಟಕದ ಪ್ರೇರಣೆಯಿಂದ ಬರೆದ ಕತೆಯಾಗಿದೆ.

ಮಾಸ್ತಿಯವರು ತಮ್ಮ ಅನುಭವಕ್ಕೆ ಬಂದಂತಹ ಕೆಲವು ಮಾತುಗಳನ್ನು ತಮ್ಮ ಕಥೆಯಲ್ಲಿ ಅಲ್ಲಲ್ಲಿ ಬಳಸಿದ್ದಾರೆ. 'ಬರುವವರನ್ನು ಎದುರು ನೋಡುತ್ತ ಹೊತ್ತನ್ನು ಕಳೆಯುವುದು ಬಹು ಬೇಸರದ ಕೆಲಸ'. ಹೀಗೆ ಶಕುಂತಲೆಯ ಸಖಿಯರ ಮೂಲಕ ಮಾತನಾಡಿಸಿದ್ದಾರೆ. ಪ್ರಸ್ತುತದಲ್ಲಿ ಪ್ರತಿಯೊಬ್ಬ ಮನುಷ್ಯರಿಗೂ ಇಂತಹ ಸನ್ನಿವೇಶಗಳು ಬೇಸರವನ್ನು ತರಿಸುತ್ತವೆ. ಶಕುಂತಲೆಯು ನಾನು ರಾಣಿ ಎಂಬುದನ್ನು ಹಿಗ್ಗಿನಿಂದ ನಡೆದುಕೊಳ್ಳದೇ ಇದ್ದಿದ್ದನ್ನು ಈ ಮಾತಿನ ಮೂಲಕ ಹೇಳಿದ್ದಾರೆ. ಮಗನನ್ನು ಕರೆದುಕೊಂಡು ಹಸ್ತಿನಾವತಿಗೆ ರಾಣಿಯೆಂದು ಬಂದಾಗಲೂ ಅವಳ ಮನಸ್ಸು ಉತ್ಸಾಹದಿಂದ ಉಬ್ಬಲಿಲ್ಲ. ಒಂದು ಸ್ಥಿತಿ ಮೀರಿದ ನಂತರ ಮನಸ್ಸು ಎಂಥ ಸಂತೋಷದಲ್ಲೂ ಉಬ್ಬುವುದನ್ನು ಮರೆಯುತ್ತದೆ. ಶಕುಂತಲೆಯ ಜೀವನದಲ್ಲಿ ಕಲ್ಯಾಣ ಮರಳಿ ಮೂಡಿದ ಕ್ಷಣದಲ್ಲಿ ತನಗೆ ಸುಖ ಬಂದಿತೆಂಬ ಭಾವನೆಗಿಂತ ತನ್ನ ತಂದೆಗೆ ಇನ್ನು ಚಿಂತೆ ಇಲ್ಲ, ತನ್ನ ಸಖಿಯರಿಗೆ ಇನ್ನು ಖೇದವಿಲ್ಲ ತನ್ನ ಅಜ್ಜಿ ಇನ್ನು ಯೋಚಿಸಬೇಕಾಗುವುದಿಲ್ಲ. ತನ್ನ ಮಗನಿಗೆ ಹುಟ್ಟಿನಿಂದ ಸಲ್ಲಬೇಕಾದ ಪದವಿ ದೊರೆಯುತ್ತದೆ. ತನ್ನ ನಡತೆ ಯಾವುದರಿಂದಲಾದರೂ ಅದು ಅವನಿಗೆ ತಪ್ಪಿಹೋಗಬೇಕಾದ ಪ್ರಮೇಯವಿಲ್ಲ ಎನ್ನುವ ಭಾವವೇ ಮುಖ್ಯವಾಗಿತ್ತು. ಹೀಗೆ ಅನೇಕ ರೀತಿಯ ತುಮುಲಗಳು ಇದ್ದರೂ ಸಹನೆಯಿಂದ ಜೀವನ ಕಳೆದಿದ್ದಾಳೆ.

ರಾಜನ ಪುತ್ರಿ ಚೆಲುವೆ ತೇಜಸ್ವಿನಿ. ಆ ಚೆಲುವು ತೇಜಸ್ಸು ನಾಲ್ಕು ವರ್ಷ ಅರಮನೆಯನ್ನು ಆಳಿದವು. ರಾಜನೆಂದ ಮೇಲೆ ಭಾರತೀಯ ಸಂಸ್ಕೃತಿಯ ಪ್ರಕಾರ ಹಲವಾರು ಸ್ತ್ರೀಯರನ್ನು ರಾಣಿಯರನ್ನಾಗಿ ಮಾಡಿಕೊಳ್ಳಬಹುದು. ಆದರೆ ಶಕುಂತಲೆಗೆ ಗಂಡುಮಗನು ಜನಿಸಿದ್ದರಿಂದ ಅವಳಿಗೆ ಬೆಲೆ ಜಾಸ್ತಿ. ಆದರೂ ಎಲ್ಲಾ ಅಕ್ಕಂದಿರೊಂದಿಗೆ ಕೂಡಿ ಬೆಳೆದವಳು ಶಕುಂತಲೆ. ಹಂಸಪದಿಕೆಯನ್ನು ಸಹ ಆಶ್ರಮಕ್ಕೆ ಕರೆದುಕೊಂಡು ಹೋದಳು.

ಹಸ್ತಿನಾವತಿಯಿಂದ ಕಣ್ವರ ಆಶ್ರಮಕ್ಕೆ ಸಾಮಾನ್ಯವಾಗಿ ಹತ್ತುದಿನದ ನಡಿಗೆ. ಆತುರದಿಂದ ವೇಗವಾಗಿ ಹೋಗುವ ಜನರಿಗೆ ಒಂದು ವಾರದ ಪ್ರಯಾಣ. ವಾಹನಗಳ ಮೇಲೆ ಹೋಗುವ ಪುಣ್ಯವಂತರಿಗೆ ಮೂರು ಅಥವಾ ನಾಲ್ಕು ದಿನದ ಓಟ. ರಾಜನು ರಾಣಿಯರಿಬ್ಬರನ್ನೂ ಕಳುಹಿಸಬೇಕಾದರೆ ತಕ್ಕಷ್ಟು ಪರಿವಾರವನ್ನು ಕಳುಹಿಸುವ ಏರ್ಪಾಡು ಮಾಡಿದನು.

ಸ್ನೇಹದ ಮುಂದೆ ಯಾವ ಅಧಿಕಾರ ಅಂತಸ್ತು ಶೂನ್ಯ ಎನ್ನುವುದಕ್ಕೆ ಶಕುಂತಲೆಯೇ ಉದಾಹರಣೆಯಾಗಿದ್ದಾಳೆ. ಪ್ರಿಯಂವದೆ ತನ್ನಲ್ಲಿ ತಾನೇ, ಇಂದು ಶಕುಂತಲೆ ಅಂದಿನ ಶಕುಂತಲೆಯಲ್ಲ ರಾಣಿ ಅವಳನ್ನು ಏನೆಂದು ಕರೆಯಬೇಕೊ, ಅವಳಿಗೆ ಏನು ಮರ್ಯಾದೆ ತೋರಬೇಕೋ, ಎಂದು ಸ್ವಲ್ಪ ಯೋಚಿಸಿದ್ದಳು.

"ತೇರಿನಿಂದಿಳಿದ ರಾಣಿಯನ್ನು ನೋಡಿ ಅವಳಿಗೆ ಈ ಯೋಚನೆಲ್ಲ ಎತ್ತಲೋ ಹೋಯಿತು. ಅವಳು ಶಕುಂತಲೆಯನ್ನು ರಾಣಿ ಎಂದು ಕೂಡ ಕರೆಯಲಿಲ್ಲ. "ಶಕುಂತಲೇ ಚೆನ್ನಾಗಿದ್ದೀಯಾ?" ಎಂದು ಕೂಗಿದಳು. ಕೊರಳು ಕಟ್ಟಿಕೊಂಡಿತು. ಕಣ್ಣಲ್ಲಿ ನೀರು ತಡೆಯಲಾರದೆ ಹರಿಯಲಾಗದೆ ಹನಿಯಾಗಿ ನಿಂತಿತು. ಅನಸೂಯೆ ಮಗುವಿನಂತೆ ಓಡಿ ಶಕುಂತಲೆಯನ್ನು ಮಾತಾಡದೆ ಅಪ್ಪಿಕೊಂಡಳು. ಅವಳ ಭುಜದ ಮೇಲೆ ತಲೆಯಿಟ್ಟು ಬಿಕ್ಕಿ ಬಿಕ್ಕಿ ಅತ್ತಳು. ಶಕುಂತಲೆಗೂ ಕ್ಷಣ ಮಾತ್ರ ಧೃತಿ ತಪ್ಪಿತು. ಆದರೆ ಒಂದು ಕ್ಷಣದಲ್ಲಿ ಅವಳು ಧೈರ್ಯ ತಂದುಕೊಂಡು "ಬಾ, ಅನಸೂಯೆ, ಇಕೋ ನೋಡು ಯಾರು ಬಂದಿದ್ದಾರೆ" ಎಂದು ಬಿಡಿಸಿಕೊಂಡು, ಪ್ರಿಯಂವದೆಯನ್ನು ಹತ್ತಿರ ಸೆಳೆದುಕೊಂಡು ಹಂಸಪದಿಕೆಗೆ ಸಖಿಯರ ಪರಿಚಯ ಮಾಡಿಕೊಟ್ಟಳು. ಶಕುಂತಲೆಯ ಮನಸ್ಸನ್ನು ನಿಷ್ಕಕಲ್ಮಷವಾದ ಹೃದಯವನ್ನು ಕವಿ ಮಾಸ್ತಿಯವರು ತಮ್ಮ ಕಥೆಯಲ್ಲಿ ಸೃಷ್ಟಿಸಿದ್ದಾರೆ ತಾನು ಬೆಳೆದ ಪರಿಸರದಲ್ಲಿರುವರನ್ನು ಎಲ್ಲರ ಯೋಗ ಕ್ಷೇಮವನ್ನು ವಿಚಾರಿಸಿಕೊಂಡಳು.

ಅನಸೂಯೆಗೆ ಒಂದು ಹೆಣ್ಣು ಮಗು, ಪ್ರಿಯಂವದೆಗೆ ಒಂದು ಗಂಡು ಮಗು. ಅರಮನೆಯಿಂದ ಬಂದ ಶಕುಂತಲೆ ಈ ಬಡತನದ ಬಿಡಾರದಲ್ಲಿ ಜ್ವರವಿಳಿದ ವೇಳೆ ತಾಯಮಡಿಲಲ್ಲಿ ನಿದ್ರಿಸುವ ಮಗುವಿನಂತೆ ಹಾಯಾಗಿ ನಿದ್ರಿಸಿದಳು. ಅವಳ ನಿದ್ದೆ ಬಹು ದಿನದಿಂದ ಕನಸುಗಳಿಂದ ಸುಖಮಯವಾಯಿತು. ನಂತರ ಎಚ್ಚರವಾದ ಮೇಲೆ ಶಕುಂತಲೆ ಸಖಿಯರೊಡನೆ ತನ್ನ ಮಲ್ಲಿಕಾಲತೆಯನ್ನು ನೋಡಲು ಹೋದಳು. ಅದು ಮರವಾಗಿ ಬೆಳೆದಿತ್ತು. ಅದೇ ಸುಂದರವಾದ ವೃಕ್ಷ. ಆ ಬಳಿಯಲ್ಲಿ ದೀರ್ಘಾಪಾಂಗ ಎಂಬ ಜಿಂಕೆ ಬಂದಿತು. ಮೊದಲು ಅದಕ್ಕೆ ರಾಣಿಯ ಗುರುತು ಸಿಕ್ಕಲಿಲ್ಲ. ಇವಳು ಕರೆದರೆ ಅದು ದೂರ ಹೋಯಿತು. ಸಖಿಯರು ಅದನ್ನು ಕರೆತಂದು ಹತ್ತಿರ ನಿಲ್ಲಿಸಲು ಇವಳನ್ನು ನೋಡಿ ಮೈ ಕೈಯನ್ನು ನೆಕ್ಕಿ ಏನೋ ಸ್ವಲ್ಪ ನೆನಪು ಬಂದಂತೆ ಸಮಾಧಾನವಾಗಿ ನಿಂತಿತು. ಅದರ ಮರಿಯೂ ಅಲ್ಲೇ ಇತ್ತು. ಅದಕ್ಕೂ ತಾಯಿಗೂ ವ್ಯತ್ಯಾಸ ಹೇಳುವಂತಿರಲಿಲ್ಲ. ಹೀಗೆ ತಾನು ಓಡಾಡಿದ ಪರಿಸರವನ್ನು ಕಣ್ಣತುಂಬಿಕೊಂಡಳು. ದುಷ್ಯಂತನನ್ನು ಮೊದಲು ಕಂಡ ಜಾಗವನ್ನು ಸಹ ನೋಡಿದಳು."[೧೬] ಹೀಗೆ ಮುಂದುವರಿದು ಹೇಳುವುದಾದರೆ ಬಂದವರು ಮತ್ತೆ ಪುನಃ ಅರಮನೆಗೆ ಹೋಗುವ ತಯಾರಿಯನ್ನು ಮಾಸ್ತಿಯವರು ಓದುಗರಿಗೆ ಸುಲಭವಾಗಿ ಅರ್ಥವಾಗುವಂತೆ ಕಥೆಯನ್ನು ನಿರೂಪಿಸಿದ್ದಾರೆ.

ಕಣ್ವರನ್ನು, ಗೌತಮಿಯರನ್ನು ನೋಡಿ ಮಾತಾನಾಡಿದಳು. ಕಣ್ವರು(ಋಷಿಗಳು) "ನೀನು ಇನ್ನೊಂದು ಸಲ ಬರುವಾಗ ಚಕ್ರವರ್ತಿಗಳನ್ನು ನಾನು ಬರಹೇಳಿದೆನೆಂದು ಹೇಳಿ ಕರೆತರಬೇಕು ಎಂದು ಹೇಳಿದರು. ನನ್ನ ಬಳಿ ಬರುವುದಕ್ಕೆ ಸಂಕೋಚ ಬೇಡವೆಂದು ತಿಳಿಸು" ಎಂದರು. ಶಕುಂತಲೆ ಮಾರನೆಯ ಬೆಳಗ್ಗೆ ಎದ್ದು ನಿತ್ಯವಿಧಿಗಳನ್ನು ಮುಗಿಸಿ ತಾನು ತಂದಿದ್ದ ಒಡವೆ ವಸ್ತುಗಳನ್ನು ಎಲ್ಲರಿಗೂ ಹಂಚಿ ಹಿರಿಯರಿಗೆ ವಂದಿಸಿ ಸಖಿಯರಿಗೆ ಹೋಗಿಬರುವೆನೆಂದು ಹೇಳಿ ಮರಳಿ ಹಸ್ತಿನಾವತಿಗೆ ಹೊರಟಳು. ಹಿಂದೆ ಅವಳು ಆ ಆಶ್ರಮದಿಂದ ಹೊರಟ ಸಂದರ್ಭ

ಅವಳಿಗೂ ಉಳಿದೆಲ್ಲರಿಗೂ ಚೆನ್ನಾಗಿ ನೆನಪುಂಟು. “ಅಂದು ಅವಳು ನಡೆಯುತ್ತಾ ಹೊರಟವಳು ಇಂದು ತೇರನ್ನೇರಿ ಹೊರಟಳು. ಅಂದು ಗರ್ಭದಲ್ಲಿದ್ದ ಮಗನು ಇಂದು ಬೆಳೆದು ಶುಕ್ಲಪಕ್ಷದ ಸಪ್ತಮೀ ಚಂದ್ರನಂತೆ ಅವಳ ಜೊತೆಯಲ್ಲಿ ಕುಳಿತಿದ್ದನು. ಅಂದಿನ ಸಂದೇಹ ಶಂಕೆಗಳೊಂದೂ ಇಂದಿಲ್ಲ. ಇದು ಉಳಿದೆಲ್ಲರಿಗೂ ಬಹಳ ಸಂತೋಷ. ಶಕುಂತಲೆಗೆ ಮಾತ್ರ ಮನಸ್ಸಿನ ಸ್ಥಿತಿ ಅಂದಿನ ಸ್ಥಿತಿಯಿಂದ ಬಹಳ ಬೇರೆಯಾಗಿರಲಿಲ್ಲ. ಕಾರಣವರಿಯದೆ ಅವಳು ಅಂದಿನಂತೆಯೇ ಉತ್ಕಂಠಿತೆಯಾಗಿದ್ದಳು. ಅವಳಿಗೆ ಮರಳಿ ಈ ಆಶ್ರಮಕ್ಕೆ ಬರಬೇಕಾದರೆ ಪತಿಯೊಡನೆ ಬರಬೇಕು. ಬಂದ ಮೇಲೆ ತಿರುಗಿ ಹಸ್ತಿನಾವತಿಗೆ ಹೋಗಬಾರದು ಎನ್ನಿಸಿತು. ನೋವನ್ನು ಕಾಣದೆ ನಕ್ಕ ನಗೆಯೆ ನಗೆ, ನೊಂದು ನೋವನ್ನು ನುಂಗಿ ಆಮೇಲೆ ನಗುವ ನಗೆ ನಗೆಯಲ್ಲ. ಕಣ್ವಋಷಿಯ ಸಾಕುಮಗಳಿಗೆ ಇದು ಅನಭವಕ್ಕೆ ಬಂದಿತು. ನಿಜವಾದ ಸುಖವನ್ನು ಹಿಂದೆ ಬಿಟ್ಟಿದ್ದೇನೆಂಬ ತಿಳಿವಿನಲ್ಲೇ ಅವಳು ತೇರಲ್ಲಿ ಕುಳಿತು ಹಸ್ತಿನಾವತಿಗೆ ತೆರಳಿದಳು.”[೧೭]

ಹೀಗೆ ಕಥೆಯು ಕೊನೆಗೊಳ್ಳುತ್ತದೆ. ಪ್ರಕೃತಿದತ್ತವಾದ ಮನಸ್ಸಿನ ವೇದನೆಯನ್ನು ಮಾಸ್ತಿಯವರು ಸೂಕ್ಷ್ಮವಾಗಿ ಕಥೆಯ ಮೂಲಕ ತಿಳಿಸಿದ್ದಾರೆ. ಶಕುಂತಲೆಯ ಕತೆಯ ಮುಂದುವರಿದ ಭಾಗವಾದರೂ ಓದುಗರಿಗೆ ಅರ್ಥವಾಗುವಂತೆ, ಸಂಬಂಧವನ್ನು ಕಲ್ಪಿಸುವಂತೆ ಕತೆಯಲ್ಲಿಯೇ ವಿವರಗಳನ್ನು ತಿಳಿಸಿ ಮುಂದಕ್ಕೆ ಕತೆಯನ್ನು ವಿಸ್ತರಿಸಿದ್ದಾರೆ.

**ಗೌತಮಿ ಹೇಳಿದ ಕತೆ:** ಈ ಕತೆಯು ಮಾಸ್ತಿಯವರ ಇನ್ನೊಂದು ಕತೆಯಾಗಿದೆ. ಹೇಮಕೂಟದಿಂದ ಶಕುಂತಲೆ ಮಗ ಭರತನೊಂದಿಗೆ ಕಣ್ವರ ಆಶ್ರಮಕ್ಕೆ ಬಂದಳು. ಬಂದ ಮೇಲೆಯೇ ಈ ಕಥೆಯು ಪ್ರಾರಂಭವಾಗುತ್ತದೆ. ಮಾಸ್ತಿಯವರ ನಿರೂಪಣ ಶೈಲಿ ಉತ್ತಮವಾಗಿದೆ. ಈ ಕತೆಯ ಮುಖ್ಯ ತಿರುಳು ಗೌತಮಿ ಮತ್ತು ಕಣ್ವರು ಬೆಳೆದು ಬಂದ ಬಗೆಯನ್ನು ಗೌತಮಿ ಶಕುಂತಲೆ, ಪ್ರಿಯಂವದೆ, ಅನಸೂಯೆ ಇವರಿಗೆ ಹೇಳುತ್ತಾಳೆ.

“ಶಕುಂತಲೆ ಬಂದ ಸಡಗರದಲ್ಲಿ ಆಶ್ರಮದಲ್ಲಿರುವವರೆಲ್ಲರು ಸಂಭ್ರಮದಲ್ಲಿ ಮುಳುಗಿರುತ್ತಾರೆ. ಅನಸೂಯೆ, ಪ್ರಿಯಂವದೆಯರಿಗೆ ಮದುವೆಯಾಗಿದೆ. ಗೌತಮಿಯು ಈ ಹುಡುಗಿಯರು ಮದುವೆಯಾಗಲೇಬೇಕೆಂದು ಮುದುಕಿಗೆ ಏಕೆ ಅಷ್ಟು ಹಠ ಮಾಡಿದಳು? ಶಕುಂತಲೆ ಅಪ್ಸರೆಯ ಮಗಳು. ಯಾವನಾದರೊಬ್ಬ ರಾಜಪುರುಷನ ಪತ್ನಿ ಆಗಬಹುದೆಂಬ ನಿರೀಕ್ಷೆಯಲ್ಲೇ ಬೆಳೆದಿದ್ದಳು. ಅನಸೂಯೆ ಪ್ರಿಯಂವದೆಯರು ತಾಪಸ ತರುಣಿಯರು. ಅವರ ದೃಷ್ಟಿ ಸಂಸಾರದ ಕಡೆ ಹರಿದಿರಲಿಲ್ಲ. ಶಕುಂತಲೆಗೆ ಆದ ಮನೋವಿಕಾರ ಬ್ರಹ್ಮಚಾರಿಣಿಗಳಿಗೆ ಆದೀತೆಂದು ಭಯಪಡುವ ಕಾರಣವಿರಲಿಲ್ಲ. ಇತ್ಯಾದಿ ಇವರ ಮಾತು ಬೆಳೆಯಿತು. ತಾಪಸಿ ಇದಕ್ಕೆ ಪ್ರತಿಯಾಗಿ, “ನೀವು ಚಿಕ್ಕವರು, ನಿಮಗೆ ಈ ಮಾತೆಲ್ಲ ತಿಳಿಯುವುದಿಲ್ಲ. ಬ್ರಹ್ಮಚರ್ಯೆಯಲ್ಲಿ ಇರುವ ಮಕ್ಕಳಿಗಾದರೂ ಶಕುಂತಲೆಗೆ ಒದಗಿದ ಮನೋಧರ್ಮ ಒದಗಬಹುದು. ನನ್ನ ಚಿಕ್ಕಂದುದಿನಲ್ಲಿ ಒಬ್ಬ ತರುಣಿಗೆ ಆದ ಅನುಭವವನ್ನು ನಾನು ಬಲ್ಲೆನು. ಅದನ್ನು ಹೇಳುತ್ತೇನೆ ಕೇಳಿ. ಅದನ್ನು ಕೇಳಿದ ಮೇಲೆ ನಿಮ್ಮನ್ನು ಕುರಿತು ನಾನು

ಭಯಪಟ್ಟದ್ದು ಸರಿಯೆಂದು ಒಪ್ಪುವಿರಿ" ಎಂದಳು. ಗೆಳೆಯರು ಮೂವರೂ ಕತೆ ಕೇಳಲು ಆಸೆಯಿಂದ ಪಕ್ಕ ಪಕ್ಕದಲ್ಲಿ ಅಜ್ಜಿಯೆದುರು ಕುಳಿತರು. ವೃದ್ಧೆ ಕತೆ ಹೇಳಿದಳು. ಕತೆಯೇ ಈ ಕೆಳಗಿನಂತೆ ಆರಂಭವಾಗುತ್ತದೆ.

ಆ ಹುಡುಗಿ ಆಶ್ರಮದ ಮಕ್ಕಳಲ್ಲಿ ಒಬ್ಬಳು. ಈ ವನಾಂತರದ ಒಂದು ಗ್ರಾಮದಿಂದ ಬಂದವಳು. ತಾಯಿಯನ್ನು ಕಳೆದುಕೊಂಡು ತಂದೆಗೆ ಹೊರೆಯಾದ ಮಕ್ಕಳು, ತಂದೆಯನ್ನು ಕಳೆದುಕೊಂಡು ಸಂಸಾರಕ್ಕೆ ಬೇಡ ಎನಿಸಿದ ಮಕ್ಕಳು, ಮನೆಯವರು ಧರ್ಮದ ಸೇವೆಗೆಂದು ಕಳುಹಿಸಿಕೊಟ್ಟೋ, ತಾವೇ ಮನೆಗಿಂತ ಆಶ್ರಮದಲ್ಲಿ ಸುಖವಾಗಿರಬಹುದೆಂದು ಆಸೆಪಟ್ಟೋ ಎಂದೂ ಇಲ್ಲಿ ಬಂದು ಸೇರುತ್ತಾರೆ. ಈ ಹುಡುಗಿ ಆಗ ಆ ರೀತಿ ಬಂದು ಸೇರಿದವಳು. ಆಶ್ರಮದಲ್ಲಿ ಹತ್ತು ಮಕ್ಕಳ ಜೊತೆಗೆ ತಾನೂ ಸೇರಿ ಬೆಳೆಯುತ್ತಿದ್ದಳು. ಅವಳ ಹೆಸರು ಮಾಲಿನಿ, ನಮ್ಮ ನದಿಯದೇ ಹೆಸರು. ಬಂದು ಸೇರಿದಾಗ ಎಂಟೋ ಹತ್ತೋ ವರ್ಷದ ಹುಡುಗಿಯಾಗಿದ್ದವಳು.

ಮಾಲಿನಿ ದಿನ ಕಳೆದಂತೆ ಮೈತುಂಬಿ ಹಿರಿಯಳಾಗುತ್ತ ಬಂದಳು. ಆಗ ಆಶ್ರಮದಲ್ಲಿ ಅವಳಿಗೆ ಸರಿವಯಸ್ಸಿನ ಬೇರೆ ಹೆಣ್ಣು ಮಕ್ಕಳಿರಲಿಲ್ಲ. ಉಳಿದ ಹುಡುಗಿಯರು ಇವಳಿಗಿಂತ, ಇಲ್ಲ ನಾಲ್ಕಾರು ವರ್ಷ ಹಿರಿಯರು, ನಾಲ್ಕಾರು ವರ್ಷ ಕಿರಿಯರು. ಹೀಗಾಗಿ ಈ ಹುಡುಗಿ ಆಶ್ರಮಕ್ಕೆ ಬಂದ ಮೊದಲಿನಿಂದಲೂ ವಿಶೇಷವಾಗಿ ಗಂಡುಮಕ್ಕಳೊಡನೆ ಓಡಿಯಾಡಬೇಕಾಯಿತು. ಹೂ ತರುವುದು ದನಗಳನ್ನು ನೋಡುವುದು, ಬಂದವರನ್ನು ವಿಚಾರಿಸುವುದು ಇದರಲ್ಲೆಲ್ಲ ಇವಳು ಹುಡುಗರೊಡನೆ ಕಲೆತು ಒಬ್ಬ ಹುಡುಗನಂತೆ ಆಗಿದ್ದಳು. ಆಶ್ರಮದಲ್ಲಿ ಗಂಡು ಹೆಣ್ಣು ಎಂಬ ಭೇದ ಭಾವವಿರುವುದಿಲ್ಲ. ಕಾರಣ ಕಣ್ವರ ಆಶ್ರಮದಲ್ಲಿ ಇಂಥ ನಡೆ ಹೊಸತಲ್ಲ. ಗಂಡು ಸದಾ ಗಂಡೆಂದು ಹೆಣ್ಣು ಸದಾ ಹೆಣ್ಣೆಂದು ಒಂದನ್ನು ಕುರಿತು ಒಂದು ಇಲ್ಲದ ವೇದನೆಯನ್ನು ಅನುಭವಿಸಬಾರದೆಂಬುದು ಇಲ್ಲಿಯ ಹಿರಿಯರ ಆಸೆ. ಅದರಂತೆ ನಾವೆಲ್ಲ ಬೆಳೆದೆವು. ಹುಡುಗಿಗೆ ಅವಳ ಜೊತೆಯ ಹುಡುಗರಿಗೆ ಇಂಥ ನಿಸ್ಸಂಕೋಚ ಪ್ರಯತ್ನವಿಲ್ಲದೆ ಸಿದ್ಧಿಸಿತ್ತು.

ತರುಣರೊಡನೆ ನಡೆದಾಡುವುದರಲ್ಲಿ ಮಾಲಿನಿ ಒಳ್ಳೆಯ ಈಜುಗಾತಿಯಾದಳು. ಭಾರದ್ವಾಜ ಹಾಗೆ ಈಜುವುದರಲ್ಲಿ ಆಶ್ರಮದಲ್ಲಿ ಎಲ್ಲರಿಗಿಂತ ಮೇಲುಗೈ ಆಗಿದ್ದ ದತ್ತಕಶ್ಯಪ ಹತ್ತಿರ ಹತ್ತಿರ ಅವನಷ್ಟೇ ಗಟ್ಟಿಗ, ತೀರ ಸಮ ಎನ್ನುವಂತಿಲ್ಲ ಹೊರತಾಗಿ ಕಡಿಮೆ ಎಂದು ಹೊಗಳುವಂತೆಯೂ ಇರಲಿಲ್ಲ. ಹುಡುಗಿ ಇವರ ಜೊತೆಯಲ್ಲಿ ಹೊಳೆಯಲ್ಲಿ ಈಜಾಡಿ ತನ್ನ ಯೋಗ್ಯತೆಗೆ ಮೀರಿ ಈಜುಗಾತಿಯಾದಳು. ಹೆಂಗಸರಲ್ಲಿ ಅವಳಂತೆ ಈಜಿದವರನ್ನು ಬಹು ಜನವನ್ನು ಲೋಕ ಕಾಣಲಾರದು. ಮಹರ್ಷಿ ಒಂದು ದಿನ ಭಾರದ್ವಾಜನನ್ನು ಕರೆದು "ನೀನು ದತ್ತನೂ ಈ ಬಾಲೆಯೊಂದಿಗೆ ಬಹು ಸಲಿಗೆಯಿಂದ ಬೆಳೆದಿದ್ದೀರಿ. ಬಾಲೆ ಈಗ ಪ್ರೌಢಳಾಗಿದ್ದಾಳೆ. ನೀನು ಅವಳನ್ನು ಮದುವೆಯಾಗಿ ಸಂಸಾರದಲ್ಲಿ ನಿಲ್ಲುವುದು ಕ್ಷೇಮ" ಎಂದರು. ಭಾರದ್ವಾಜನು ಒಲ್ಲೆನೆನ್ನಲಿಲ್ಲ. ಸುಮ್ಮನೆ ಹೊರಕ್ಕೆ ನಡೆದನು. ಆಮೇಲೆ ಹುಡುಗಿ ಹತ್ತಿರ ಬಂದಾಗ ಏನೋ ತೊಡಕಿಗೆ ಸಿಕ್ಕಿದವನಂತೆ ಅವಳ ಕಡೆ

ನೋಡಿದನು. ಅದುವರೆಗೆ ಜೊತೆಯ ಹುಡುಗನಂತೆ ಕಂಡಿದ್ದ ಜೀವ ಅಂದೇ ಅವನಿಗೆ ಒಂದು ಹೆಣ್ಣಾಗಿ ಕಂಡಿರಬೇಕು. ಇದರ ಜೊತೆಯಲ್ಲಿ ಎಚ್ಚರದಿಂದ ನಡೆದುಕೊಳ್ಳಬೇಕು ಎಂದು ಅವನಿಗೆ ತೋರಿರಬೇಕು. ಆದರೂ ಏನೂ ಮಾತನಾಡಲಿಲ್ಲ.

ಹುಡುಗಿ ಮಾತ್ರ ಇಬ್ಬರೂ ತರುಣರೊಂದಿಗೆ ಸರಳವಾಗಿ ವರ್ತಿಸುತ್ತ ಹೋದಳು. ಆದರೂ ಅವಳಿಗೆ ಭಾರದ್ವಾಜ ಕಡೆಗೆ ಒಲೆತ ಹೆಚ್ಚಾಯಿತು. ಭಾರದ್ವಾಜನಿಗೂ ಇವಳ ಕಡೆ ಮನಸ್ಸು ಒಲಿದಿರಬೇಕು. ಒಂದು ದಿನ ಇವರು ಹೊಳೆಯಲ್ಲಿ ಈಜುತ್ತಿರುವಾಗ ಅವನು ಹುಡುಗಿಯನ್ನು "ನಿನಗೆ ಮದುವೆಯಾಗಲು ಇಷ್ಟವೇ?" ಎಂದು ಕೇಳಿದನು. ಹುಡುಗಿ ಹೂಗುಟ್ಟಿದಳು. ದಡ ಸೇರಿದ ಮೇಲೆ ಇವರು ಈ ಮಾತನ್ನು ದತ್ತನಿಗೆ ತಿಳಿಸಿದರು. ಅವನ ಮುಖದ ಮೇಲೆ ಎಲ್ಲಿಯೋ ಸ್ವಲ್ಪ ಅಸಮಾಧಾನ ಬಂದು ಮೋಹ ಹಾಯ್ದಂತೆ ಮರೆಯಿತು. ಆಶ್ರಮದೊಳಕ್ಕೆ ಬಂದು ದತ್ತನು ಈ ಸಂಗತಿಯನ್ನು ಇತರರಿಗೆ ತಿಳಿಸಿದನು. ಅದನ್ನು ಕೇಳಿ ಗುರುಗಳೂ 'ಸಂತೋಷ' ಎಂದರು.

ಪೂರ್ಣಿಮೆಯ ಹಿಂದಿನ ದಿನ ಮೋಡ ಎಲ್ಲೋ ಸ್ವಲ್ಪ ಮುಸುಕಾಗಿರುವ ವೇಳೆ ಇವರಿಬ್ಬರೂ ಹೊಳೆಯ ಸಹಕಾರ ವೃಕ್ಷದ ಬಳಿಗೆ ಹೋದರು. ತಿಂಗಳ ಬೆಳಕಿನಲ್ಲಿ ಒಂದು ಕಲ್ಲಿನ ಮೇಲೆ ಕುಳಿತು ತುಂಬಿದ ಹೊಳೆಯನ್ನು ನೋಡುತ್ತಾ ಎಷ್ಟೋ ಮಾತನಾಡುತ್ತಾ ಹೊತ್ತು ಕಳೆದರು. ಭಾರದ್ವಾಜನು ಮಾಲಿನಿಯನ್ನು ಅದುವರೆಗೂ ಪ್ರಣಯಭಾವದಿಂದ ಮುಟ್ಟಿರಲಿಲ್ಲ. ಆ ರಾತ್ರಿ ಹಠಾತ್ ಅವಳ ಮುಖವನ್ನು ತನ್ನ ಕೈಯಲ್ಲಿ ಹಿಡಿದು ಅವಳನ್ನು ಮುತ್ತಿಟ್ಟನು. ಹುಡುಗಿಗೆ ಇದು ಹೇಗೋ ಆಯಿತು. ಹೊಳೆಯ ಪ್ರವಾಹ ಕಾಡುಮರಗಳನ್ನು ಹೊಡೆದುಕೊಂಡು ಹೋಯಿತು. ಅವಳು ಅವನ ತೆಕ್ಕೆಗೆ ಬಿದ್ದಳು. ದೇಹ ಸಂಬಂಧ ಬೆಳೆಯಲಿಲ್ಲ. ಆದರೂ ಅಂದು ಅವರು ಗಂಡ ಹೆಂಡಿರಾದರು.

ಸ್ನಾನಘಟ್ಟದ ಮೇಲುಗಡೆ ಹೊಳೆಯ ಸರಿದು ನಡುವೆ ಯೋಗಶೈಲವನ್ನು ಬಲಕ್ಕೆ ಬಿಟ್ಟುಕೊಂಡು ಇವರು ಈಸಿ ಬರಬೇಕು. ಈಗ ನದಿಯ ಶಯ್ಯ ಸ್ವಲ್ಪ ಮಾರ್ಪಟ್ಟು ಯೋಗಶೈಲ ಒಂದು ಪಕ್ಕಕ್ಕೆ ಇದ್ದಂತೆ ಕಾಣುತ್ತದೆ. ಆಗ ಸರಿಯಾಗಿ ಮಧ್ಯೆ ಇರುತ್ತಿತ್ತು. ತಕ್ಕಷ್ಟು ಯತ್ನ ಮಾಡಿದರೆಯೇ ಇವರು ಬಂಡೆಯ ಮೇಲುದೆಸೆಯಲ್ಲಿ ಹಾಯ್ದು ಬರಬಹುದು. ಅದಿಲ್ಲದಿದ್ದರೆ ಬಂಡೆಯ ಕೆಳಗೆ ಹಾಯಬೇಕಾಗುತ್ತಿದ್ದಿತು. ಒಂದು ದಿನ ಭಾರದ್ವಾಜನು ಬಂಡೆಯ ಮೇಲೆ ಹಾಯುವ ಪ್ರಯತ್ನದಲ್ಲಿ ಸ್ವಲ್ಪ ಸೋತನೆಂದು ಕಾಣುತ್ತದೆ. ಸಾಲದ್ದಕ್ಕೆ ಇವರು ಹೊಳೆಯಲ್ಲಿ ಆ ಸ್ಥಳಕ್ಕೆ ಬರುವ ವೇಳೆಗೆ ಮೇಲಿನಿಂದ ಮರವೊಂದು ಹೊಳೆಯಲ್ಲಿ ತೇಲಿ ಬಂದಿತು. ದತ್ತನು ಈ ಮರ ಬರುವುದನ್ನು ಕಂಡನು. ಅದು ನೇರವಾಗಿ ಭಾರದ್ವಾಜನ ಮೇಲೆ ಹಾಯುವಂತೆ ಕಂಡದ್ದರಿಂದ ಅವನು ಕೂಗಿ ಎಚ್ಚರ ಹೇಳಿದನಂತೆ. ಸ್ನಾನಘಟ್ಟದ ಮೇಲಿನಿಂದ ನೋಡುತ್ತಿದ್ದ ಜನರೂ ಭಾರದ್ವಾಜನಿಗೆ ಎಚ್ಚರ ಹೇಳಿ ಕೂಗಿದರು. ಈ ಕೂಗುಗಳು ಭಾರದ್ವಾಜನಿಗೆ ಕೇಳಿಸಿರಬೇಕು. ಆದರೆ ಕೂಗುವುದು ಏಕೆ

ಎಂದು ಮೊದಲಲ್ಲಿ ಅವನಿಗೆ ತಿಳಿದಿರಲಾರದು. ಇವರು ಮೇಲುಗಡೆ ಕೈ ತೋರಿಸುತ್ತಿದ್ದುದರಿಂದ ಅವನು ಆ ಕಡೆಗೆ ನೋಡಿದನು. ತಲೆ ತಿರುಗಿಸಿದ್ದು ನಮಗೆ ಕಂಡಿತು.

ಆದರೆ ಮರು ಕ್ಷಣಮರ ಇವನ ಮೇಲೆ ಹಾಯ್ದೇ ಬಿಟ್ಟಿತು. ಎದೆಯ ಮೇಲೆ ಈಸುತ್ತಿದ್ದ ತರುಣ ಒಂದು ಕೊಂಬೆಯ ಅಡಿಗೆ ಸಿಕ್ಕಿ ನೀರಿನೊಳಕ್ಕೆ ಹೋದನು. ತಿರುಗಿ ಮೇಲೆ ಕಾಣಲೇ ಇಲ್ಲ. ಮರ ಒಂದು ಕೋಡುಗಲ್ಲಿಗೆ ಆತುಕೊಂಡಿತು. ತರುಣ ಮರದ ಕೊಂಬೆಗಳ ಮಧ್ಯೆ ಮರಕ್ಕೆ ಕಲ್ಲಿಗೆ ನಡುವೆ ನೀರಿನೊಳಕ್ಕೆ ಸಿಕ್ಕಿಕೊಂಡು ಸತ್ತುಹೋದನು. ದತ್ತನು ಹುಬ್ಬಿನಂತೆ ತನ್ನ ಜೀವವನ್ನು ಮೂರು ಸಲ ಸಾವಿಗೆ ಒತ್ತೆಮಾಡಿ ಭಾರದ್ವಾಜನ ದೇಹವನ್ನು ಕಲ್ಲಿನ ಮೇಲಕ್ಕೆ ಸೆಳೆದು ತಂದನು. ಭಾರದ್ವಾಜನು ಅಲ್ಲಿರಲಿಲ್ಲ. ಇದ್ದರೆ ಬರಿಯ ಆತ್ಮವಾಗಿ ಆಕಾಶದಲ್ಲಿದ್ದನು. ಆಶ್ರಮಕ್ಕೆ ಉಳಿದದ್ದು ಅವನ ಕಳೇಬರ. ಈ ಕಡೆಯಿಂದ ಹೋದ ಇಬ್ಬರೂ ದತ್ತನೂ ಸೇರಿ ಭಾರದ್ವಾಜನ ಶವವನ್ನು ಘಟ್ಟಕ್ಕೆ ತೆಗೆದುಕೊಂಡು ಬಂದರು. ಕುಲಪತಿಗಳು ಈ ಅನಾಹುತವನ್ನು ಕುರಿತು ಬಹಳವಾಗಿ ಪರಿತಾಪಪಟ್ಟರು. ಎಷ್ಟೋ ಅನುಭವವನ್ನು ಪಡೆದು ಕೊಡಬೇಕಾಗಿದ್ದ ದೇಹ ಇಷ್ಟು ಬೇಗ ಕಳಚಿಹೋಯಿತೇ ಎಂದು ದುಃಖಿಸಿದರು. ಹೋದವನಿಗೆ ಕರ್ಮಾಂತರಗಳನ್ನು ನಡೆಸಿದರು. ಇನ್ನು ಮೇಲೆ ತುಂಬಿದ ಹೊಳೆಯ ಈಜಾಟ ಬೇಡ ಎಂದು ನಿಷೇಧಿಸಿದರು.

"ಭಾರದ್ವಾಜನಿಗೆ ಮೊದಲು ಹೊಳೆ, ಆಮೇಲೆ ಹೆಣ್ಣು, ಆಮೇಲೆ ಜೀವನ, ಆಚೆಗೆ ತಪಸ್ಸು" ಎಂದಿದ್ದನು. ನಾಲ್ಕು ಸಿದ್ಧಿಯನ್ನು ಬಯಸಿದ್ದ ತರುಣ ಮೊದಲ ಸಿದ್ಧಿಯೇ ಕೈಗೂಡದೆ ಮುಗಿದಿದ್ದನು. ನದಿ ಮಾಲಿನಿ, ಹುಡುಗಿ ಮಾಲಿನಿಯ ವಿಷಯದಲ್ಲಿ ಸವತಿಯಂತೆ ಆಸೂಯೆಯಿಂದ ನಡೆದುಕೊಂಡಿತು. ತರುಣನನ್ನು ತಾನೇ ತಿಂದು ಮುಗಿಸಿದ್ದಿತು. ಇತ್ತ ಮಾಲಿನಿಯ ಸ್ಥಿತಿಯು ತುಂಬಾ ಚಿಂತಾಜನಕವಾಯಿತು. ನಾಲ್ಕು ವರ್ಷದ ಹಿಂದೆ ಮದುವೆಯಾಗಬಹುದಾಗಿತ್ತು. ಆಗಿರಲಿಲ್ಲ. ಗಂಡ ಹೆಂಡಿರಾಗದೆ ದೇಹ ಸಂಬಂಧವನ್ನು ಬೆಳೆಸದೆ ಗಂಡ ಹೆಂಡಿರ ವಿಶುದ್ಧ ಪ್ರೇಮವನ್ನು ಬೆಳೆಸಿಕೊಂಡಿದ್ದರು. ಮುಡಿಯುವ ಮುನ್ನ ಹೂವನ್ನು ಕೈಯಲ್ಲಿ ನೋಡಿ ಸುಖಿಸುವಂತೆ ಆಯಿತು. ಎಡೆಯ ಮೇಲೆ ಹಲ್ಲಿ ಬಿದ್ದು ಊಟ ಬಿಟ್ಟು ಏಳಬೇಕಾಗುವಂತೆ ಇವರ ಬಾಳಿನಲ್ಲಿ ಊಟ ಅಲ್ಲಿಯೇ ನಿಂತುಹೋಯಿತು.

ಅತ್ತರೆ ಜನ ನಕ್ಕಾರು ಎಂಬ ಭಯದಿಂದ ಇವಳು ಅಳುವುದಕ್ಕೂ ಇಲ್ಲವಾಗಿದ್ದಿತು. ನಿಜವಾಗಿ ಅವಳಿಗೆ ಅಳು ಬರಲೂ ಇಲ್ಲ. ಅಳುವುದಕ್ಕೇ ಆಗದಂತೆ ಅವಳ ಉಸಿರು ಕಟ್ಟಿಹೋಯಿತು.

ಮಾಲಿನಿ ನಿಜವಾಗಿಯೂ ಒಬ್ಬೊಂಟಿಯಾದಳು. ಮೊದಲು ಕೆಲವು ಕಾಲ ಹುಡುಗಿ ಹಗಲೆನ್ನದೆ ಭಾರದ್ವಾಜನನ್ನು ನೆನೆಯುತ್ತಾ ಇದ್ದಳು. ಅವನ ಎದೆ ಹರವು, ಆ ಕಣ್ಣ ಹೊಳಪು ಧೀರವಾದ ಅವನ ನಡೆ, ಆ ನಡುವಿನ ಅಂದ. ಇವು ಅವಳ ಕಣ್ಣ ಮುಂದೆ ತಿರಿತಿರುಗಿ ಹಾಯ್ದುವು. ಕೊನೆಯ ಸಲ ತಾವು ಜೊತೆಯಾಗಿ ಕುಳಿತಿದ್ದ ಸಂದರ್ಭವನ್ನು ಮತ್ತೆ ನಿಜವೆಂಬಂತೆ ನೆನೆದು ಅವಳು ಸವೆದಳು. ಹೆಣ್ಣ ಕಿವಿಗೆ ಗಂಡುಧ್ವನಿ ಎಂದಾದರೂ ಸವಿಯೇ ಸರಿ. ಆದರೆ ಅದರಲ್ಲಿ ಒಲುಮೆ ಬೆರೆತಾಗ ಆ ಸವಿಗೆ ಹೊಸ ಪಾಕ ಬರುತ್ತದೆ. ಅಂದಿನ ಅವನ ಮಾತಿನ ಆ ಪಾಕವನ್ನು

ಅವಳು ನೆನೆದಳು. ಗಂಡ ಹೆಂಡಿರಾಗುವ ತರುಣ ತರುಣಿ ಇವರು ಹತ್ತಿರ ಹತ್ತಿರ ಕುಳಿತಿದ್ದರು. ಸುಮ್ಮನೆ ಮೈಗೆ ಮೈಸೋಕಿದ ಆ ಸುಖವೆ ಸುಖ. ಅದನ್ನು ನೆನೆದು ತರುಣಿ ಸುಖದಿಂದ ಉಬ್ಬುವಳು. ಈಜಿ ಬರುತ್ತಾ ತನ್ನನ್ನು ನೋಡಿ ತನ್ನ ಪ್ರಿಯನು ಶಕ್ತಿಯನ್ನು ಪಡೆದನೆಂದು ಅವಳು ನಂಬಬಲ್ಲಳು. ದೂರದಲ್ಲಿ ನೀರಮೇಲೆ ಕಾಣುತ್ತಿದ್ದ ಅವನ ಮುಖದಲ್ಲಿ ಅವನ ಕಣ್ಣೆರಡು ಹೊಳೆಯುತ್ತಿದ್ದುದನ್ನು ಕರೆಯಲ್ಲಿ ನಿಂತಿದ್ದ ತನ್ನಲ್ಲಿ ನೆಟ್ಟಿದ್ದುದನ್ನು ತಾನು ಕಂಡನೆಂದು ಅವಳು ಭಾವಿಸಿದಳು. ಪ್ರಣಯ ಅಮರವೆನ್ನುವುದು ಬರಿಯ ಅಲಂಕಾರವಲ್ಲ. ನಿಜವಾದ ಮಾತು. ಆದರೆ ಆ ಪ್ರೇಮ ನಿಜವಾದಷ್ಟು ಅದರ ನಷ್ಟವೂ ನಿಜವಾಗಿತ್ತು. ಅಷ್ಟು ನಿಜವಾದ ಪ್ರೇಮ ಇಷ್ಟು ಸುಳ್ಳಾಯಿತು ಎಂದು ಆ ತರುಣಿ ಮಾಲಿನಿ ತೀರ ಹುಚ್ಚಳಂತಾದಳು. ತಪದ ನೆಲೆಯಲ್ಲಿ ಇಂಥ ಹುಚ್ಚು ಸರಿಯಲ್ಲ. ಆದರೆ ತಪದ ನೆಲ ಹುಚ್ಚು ಹಿಡಿಯದಂತೆ ಏಕೆ ತಡೆಯಲಿಲ್ಲ? ತಡೆಯಲಿಲ್ಲ ಅಷ್ಟೇ ಅಲ್ಲ, ಈ ತಪದ ನೆಲ ಅವಳ ಹುಚ್ಚನ್ನು ಹೆಚ್ಚಿಸಿತು. ಅದೇ ಹಂಸದ ದಿಬ್ಬ. ಅಲ್ಲಿ ಎಂದಿನಂತೆ ಹಂಸಗಳು ಮಿಥುನದಲ್ಲಿ ಸೇರುತ್ತವೆ. ಅಲ್ಲಿ ತಾನೂ ತನ್ನ ಗಂಡಿನೊಂದಿಗೆ ಹೋಗಿರುತ್ತಿದ್ದಳು. ಈಗ ಅವನಿಲ್ಲ. ಹೊಳೆಯುವ ನೀರಿನ ಎರಡು ಸೀಳಿನ ಮಧ್ಯೆ ತರುಣ ತರುಣಿ ಇಬ್ಬರ ನೆರಳು ಕಾಣುತ್ತದೆ. ಅದರ ನಿಜ ಇಲ್ಲದೆ ಹೋಗಿದೆ. ಯಾವ ಕಾಡು ಬಾಳು ಇದು! ಏಕೆ ಈ ಬಾಳು?

ದುಃಖದ ವೇಗವನ್ನು ತಡೆಯಲಾಗದೆ ಅವಳು ನಿರಾಶೆಯಲ್ಲಿ ಒಂದು ದಿನ ಒಬ್ಬಳೇ ಹೋಗಿ ಹೊಳೆಯಲ್ಲಿ ಬಿದ್ದಳು. ಈಜು ಬಂದವಳಿಗೆ ಸಾಯುವುದು ಸುಲಭವಾಗಲಿಲ್ಲ. ಹೊಳೆ ಸ್ವಲ್ಪ ದೂರ ಕೊಚ್ಚಿಕೊಂಡು ಹೋಗಿರಲು ಹೂವು ಪತ್ರೆಗಾಗಿ ಅಲೆಯುತ್ತಿದ್ದ ದತ್ತನು ಯಾರೋ ಹೊಳೆಯಲ್ಲಿ ಬಿದ್ದಿದ್ದಾರೆಂದು ನೀರಿಗೆ ದುಮುಕಿ ಇವಳನ್ನು ಹೊರಕ್ಕೆ ತಂದನು. ಹುಡುಗಿಗೆ ಜೀವ ಮರಳಿತು. ಅವಳು ದತ್ತನನ್ನು ನೋಡಿ ನೀನು ನನ್ನನ್ನು ಏಕೆ ಸಾಯಲು ಬಿಡಲಿಲ್ಲ ಎಂದಳು. ದತ್ತನು ಅದು ವಿಧಿಗೆ ಇಷ್ಟವಿಲ್ಲ ಎಂದನು. ಬೇಡವೆನಿಸಿದ್ದ ಬಾಳನ್ನು ಮತ್ತೆ ಬೇಕು ಎಂದಂತೆ ತರುಣಿ ತನ್ನ ಬಾಳನ್ನು ಬಾಳತೊಡಗಿದಳು.

ದಿನ ಕಳೆದವು, ಮಾಸ ಕಳೆದವು, ಎರಡು ಮೂರು ವರ್ಷ ಕಳೆದವು. ತರುಣಿಯ ದುಃಖದ ಉದ್ವೇಗ ಕಡಿಮೆಯಾಯಿತು. ನೆನಪು ಒಂದು ರೀತಿಯ ಶಾಂತಿಗೆ ಬಂದಿತು. ಮಾಲಿನಿ ಆಶ್ರಮದ ಜನರೊಂದಿಗೆ ಬೆರೆತು ಎಲ್ಲರಂತೆ ನಡೆದುಕೊಂಡಳು. ದತ್ತನೊಡನೆ ತಕ್ಕಮಟ್ಟಿಗೆ ಸರಳವಾಗಿ ವರ್ತಿಸತೊಡಗಿದಳು. ಮನಸ್ಸು ಬೇರೆ ಕಡೆ ತಿರುಗಿಸಿದಳು ಸರಿ. ಆದರೆ ಮನಸ್ಸು ತಿರುಗಲಿಲ್ಲ. ಬಯಕೆಯ ಸ್ವರೂಪ ಏನೆಂಬುದು ಅವಳಿಗೆ ತಿಳಿದೊಡನೆ ಅದು ಅವಳನ್ನು ಆಳಲು ಮೊದಲುಮಾಡಿತು. ನಾಲ್ಕಾರು ದಿನ ಅವಳು ಮನಸೊಡನೆ ಹೋರಾಡಿ ಕೊನೆಯಲ್ಲಿ ಸೋತಳು. ದತ್ತನ ಕಡೆಗೆ ಅವಳ ಚಿತ್ತ ತಿರುಗಿತು. ದತ್ತನ ಬಳಿಗೆ ಅವನು ಒಬ್ಬನೇ ಇರುವ ವೇಳೆ ಹೋದಳು. ಅವನು ಅವಳ ಕಡೆ ತಿರುಗಿ, 'ಏನಕ್ಕ' ಅಂದನು. ಅವನ ಧ್ವನಿಯಲ್ಲಿ ಸ್ವಲ್ಪ ವಿಸ್ಮಯ ಬೆರೆತಿತ್ತು. ಮಾಲಿನಿ ಸಂಕೋಚ ಪಡದೆ ತನ್ನನ್ನು ಮದುವೆಯಾಗಬೇಕೆಂದು ಬೇಡಿದಳು. ಅವನು 'ಅಕ್ಕ ಆ ಪ್ರಸ್ತಾಪ ಬೇಡ'

ಎಂದನು. ವಿಧಿ ಏನು ಹೇಳುವುದೆಂದು ತಿಳಿಯುವುದು ಕಷ್ಟ. ನಮಗೆ ಇಷ್ಟವಾದದ್ದನ್ನು ಅದು ಹೇಳುತ್ತಿದೆಯೆಂದು ಭ್ರಮಿಸುವುದು ಸುಲಭ. ಸರಿ ಯಾವುದು ಎಂಬುದನ್ನು ನೋಡಿ ವಿಧಿ ಅದನ್ನು ವಿಧಿಸುತ್ತದೆ ಎಂದು ಗ್ರಹಿಸಬೇಕು ಎಂದು ದತ್ತನು ಮಾಲಿನಿಗೆ ಹೇಳಿದನು.

ಹಾಗಾದರೆ ವಿಧಿ ಏನು ಹೇಳುತ್ತದೆ. 'ಅದು ಮದುವೆ ಬೇಡ ಎಂದು ಹೇಳಿದಂತೆ ಈಗ ವಿಧಿ ನಿನಗೆ ಸಂಸಾರ ಬೇಡ ಎಂದು ಹೇಳಿದೆ. ಅಣ್ಣ ಭಾರದ್ವಾಜ ತೀರಿಕೊಂಡ ದಿನವೇ ನಿನಗೆ ವಿಧಿ ಈ ದಾರಿಯನ್ನು ಸೂಚಿಸಿತು. ಇದುವರೆಗೆ ನಾನು ಅದರ ಇಷ್ಟ ನಿನಗೆ ತಿಳಿದಿದೆ ಎಂದ್ದಿದ್ದೆ. ಹಾಗಾದರೆ ಈ ಆಸೆ? ಇದನ್ನು ವಿಧಿ ಕೊಡಲಿಲ್ಲವೆ? ಹಾವು ಸುಳಿಯುವ ಗುಡಿಸಲೆಂದು ಜೀವ ಮೈಯಲ್ಲಿ ಎಚ್ಚರದಿಂದರಬೇಕು. ಹಾವಿನೊಂದಿಗೆ ಇಲಿಯನ್ನು ಒಂದೇ ಬುಟ್ಟಿಯಲ್ಲಿ ಮುಚ್ಚಿಟ್ಟು ದೈವ ಎಚ್ಚರಿಕೆ ಹೇಳುತ್ತದೆ. ಹೇಳಿ ಫಲವೇನು? ದತ್ತ ಮಾತನಾಡಲಿಲ್ಲ. ಮಾಲಿನಿಯೂ ಆಗ ಮಾತನ್ನು ಇಷ್ಟಕ್ಕೆ ನಿಲ್ಲಿಸಿದಳು. ತನ್ನ ಮನಸ್ಸನ್ನು ವೈರಾಗ್ಯದ ದಾರಿಗೆ ತಿರುಗಿಸಿದಳು.

"ವರ್ಷ ಹೇಗೋ ಕಳೆಯಿತು. ವಸಂತ ಮತ್ತೆ ಬಂದಿತು. ಮತ್ತೆ ವನದಲ್ಲಿ ಕೋಗಿಲೆಯ ಗಾನ ಕೇಳಿಸಿತು. ಸಹಕಾರ ತಳೆಯಿತು. ಮಲ್ಲಿಗೆ ಹೂತಿತು. ತರುಣಿಯ ಮನಸ್ಸಿನಲ್ಲಿ ಮತ್ತೆ ಆಸೆ ಮೊಳೆಯಿತು. ಮರದ ತಳಿರಂತೆ, ಬಳ್ಳಿಯ ಹೂವಂತೆ ಮನಸ್ಸಿನ ಆಸೆ ಒಂದು ಅನಿವಾರ್ಯ ವ್ಯಾಪಾರ ಸಹಜ ವ್ಯಾಪಾರ, ಒಣಗದ ಮರಕ್ಕೆ ತಳಿರಿರುವುದು ಸ್ವಭಾವ. ಬೆಳೆಯುವ ಬಳ್ಳಿಗೆ ಹೂ ತಳೆಯುವುದು ಸ್ವಭಾವ. ಲೋಕವೆಲ್ಲಾ ಅಸೆಯಿಂದ ಉಸಿರೆಳೆದು ಉದ್ದುದ್ದವಾದಾಗ ಮಾಲಿನಿಯ ಹೃದಯದಲ್ಲಿ ಪ್ರಣಯ ಎಚ್ಚೆತ್ತಿತ್ತು. ಮನುಷ್ಯರು ಒಬ್ಬರನ್ನು ಕುರಿತು ಒಬ್ಬರು, ಇವರು ಯಾಕೆ ಈ ಆಸೆ ಪಡುತ್ತಾರೆ? ಎಂದು ಹೇಳುತ್ತಾರೆ. ಆ ಹೊತ್ತಿನಲ್ಲಿ ಅವರು ತಮ್ಮ ತಮ್ಮ ಆಸೆ ತಾವು ಪಟ್ಟದ್ದೇ ಬಿಟ್ಟದ್ದೇ ಎಂದು ಯೋಚಿಸುವುದಿಲ್ಲ. ಮನುಷ್ಯರು ಆಸೆ ಪಡುವುದಿಲ್ಲ. ಅದು ಅವರನ್ನು ಪಡಿಸುತ್ತದೆ. ಹೊಳೆಯ ನೀರು ಹೊತ್ತು ತರುವ ಕಾಯಿ, ಕಸ, ಕಾಷ್ಠ ಇಲ್ಲಿ ಅಲ್ಲಿ ಹೋಗುತ್ತೇನೆಂದು ತಾನು ಬಯಸುತ್ತದೆಯೇ? ಜೀವನದ ಪ್ರವಾಹದಲ್ಲಿ ಮನುಷ್ಯರು ಬಹುಭಾಗ ಹೊಳೆಗೆ ಸಿಕ್ಕಿದ ಕಾಯಿ ಕಡ್ಡಿಯಂತೆ ನಿಸ್ಸತ್ವ ವಸ್ತುಗಳು ಸಾವಿರಕ್ಕೆ ಒಬ್ಬ ಇಬ್ಬರು ನಾಯಿನರಿ ಜನದಂತೆ ಜೀವಂತ ವಸ್ತು.

ಜೀವಂತರಾದರೂ ಹೊಳೆಯ ಎದುರಿಗೆ ಸತ್ವವಂತ ಆಗಲಾರವು. ಭಾರದ್ವಾಜನಿಗಿಂತ ಸತ್ವವಂತರುಂಟೆ? ಅವನನ್ನು ಹೊಳೆ ನುಂಗಿತು. ಆಸೆ ಹೊಳೆಯೇರಿದರೆ ನುಂಗಬಾರದ ಜೀವ ಉಂಟೆ? ಅದು ಹೊಳೆ ಏರುವುದೂ ಮನುಷ್ಯರನ್ನು ನೋಡಿ ಅಲ್ಲ. ತಡೆಯಬಲ್ಲವರಿಗೆ ಬಹಳ ಆಸೆ ಇರುವುದಿಲ್ಲ. ತಡೆಯಲಾರದವರನ್ನೇ ಹುಡುಕಿ ಕೊಚ್ಚುತ್ತದೆ. ಬಲವಾದ ಮರ ಒಮ್ಮೆ ಹೇಗೋ ಹಾಯ್ದು ದಡ ಕಾಣುತ್ತದೆ. ಬಲವೇ ಇಲ್ಲದ ಹುಲ್ಲು ಕಡ್ಡಿ ನಡು ಹೊಳೆಯಲ್ಲಿ ಹಾಯ್ದು ಹೋಗುತ್ತದೆ. ಆ ಸಲ ಆಸೆಯ ಹೊಳೆ ಮಾಲಿನಿಯನ್ನು ಕೊಚ್ಚಿ ಕೆಡುಹಿತು. ಅವಳನ್ನು ನಿರ್ದಯದಿಂದ ಒಯ್ದಿತು. ಮಾಲಿನಿ ತಾನು ಹೇಗಾದರೂ ದತ್ತನನ್ನು ಪಡೆಯಲೇಬೇಕೆಂದು ನಿರ್ಧರಿಸಿಕೊಂಡಳು. ಒಂದು ದಿನ ಅವನ ಬಳಿಗೆ ಹೋಗಿ 'ನಾನು ಮತ್ತೆ ನಿನ್ನಲ್ಲಿ ಭಿಕ್ಷೆ ಬೇಡಲು

ಬಂದಿದ್ದೇನೆ' ಎಂದಳು. ದತ್ತನು ಅವಳಿಗೆ ಬಹು ವಿಧವಾಗಿ ಸಮಾಧಾನ ಹೇಳಿ 'ತಾನು ಮದುವೆ ಯಾಗುವುದು ಸಾಧ್ಯವಿಲ್ಲ' ಎಂದು ತಿಳಿಸಿದನು. ಮಾಲಿನಿ ಮತ್ತೆ ಏನೋ ಹೇಳಬೇಕು. ಬಾಯಿಗೆ ಬಂದ ಮಾತನ್ನು ತಡೆದುಕೊಂಡಳು. ತನ್ನ ಪಾಡಿಗೆ ಸುಮ್ಮನೆ ಹೊರಟು ಹೋದಳು. ಆದರೂ ಮತ್ತೆ ಹುಣ್ಣಿಮೆಯ ರಾತ್ರಿ ಭಾರದ್ವಾಜನೆಂದು ಭ್ರಮಿಸಿಕೊಂಡು ದತ್ತನ ಮುಖವನ್ನು ಮುದ್ದಿಸಿದಳು. ದತ್ತ ಮೇಲೆದ್ದು ಬೇಡ ಇದು ಎಂದಿಗೂ ಸಾಧ್ಯವಿಲ್ಲ ಅಂದನು. ಮದುವೆಯಾಗದಿದ್ದರೆ ಜೊತೆಯಲ್ಲಾದರೂ ಇರು ಎಂದಳು. ಅದಕ್ಕೂ ಸಹ ಒಪ್ಪಲಿಲ್ಲ ದತ್ತ. ಆದರೂ ದತ್ತನನ್ನು ಹಿಡಿದು ಎದೆಗೆ ತಬ್ಬಿಕೊಳ್ಳಲು ಹೋದಳು. ಆದರೆ ಹೆದರಿ ಹಿಂದೆ ಸರಿದು ಮಾಲಿನಿಯ ಕಾಲಿಗೆ ಬಿದ್ದು ಬೇಡಿಕೊಂಡನು. 'ನೀನು ನನ್ನನ್ನು ಕಾಪಾಡಬೇಕು. ಪರೀಕ್ಷೆ ಮಾಡಬೇಡಿ. ನೀನು ಹೆಣ್ಣು, ಆದಿಶಕ್ತಿ, ನಿನಗೆ ಪತನವೆಂಬುವುದಿಲ್ಲ. ನಾನು ಹೆಣ್ಣಲ್ಲ, ನನಗೆ ನಿನಗಿರುವ ಆತ್ಮಶುದ್ಧಿಯಿಲ್ಲ. ನೀನು ಅನುಗ್ರಹಿಸಿದರೆ ನಾನು ಮುಂದುಗಾಣುತ್ತೇನೆ. ಹಠ ಮಾಡಿದೆಯೊ ನಾನು ಬಟ್ಟೆಗೆಟ್ಟೆ. ನನ್ನ ಮೇಲೆ, ಅನುಗ್ರಹ ಮಾಡು. ನನ್ನನ್ನು ಕಾಪಾಡು ಎಂದು ದೈನ್ಯದಿಂದ ಬೇಡಿಕೊಂಡನು.

"ಮಾಲಿನಿಯ ಪುಣ್ಯ ಚೆನ್ನಾಗಿತ್ತು. ದತ್ತನ ಧ್ವನಿಯಲ್ಲಿ ಕೇಳಿದ ಅಂಗಲಾಚಿಕೆಯ ಎಳೆ ಅವಳ ಬಾಳಿನ ಯಾವುದೋ ಒಂದು ಕಳೆಯನ್ನು ಮುಟ್ಟಿತು. ಅವಳಿಗೇ ತಿಳಿಯದೆ ಅವಳನ್ನು ಆಸೆ ಅಲ್ಲಿಗೆ ಎಳೆ ತಂದಂತೆ, ಅವಳಿಗೆ ತಿಳಿಯದಂತೆ ಆ ಕಳೆ ಅವಳ ದೃಷ್ಟಿಯನ್ನು ತಡೆದಿದ್ದ ಒಂದು ತೆರೆಯನ್ನು ಹರಿಯಿತು. ತನ್ನ ಆಸೆಯನ್ನು ಸಹಿಸಬಲ್ಲ ಹಿರಿಯನೆಂದು ಕಂಡಿದ್ದ ದತ್ತ ಅವಳಿಗೆ ಆ ಕ್ಷಣ ತನ್ನ ಸಹಾಯದಿಂದ ಮಾತ್ರ ಬದುಕಬಲ್ಲ ನಿಸ್ಸಹಾಯ ಬಾಲಕನಾಗಿ ಕಂಡನು. ಗಂಡೆಂದು ಅಪ್ಪಿಕೊಳ್ಳಲು ಬಯಸಿದ ತೋಳು ಆಗ ಅವನನ್ನು ಮಗುವಂತೆ ಸಂತೈಸಲು ಬಯಸಿತು. ಅವಳು ಅವನನ್ನು ಹತ್ತಿರಕ್ಕೆ ಎಳೆದುಕೊಂಡಳು. ಮಗುವಂತೆ ಕರುಳಲ್ಲಿ ಬೆರಳಾಡಿಸಿದಳು. ಕೆನ್ನೆಯನ್ನು ಬೆನ್ನನ್ನು ಕೈಯಿಂದ ಸವರಿದಳು. ಮಗುವಂತೆ ತಲೆಯನ್ನು ಎತ್ತಿ ಹಿಡಿದು ಮುಖಕ್ಕೆ ಒಂದು ಮುತ್ತನ್ನು ಕೊಟ್ಟಳು. ಅನಂತರ ಕ್ಷಣದಲ್ಲೆ ಎದ್ದು ನಿಂತು ನಿನ್ನ ಮಾತೇ ಸರಿ. ನಾನು ಬರುತ್ತೇನೆ ಎಂದು ಸಾವಧಾನವಾಗಿ ತನ್ನ ಕುಟೀರಕ್ಕೆ ಹೋದಳು. ಮನಸ್ಸಿನ ವೇದನೆಯಲ್ಲಿ ಬದುಕು ಬರಿದಾಗುವುದನ್ನು ನೋಡಬಹುದು."[೧೮]

ಗೌತಮಿ ಹೇಳಿದ ಕತೆಯು ಬೇರೆ ಯಾರದೂ ಅಲ್ಲ. ಅದು ಗೌತಮಿಯ ಯೌವನದಲ್ಲಿ ಎದುರಾದ ಸಮಸ್ಯೆಗಳನ್ನು ಎದುರಿಸಿದ ಸವಾಲೇ ಆ ಕಥೆಯಾಗಿದೆ. ಕುಲಪತಿಗಳೇ(ಕಣ್ವರು) ದತ್ತ ಎಂದು, ಪ್ರಿಯಂವದೆಗೆ ಗೊತ್ತಿರಲಿಲ್ಲ. ಆದರೆ ಶಕುಂತಲೆಗೆ ಮತ್ತು ಅನಸೂಯೆ ಇವರಿಗೆ ಗೊತ್ತಿತ್ತು. ಗೌತಮಿ ಕೊನೆಗೆ ಹೇಳುವುದೇನೆಂದರೆ, ಹೌದು ತಾಯಿ ಅವರು ಅನೇಕ ಬಾರಿ ಇಳಿದ ಹೊಳೆಯನ್ನು ದಾಟುವುದು ಸುಲಭ, ತುಂಬು ಹೊಳೆ ದಾಟುವುದು ಕಷ್ಟ. ಸುಖ ದುಃಖಗಳ ಮಿಲನದಲ್ಲಿ ಯಶಸ್ಸು ಬಹಳ ಮುಖ್ಯವಾಗುತ್ತದೆ. ಹೀಗೆ ಕನ್ನಡ ಸಾಹಿತ್ಯ ಪರಂಪರೆಯ ಪರಿಸರದಲ್ಲಿ ಕಾಳಿದಾಸನ ಅಭಿಜ್ಞಾನ ಶಾಕುಂತಲ ಪ್ರೇರಣೆಯಿಂದ ಹುಟ್ಟಿದ ಕತೆಯಾಗಿದೆ.

ಈ ಕಥೆಯಲ್ಲಿ ಗಂಡು ಹೆಣ್ಣಿನ ಪರಸ್ಪರ ಆಕರ್ಷಣೆಯಿಂದ ಜೀವನ ಎಷ್ಟು ಸುಂದರವಾಗಬಹುದು ಎಂಬುದನ್ನು ಕಂಡಿದ್ದೇವೆ. ಎಷ್ಟು ಸಂಕಟಕರವಾಗಬಹುದೆಂಬುದನ್ನೂ ಕಂಡಿದ್ದೇವೆ. ಅದು ಕೇವಲ ಲೈಂಗಿಕ ತೃಷೆಯಾಗಬಹುದು. ತಾತ್ಕಾಲಿಕವಾಗಿ ಕವಿದು ನಂತರ ಹರಿದು ಹೋಗುವ ವ್ಯಾಮೋಹದ ಮಂಜಾಗಬಹುದು. ಎರಡು ಆತ್ಮಗಳ ಮಿಲನವಾಗಬಹುದು. ಏನೇ ಅಗಲಿ ಯಾವ ಮಾನವನಿಗೂ ಅದು ತಪ್ಪಿದ್ದಲ್ಲ. ಕಣ್ವ ಋಷಿಗಳ ಆಶ್ರಮದ ಸಾತ್ವಿಕ ವಾತಾವರಣದಲ್ಲಿ ಬೆಳೆದ ಶಕುಂತಲೆಯೂ ದುಡುಕಿದಳು. ಅವಳು ಅಪ್ಸರೆಯ ಮಗಳು. ತಾಪಸ ತರುಣಿಯರಿಗೆ ಅಂಥ ಭಯವಿಲ್ಲ ಎಂದು ಪ್ರಿಯಂವದೆ ಅನಸೂಯೆಯರು ತಿಳಿದಿದ್ದರು. ಈ ವಾದಕ್ಕೆ ಉತ್ತರವಾಗಿ ಹೇಳಿದ್ದು 'ಗೌತಮಿ ಹೇಳಿದ ಕತೆಯಾಗಿದೆ.'

ಕಥೆ ಮುಗಿದ ಮೇಲೆ ಅನಸೂಯೆ 'ಮಾಲಿನಿ ಯಾರು ಎಂದು ಹೇಳಲೆ? ಎಂದು ಕೇಳಿದಾಗ ಗೌತಮಿ ಯಾವ ಹಿಂಜರಿಕೆಯೂ ಇಲ್ಲದೆ "ಅಯ್ಯೋ ಹೇಳು ತಾಯಿ, ಸಂಕೋಚವೇಕೆ?" ಎನ್ನುತ್ತಾಳೆ. ಪ್ರಕೃತಿ ನಮ್ಮಲ್ಲಿ ನೆಟ್ಟಿರುವ ಈ ಬಯಕೆಯ ವಿಷಯದಲ್ಲಿ ನಾಚಬೇಕಾದ್ದಿಲ್ಲ. ಆದರೆ ಅದು ನಮ್ಮನ್ನು ಮುಳುಗಿಸದಂತೆ ಎಚ್ಚರಿಕೆಯಿಂದಿರಬೇಕು. ಇದು ಈ ಹುಡುಗಿಯರಿಗೆ ತಿಳಿದರೆ ಒಳ್ಳೆಯದು ಎಂದು ಗೌತಮಿ ಯೋಚಿಸಿರಬೇಕು. ಈ ಸಂದರ್ಭದಲ್ಲಿ 'ಶಾಕುಂತಲ'ದ ಒಂದು ಪ್ರಸಂಗ ನೆನಪಿಗೆ ಬರುತ್ತದೆ. ಮೂರನೆಯ ಅಂಕದಲ್ಲಿ ದುಷ್ಯಂತ ಶಕುಂತಲೆಯರ ಪ್ರಣಯ ಸಲ್ಲಾಪವಾಗುತ್ತಿರುವ ಸಮಯದಲ್ಲಿ ಗೌತಮಿ ಅಲ್ಲಿಗೆ ಬರುತ್ತಾಳೆ. ಆಗ ನೇಪಥ್ಯದಲ್ಲಿ "ಚಕ್ರವಾಕ ಮಧುರೇ ಆಮಂತ್ರಯಸ್ವ ಸಹಚರಂ ಉಪಸ್ಥಿತಾ ರಜನೇ" ಎಂಬ ಮಾತು ಗೌತಮಿ ಬರುತ್ತಿದ್ದಾಳೆಂಬ ಸೂಚನೆ ಕೇಳಿಬರುತ್ತದೆ. ಗೌತಮಿಯೇ 'ರಜನಿ'. ಎಚ್ಚರಿಕೆ ಕೊಟ್ಟವರು ಯಾರೆಂದು ಕಾಳಿದಾಸ ತಿಳಿಸಿಲ್ಲ. ಪ್ರಿಯಂವದೆ ಎಂದು ನಾವು ಊಹಿಸಬಹುದು. ಈ ಮುದುಕಿ ಗೌತಮಿಗೆ ಯುವಕ ಯುವತಿಯರ ಪ್ರೇಮ ಹೇಗೆ ಅರ್ಥವಾಗಬೇಕು! ಇವಳು ಸೌಖ್ಯಘಾತಕಿ ಎಂದು ಅವಳ ಭಾವನೆಯಿದ್ದಿರಬೇಕು. ಇದನ್ನು ನೆನಪಿನಲ್ಲಿಟ್ಟುಕೊಂಡು ಗೌತಮಿಯ ಕಥೆಗೆ ಇಲ್ಲಿಯ ಪ್ರಿಯಂವದೆಯ ಪ್ರತಿಕ್ರಿಯೆ ಎಂಬುದನ್ನು ಗಮನಿಸಬಹುದು. ಯುವತಿಯರಲ್ಲಿ ಕಾಣುವುದು ಅಷ್ಟಾಗಿ ಹರ್ಷದ ನಲಿವಲ್ಲ. ನೆಮ್ಮದಿಯ ಕಾಲದಲ್ಲಿ ಹಿಂದಿನ ಭಯಂಕರವಾದ ವಿಪತ್ತನ್ನು, ಅದರಿಂದ ಪಾರಾದುದ್ದನ್ನೂ ನೆನೆಯುವುದರಿಂದ ಬರುವ ಅಂತರ್ಮುಖತೆ, ವಿಚಾರಪರತೆ. ಗೌತಮಿಯ ಕಥೆಯನ್ನು ಇವೆರಡು ಚಿತ್ರಗಳ ನಡುವೆ ತಂದಿರುವುದು ಬಹಳ ಪರಿಣಾಮಕಾರಿಯಾದ ತಂತ್ರ, ಶೈಲಿ, ಭಾವದ ಮತ್ತು ವಿಚಾರದ ಪ್ರಚೋದನೆ, ಪಾತ್ರಚಿತ್ರಣ ಇವೆಲ್ಲಾ ದೃಷ್ಟಿಯಿಂದಲೂ ಇದು ಉತ್ತಮವಾದ ಕತೆಯಾಗಿದೆ.

**ಅರ್ವಾಚೀನ ಅಂಗ್ಲ ಶಕುಂತಲೆ**

ಮಾಸ್ತಿಯವರು ಬರೆದಿರುವ ಅರ್ವಾಚೀನ ಅಂಗ್ಲ ಶಕುಂತಲೆಯಲ್ಲಿ ನಿರೂಪಕರ ಸ್ಥಾನವನ್ನು ಲೇಖಕರೇ ವಹಿಸಿಕೊಂಡಿದ್ದಾರೆ. ಕಾಳಿದಾಸನ ಅಭಿಜ್ಞಾನ ಶಾಕುಂತಲ ನಾಟಕದಲ್ಲಿ ದುಷ್ಯಂತನು

ಉಂಗುರದ ದರ್ಶನದಿಂದ ಶಕುಂತಲೆಯನ್ನು ನೆನಪಿಸಿಕೊಂಡಂತೆ, ಕಥೆಯಲ್ಲಿ ಕಥಾನಾಯಕಿಯ ಗಂಡನ ತಂದೆ ತಾಯಿಗಳು ಮೊಮ್ಮಗನನ್ನು ನೋಡಿ ಗುರುತಿಸುತ್ತಾರೆ.

ಮಗುವಿನ ಮುಖ, ಹುಬ್ಬು, ತುಟಿ, ಗಲ್ಲ, ಬೆರಳು ತಮ್ಮ ಮಗನ ಮುಖ, ಗಲ್ಲ, ಬೆರಳಂತೆ ಇದ್ದದ್ದರಿಂದ ಈ ಅಜ್ಜ ಅಜ್ಜಿ ಮಗುವನ್ನು ಒಪ್ಪಿಕೊಂಡರು. ಹಾಗಿರದಿದ್ದರೆ ಒಪ್ಪುತ್ತಿದ್ದರೇ? ಹೇಳುವಂತಿಲ್ಲ. ಮಗ ಎಲ್ಲ ವಿವರದಲ್ಲಿ ತಂದೆಯನ್ನು ಹೋಲಿದ್ದಾನೆ ಎನ್ನುವ ಮಾತನ್ನು ನೋಡಿದಾಗ ನನಗೆ, ಭಾರತದ ನಮ್ಮ ಶಕುಂತಲೆಯ ಕತೆ ನೆನಪಿಗೆ ಬಂದಿತು. ಶಕುಂತಲೆ ದುಷ್ಯಂತನಿಗೆ, "ಈ ಮಗುವನ್ನು ನೋಡು, ಇದು ನಿನ್ನ ಮಗು ಎನ್ನುವುದು ಸ್ಪಷ್ಟಕಾಣುತ್ತದೆ. ಕೈ ಕಾಲು ಬೆರಳೆಲ್ಲ ನಿನ್ನ ಬೆರಳಂತೆಯೇ ಇವೆ" ಎಂದಳು. ಶಕುಂತಲೆಯ ಕಥೆಯಲ್ಲಿ ದುಷ್ಯಂತನ ಅಪ್ಪ ಇರಲಿಲ್ಲ. ದುರ್ದೈವ, ದುಷ್ಯಂತ ಮಾತ್ರ ಇದ್ದು, ಅವಳ ಮಾತನ್ನು ಒಪ್ಪಲಿಲ್ಲ. ಜೆನ್ನಿಯ ಸುದೈವ ಇಲ್ಲಿ ದುಷ್ಯಂತ ಇರಲಿಲ್ಲ. ಅವನ ಅಪ್ಪ ಇದ್ದ. ಮಗು ತನ್ನ ಮೊಮ್ಮಗ ಎಂದು ಒಪ್ಪಿಕೊಂಡ.

ಹೀಗೆ ಮಾಸ್ತಿಯವರು ತಮ್ಮ ಕಥೆಯಲ್ಲಿ ದಿನಪತ್ರಿಕೆಯ ವಿಷಯವನ್ನು ಕರಗಿಸಿಕೊಂಡು ತಮ್ಮದೇ ಶೈಲಿಯಲ್ಲಿ ಪಾತ್ರಗಳನ್ನು ಸೃಷ್ಟಿಸಿಕೊಂಡು ಸೃಜನಾತ್ಮಕವಾದ ಕತೆಯನ್ನು ಬರೆದು ಓದುಗರಿಗೆ ತಿಳಿಯಪಡಿಸಿದ್ದಾರೆ.

ಇಂಗ್ಲೆಂಡಿನ ಒಂದು ಊರಿನ ಸಂಗತಿಯನ್ನು ಬಳಸಿಕೊಂಡು ಬರೆದಿದ್ದಾರೆ. ಬರುವ ಪಾತ್ರಗಳು ಲಯೋನೆಲ್, ಜೆನ್ನಿ, ಜೋನ್ಸ್, ಅಜ್ಜಿ ಇಂತಹ ಪಾತ್ರಗಳು ಬರುತ್ತವೆ. ದುಷ್ಯಂತ ಶಕುಂತಲೆ ಆ ಕಾಡಿನ ಆಶ್ರಮದಲ್ಲಿ ಭೇಟಿಯಾದರೆ ಈ ಕಥೆಯ ನಾಯಕಿ ನಾಯಕ ಕುದುರೆ ಪಂದ್ಯ ನಡೆಯುವಲ್ಲಿ ಒಂದಾಗುವರು. ಇಬ್ಬರ ಪರಸ್ಪರ ಒಪ್ಪಿಗೆಯಿಂದ ಸಂಸಾರ ಮಾಡಿದರು. ನಂತರ ಕೆಲಸಕ್ಕೆಂದು ಬೇರೆ ಕಡೆಗೆ ಹೋದವನು ಬರಲಿಲ್ಲ. ಅಷ್ಟೊತ್ತಿಗೆ ಮಗು ಪಡೆದಿದ್ದಳು.

**ಕಾದಂಬರಿ**

**'ಶಾಕುಂತಲ'–ಸಿ.ನಟರಾಜ**

ಕಾಳಿದಾಸನ ಪ್ರಸಿದ್ಧವಾದ ಅಭಿಜ್ಞಾನ ಶಾಕುಂತಲಮ್ ನಾಟಕದ ಸೃಜನಾತ್ಮಕತೆಯನ್ನು ಕಾದಂಬರಿ ರೂಪದಲ್ಲಿ ನೀಡಿದ್ದಾರೆ. ಈ ಕಾದಂಬರಿಯಲ್ಲಿ ಏಳು ಭಾಗಗಳು ಕಂಡುಬರುತ್ತವೆ. ಮೊದಲನೆಯದು 'ನೋಟ', ಎರಡನೆಯದು 'ಬೇಟ', ಮೂರನೆಯದು 'ಕೂಟ', ನಾಲ್ಕನೆಯದು 'ಬೀಳ್ಕೊಡುಗೆ', ಐದನೆಯದು 'ತಳ್ಳು', ಆರನೆಯದು 'ಹೊದಕುಳಿ', ಏಳನೆಯದು 'ಒಳ್ಪು'.

ಮಹಾಕವಿ ಕಾಳಿದಾಸರ 'ಅಭಿಜ್ಞಾನ ಶಾಕುಂತಲಮ್' ಎನ್ನುವ ನಾಟಕವನ್ನು ಕಾದಂಬರಿ'ಕಾರರು ತಾವು ಅರಿತಂತೆ, ತಮಗೆ ಮನದಟ್ಟಾದಂತೆ, ತನ್ನದೇ ಆದ ನೋಟ, ಒಳಹುಗಳಲ್ಲಿ ಕಂಡಂತೆ, ಎಚ್ಚರಿಕೆಯಿಂದ ಅದರ ಹರಳನ್ನು ಹೊಂದಿಸಿ ಅಂಗೈಯ ಮೇಲಣ ರಂಗದ ಕೈಪಿಡಿಯಾಗಿ ಕಾದಂಬರಿಯ ರೂಪದಲ್ಲಿ ಕನ್ನಡಿಸಿದ್ದಾರೆ.

ಶಾಕುಂತಲ ನಾಟಕವನ್ನು ಕಾದಂಬರಿಯ ರೂಪಕ್ಕೆ ತಿರುಗಿಸುವುದು ಬಹಳ ಕಷ್ಟದ ಕೆಲಸ. 'ಕಾದಂಬರಿ ಕರತಲ ರಂಗಭೂಮಿ' ಕುವೆಂಪು ಅವರ ಮಾತಿನಿಂದ ಕಾದಂಬರಿಯ ಗರ್ಭದಲ್ಲಿ ಒಂದೊ ಹಲವೊ ನಾಟಕಗಳು ಹುದುಗಿಕೊಂಡಿವೆಯೆಂದು ಹೇಳಬಹುದು. ಈ ಮಾತು ಮಹಾಕಾವ್ಯಗಳಿಗೂ ಅನ್ವಯಿಸುತ್ತದೆ. ಅಂದ ಮೇಲೆ ನಾಟಕ ಕಾದಂಬರಿಗಳ ನಡುವೆ ಹೊಕ್ಕುಳುಬಳ್ಳಿ ಸಂಬಂಧವಿದೆಯೆಂದು ಹೇಳಬಹುದು. ಒಂದು ಮತ್ತೊಂದರ ಅವತಾರವೆಂದು ಸಾಧಿಸಬಹುದು. ವೈದೃಶ್ಯ, ಕಲ್ಪನಾಪ್ರತಿಭೆ, ಕಥನ ಸಾಮರ್ಥ್ಯ ಮತ್ತು ಬುದ್ಧಿ ಚಮತ್ಕಾರಗಳನ್ನು ಪಡೆದಿರುವ ಸಾಹಿತಿ, ನಾಟಕವನ್ನು ಕಾದಂಬರಿ ರೂಪಕ್ಕೆ ತಿರುಗಿಸಬಹುದಾಗಿದೆ. ಗಾತ್ರ ಪ್ರಮಾಣಗಳಲ್ಲಿ ಮಿತಿಯಿಲ್ಲದ, ಸಂಭಾಷಣೆಗಳನ್ನು ಗದ್ಯಕಥನಕ್ಕೆ ಪರಿವರ್ತಿಸುವ, ವರ್ಣನೆಗಳಿಗೆ ಸಂದರ್ಭ ಸನ್ನಿವೇಶ ಘಟನೆಗಳ ವಿಸ್ತರಣಕ್ಕೆ ಸಂಪೂರ್ಣಾವಕಾಶವಿರುವ, ಮೂಲಕೃತಿಯ ಅಂತಸ್ಸತ್ತ್ವವನ್ನು ಭೂತಗನ್ನಡಿಯಲ್ಲಿ ದೊಡ್ಡದು ಮಾಡಿ ತೋರಿಸುವ ಶಕ್ತಿ ಇರುವ ರಚನೆಯೇ ಕಾದಂಬರಿ, ಈ ಕಾದಂಬರಿ ಭಾಷಾಂತರವೂ ಹೌದು, ಸೃಜನಾತ್ಮಕ ರಚನೆಯೂ ಹೌದು. ಇದು ಭಾಷಾಂತರ ಸಂತಾನದಲ್ಲಿಯೇ ಕೂಡಿ ಬರುವ ಪ್ರಕಾರಾಂತರವೆಂದರೂ ಸರಿಹೋಗುತ್ತದೆ.

ಕಾದಂಬರಿಕಾರರು ಈ ಕೃತಿಯನ್ನು ರಚಿಸುವಲ್ಲಿ ಮೂಲ ಸಂಸ್ಕೃತ ನಾಟಕವನ್ನು, ಬಸವಪ್ಪಶಾಸ್ತ್ರಿಗಳ ನಾಟಕವನ್ನು ಯಥೇಚ್ಛವಾಗಿ ಬಳಸಿಕೊಂಡಿದ್ದಾರೆ. ಮೂಲದ ಆಶಯಕ್ಕೆ ಭಂಗ ಬರದಂತೆ, ಪಾತ್ರರಚನೆಗೆ ಬಾಧಕವೊದಗದಂತೆ ಕೆಲವು ಕಡೆ ವರ್ಣನೆಗಳನ್ನು ಬೆಳೆಸಿದ್ದಾರೆ. ಮೂಲದ ಸಂದರ್ಭ ಸನ್ನಿವೇಶಗಳನ್ನು ವಿಸ್ತರಿಸಿದ್ದಾರೆ. ವಸ್ತು ಸಂವಿಧಾನದಲ್ಲಾಗಲಿ, ಪಾತ್ರರಚನೆಯಲ್ಲಾಗಲಿ ಹೆಚ್ಚು ವ್ಯತ್ಯಾಸಗಳನ್ನು ಮಾಡಿಕೊಂಡಿಲ್ಲ. ಕನ್ನಡಿಸಿರುವುದಾಗಿ ಕಾದಂಬರಿಕಾರರು ಹೇಳಿರುವ ಮಾತು ಸರಿಯಾಗಿದೆ. ಕೆಲವು ಕಡೆ ಇವರು ಸ್ವಂತಿಕೆಯನ್ನು ಮೆರೆದಿದ್ದಾರೆ.

ಮಾರೀಚಾಶ್ರಮದ ದುಷ್ಯಂತ ಶಕುಂತಲೆಯರ ಚಿತ್ರಣಗಳಲ್ಲಿ ಈ ಅಂಶ ಗೋಚರಿಸುತ್ತದೆ. ಮೂಲ ಸಂಸ್ಕೃತ ನಾಟಕವೊಂದು ಪರಿಪೂರ್ಣ ಕಲಾಪ್ರತಿಮೆಯಾದ್ದರಿಂದ ಅದರ ಒಟ್ಟಂದವನ್ನು ಯಾರೂ ಕೆಡಿಸಲಾರರು. ಕಾದಂಬರಿಯ ಶರೀರ ಅಥವಾ ವಸ್ತುವನ್ನು ಪ್ರವೇಶಿಸುವಾಗಲೂ ಅದು ಮೂಲದ ಆಶಯ ಸತ್ತ್ವ ಘನತೆ ಮತ್ತು ಮಕರಂದಗಳನ್ನು ಕಳೆದುಕೊಂಡಿಲ್ಲವೆಂದು ಹೇಳಬಹುದಾಗಿದೆ. ಈ ಮೊದಲೆ ತಿಳಿಸಿದಂತೆ ಬಸವಪ್ಪಶಾಸ್ತ್ರಿಗಳ ನಾಟಕಕ್ಕೆ ಈ ಕಾದಂಬರಿ ತುಂಬ ಋಣಿಯಾಗಿದೆ. ಅಲ್ಲಿಯ ಭಾಷಾಶೈಲಿಯನ್ನು ಅನಾಮತ್ತಾಗಿ ಎತ್ತಿಕೊಂಡಿದ್ದಾರೆ ಇಲ್ಲವೇ ರೂಪಾಂತರಿಸಿದ್ದಾರೆ. ಅಲ್ಲಿಯ ಗದ್ಯಭಾಗ ಎರಡನ್ನೂ ಪದ್ಯವಾಗಿ ಪರಿಗಣಿಸಿ ೭೬ ಹಾಗೂ ೧೭೪ನೇ ಕ್ರಮಸಂಖ್ಯೆಯನ್ನು ಕೊಟ್ಟಿದ್ದಾರೆ. ಪದ್ಯಭಾಗಗಳನ್ನು ಭಾಷಾಂತರಿಸಿಕೊಂಡು ಪದ್ಯಗಳನ್ನು ಮುಕ್ತಛಂದಸ್ಸಿನ ಅಸಮ ಸಾಲುಗಳಂತೆ, ಭಾವಾನುಗುಣವಾಗಿ ಓದುವ ಕ್ರಮಕ್ಕೆ ತಕ್ಕಂತೆ ಬರೆದಿದ್ದಾರೆ.

"ಅಂದವಾಗಿ ಕೊರಳನ್ನು ಕೊಂಕಿಸಿ
ಅಡಿಗಡಿಗೆ ತಿರಿತಿರಿಗಿ ತೇರಿನತ್ತ ನೋಟವೆಸೆದು
ಮುಂದೆ ಮುಂದೆ ಜಿಗಿಜಿಗಿದು ಹಾಯುತ್ತಿದೆ"

ಕೆಲವು ಕಡೆ ಇಂಥ ರಚನೆಗಳಲ್ಲಿ ಕೃತಕತೆ ತಲೆದೋರುವ ಸಂಭವವುಂಟು. ವಿಶೇಷವಾಗಿ ಹಳಗನ್ನಡದ ಕ್ವಚಿತ್ತಾಗಿ ತಮಿಳಿನ ರೂಪಗಳನ್ನು ಸಹಜವೆನ್ನುವಂತೆ ಬಳಸುತ್ತಾರೆ. ಕೊಳ್ಳೆಯಿಡು, ಅಸೆ(ಪುಟ–೧೦), ತಕ್ಕಳಿಸಿ(೬೧), ಮಣತರುವ(೧೦೪), ಕೇಳ್ವಿ(೧೧೩), ತುಳಿಲು(೧೧೪), ಒದಡು, ನೆರುವಿ(೧೩೬), ಮಯಿಲು(೧೪೧), ಅಲ್ಲರ(೧೪೩), ಏಳಿದಳು(೧೪೫), ಮೊದಲಾದ ವಿನೂತನ ಪ್ರಯೋಗಳಿವೆ. ನೋಟ, ಬೇಟ, ಕೂಟ, ಬೀಳ್ಕೊಡುಗೆ, ತಳ್ಳು, ಹೊದಕುಳಿ, ಒಳ್ಪು ಈ ಅಧ್ಯಾಯ(ನಾಟಕದ ಅಂಕಗಳಿಗೆ ಸಮನಾದವು)ಗಳ ಹೆಸರಿನಲ್ಲಿಯೇ 'ದೇಸಿ' ಪರವಾದ ಚಲ ಎದ್ದು ಕಾಣುತ್ತದೆ.

ದೇ.ಜ.ಗೌ ಅವರು ಈ ಕಾದಂಬರಿಯನ್ನು ಕುರಿತು ಕಾದಂಬರಿಯ ಭಾಷೆ ಕೆಲವು ಕಡೆ ಸಾಮಾನ್ಯ ವಾಚಕರ ಮಟ್ಟವನ್ನು ಮೀರಿದ್ದು, ಪ್ರಯತ್ನಿಸಿದರೆ ಕಷ್ಟವಾಗಬಹುದು. ಇದೊಂದು ವಿನೂತನ ಅಪೇಕ್ಷಣೀಯ ಪ್ರಯೋಗ. ವಿಕಾಸದ ಮೂಲ ಪ್ರಯೋಗವಷ್ಟೇ ಎಂದು ಹೇಳಿದ್ದಾರೆ.

ಸಂಸ್ಕೃತ ಭಾಷೆಯನ್ನು ನೇರವಾಗಿ ಕಲಿಯದ ಕನ್ನಡಿಗರು ಕಾಳಿದಾಸನ ಕಲ್ಪನೆಯನ್ನು ಕವಿತೆಯನ್ನು ಒಂದಳತೆಗೆ ಅನುಭವಿಸಬೇಕೆಂಬುದು ಮೊದಲ ಉದ್ದೇಶ. ಸಂಸ್ಕೃತವನ್ನು ಕಡಿಮೆ ಕಲಿತವರು ಮೂಲಕಾವ್ಯದ ರಸರುಚಿಯನ್ನು ಸವಿಯಲು ಓದತಕ್ಕದ್ದಾಗಿದೆ. ಆದಷ್ಟು ಮಟ್ಟಿಗೆ ಕಾಳಿದಾಸರ ಉದ್ದೇಶವನ್ನು ಶಬ್ದಸಮೂಹವನ್ನು ನೇರವಾಗಿ ಕನ್ನಡಿಸಲಾಗಿದೆ. ಆದರೆ ಕೆಲವೆಡೆಗಳಲ್ಲಿ ಸಂಸ್ಕೃತ ಶಬ್ದಗಳನ್ನು ಕನ್ನಡಿಸುವಾಗ ಉದ್ದೇಶ ತಪ್ಪಾಗುವುದೆಂದೋ ರಸವು ಕುಗ್ಗಿ ಬಿಡುವುದೆಂದೋ ತೋರಿದಾಗ ಉದ್ದೇಶವನ್ನು ರಸವನ್ನು ಕನ್ನಡಿಸಲಾಗಿದೆ. ಕಾಳಿದಾಸರ ಅಭಿಜ್ಞಾನ ಶಾಕುಂತಲಮ್ ಬಹುಪಾಲು ವಾಚಕನಡೆಯಲ್ಲಿದ್ದು ನಡುವೆ ವಿವೇಚನೆಗಳೂ, ಭಾವನೆಗಳೂ, ವಿಚಿತ್ರವರ್ಣನೆಗಳೂ, ಸೊಬಗು ಮಿಗಿಲಾದ ೨೧ ಬಗೆಯ ಛಂದೋರೂಪಗಳಿಗೆ ಸೇರಿದಂತೆ ನಾಂದಿಯಿಂದ ಮಂಗಳದವರೆಗಿನ ೧೯೦+೯+೧=೨೦೦ ಪದ್ಯಗಳನ್ನು ೬೭ ಹಾಗೂ ೧೬೪ನೇ ಪದ್ಯವಾಗಿ ಪರಿಗಣಿಸಿರುವ ಭಾಗವನ್ನು ಒಳಗೊಂಡು ಒಟ್ಟು ೨೦೨ ಪದ್ಯಗಳನ್ನು ಪದ ಪ್ರವಚನದ ನಡೆಯಲ್ಲೇ ಭಾಷಾಂತರಿಸಲಾಗಿದೆ. ಅಂತೆಯೇ ಗುರುತಿಸಲು ಓರೆ ಅಕ್ಷರಗಳಲ್ಲಿ ಅಚ್ಚು ಹಾಕಲಾಗಿದೆ. ಕಾಳಿದಾಸನ ಗಜಗಾತ್ರದ ರಂಗಭೂಮಿಯೇ ಅಂಗೈ ಮೇಲಿನ ರಂಗದ ಕೈಪಿಡಿ ಆ ಕಿರುಗನ್ನಡಿಯೊಳಗಣ ಕೈಪಿಡಿ. ಚಿಕ್ಕದೂ ಚೊಕ್ಕದೂ ಆಗಿ ಮಾರ್ಪೊಳೆವಂತೆಯೂ, ನಾಟಕದ ಕಣ್‌ನಡಗೆಯ ಧಾಟಿಯಲ್ಲಿ ಓದಿನಲ್ಲಿ ಮಾರ್ಪಡುವಂತೆಯೂ ಕಾಣಸಿಗದ ಸಣ್ಣದಾಗಿರುವ ಕೆಲವನ್ನು ಕೈಪಿಡಿಯ ಭೂತಗನ್ನಡಿಯಲ್ಲಿ ದೊಡ್ಡದಾಗಿ ತೋರಿಸುವಂತೆ ಕೈಕಿಸೆಗಳಿಗೆ ಹೊಂದಿಸಿದ ಹೊಚ್ಚ ಹೊಸ ಹೊತ್ತಗೆಯೇ ಈ ಶಾಕುಂತಲ ಕಾದಂಬರಿಯಾಗಿದೆ. ಪ್ರೇಮವಿವಾಹಗಳು ವಿಚ್ಛೇದನದಲ್ಲಿ ಕೊನೆಗೊಳ್ಳದೆ, ಪರಿಣಾಮ ರಮಣೀಯವಾಗಬೇಕಾದರೆ, ದೇಹ ಹಾಗೂ ಮನಸ್ಸುಗಳ ಮಟ್ಟವನ್ನು ಮೀರಿದ, ಆತ್ಮಸ್ವಭಾವ ಶೀಲಗಳ ಪರಿಣಯವಾಗಿ ಹಿರಿಯರ ಅಪ್ಪಣೆ ಪಡೆದು ಹಾರೈಕೆ ಹೊಂದಿ ಬದುಕಿನಲ್ಲಿ ಅಭಿಲಾಷೆ ಒಲಿತು ಲೋಕಧರ್ಮ ಅಂತೆಯೇ ದೈವಕಾರ್ಯಗಳಲ್ಲಿ ನಿರಂತರವಾಗಿ ಪ್ರೇಮ ಸಫಲವಾಗಬೇಕೆಂಬುದೇ ಈ ಕಾದಂಬರಿಯ ಸಂದೇಶವಾಗಿದೆ.

ಶಾಕುಂತಲ ಕಾದಂಬರಿಯನ್ನು ಮೊದಲಿನಿಂದ ಕೊನೆಯ ತನಕ ಓದಿದರೆ ಉತ್ತಮವಾದ ಬರವಣಿಗೆ ಅನಿಸುತ್ತದೆ. ಶಾಕುಂತಲ ಕಾದಂಬರಿಯ ಕಥಾವಸ್ತು ಬೆಳೆದು ಬಂದ ಬಗೆ ಹಾಗೂ ಕಾದಂಬರಿಯ ಬರವಣಿಗೆ ಹೇಗೆ ಎಂಬುದನ್ನು ಓದುಗರ ಗಮನಕ್ಕೆ ತರುವ ಪ್ರಯತ್ನವನ್ನು ಮಾಡಿದ್ದಾರೆ. ಕಾದಂಬರಿಕಾರನು ಮಹಾಕವಿ ಕಾಳಿದಾಸನ ಸಂಸ್ಕೃತ 'ಅಭಿಜ್ಞಾನ ಶಾಕುಂತಲಮ್ ಹಾಗೂ ಅಭಿನವ ಕಾಳಿದಾಸ ಬಸವಪ್ಪ ಶಾಸ್ತ್ರಿಗಳ' ಕರ್ನಾಟಕ ಶಾಕುಂತಲ ನಾಟಕಂ'ಗಳನ್ನು ಬಳಸಿಕೊಂಡಿದ್ದಾರೆ. 'ಅಭಿಜ್ಞಾನ ಶಾಕುಂತಲಮ್' ಎನ್ನುವ ಸಂಸ್ಕೃತನಾಟಕವು, ಉತ್ತರಭಾರತದಲ್ಲಿ ದೇವನಾಗರಿ ಹಾಗೂ ವಂಗಲಿಪಿಯಲ್ಲೂ, ದಕ್ಷಿಣ ಭಾರತದಲ್ಲಿ ಆಂಧ್ರಲಿಪಿ ಹಾಗೂ ಗ್ರಂಥಲಿಪಿಗಳಲ್ಲೂ ಪ್ರಚಲಿತವಾಗಿತ್ತು. ಅದರ ಪಾತ್ರಗಳ ಸಂಭಾಷಣೆಗಳು ಸಂಸ್ಕೃತ ಹಾಗೂ ಪ್ರಾಕೃತವೆಂಬ ಇಬ್ಬಗೆಯ ಭಾಷೆಗಳಲ್ಲಿದ್ದು, ಆ ಎರಡೂ ಭಾಷೆಗಳನ್ನು ಬಲ್ಲವರಿಗೆ ತನ್ನ ಚೆಲುವನ್ನು ತೋರಿ, ರಸರುಚಿಯನ್ನುಣಿಸಿ, 'ಕಾವ್ಯೇಷು ನಾಟಕಂ ರಮ್ಯಂ ತತ್ರರಮ್ಯಾ ಶಾಕುಂತಲಾ' ಅಂದರೆ ಕಾವ್ಯಗಳಲ್ಲಿ ನಾಟಕವು ಚೆಲುವಾದುದು, ಆ ನಾಟಕಗಳಲ್ಲಿ ಶಾಕುಂತಲವು ಮಿಗೆ ಚೆಲುವಾದುದು ಎಂದು ಭರತಖಂಡದ ಪಂಡಿತರಿಂದ ಹೊಗಳಿಸಿಕೊಂಡ ಆ ಶಾಕುಂತಲ ನಾಟಕದ ಕರ್ತೃ ಮಹಾಕವಿ ಕಾಳಿದಾಸನ ಕೀರ್ತಿ ಈ ನಾಡಿನ ಉದ್ದಗಲಕ್ಕೆ ಮಾತ್ರ ಸೀಮಿತವಾಗಿತ್ತು. ಆಮೇಲೆ ಪ್ರಾಕೃತ ಸಂಭಾಷಣೆಯ ಭಾಗಗಳು ಸಂಸ್ಕೃತಕ್ಕೆ ಪರಿವರ್ತನೆಗೊಂಡು ಸಂಸ್ಕೃತವೊಂದರಲ್ಲೇ ಅದರ ರಸಾಸ್ವಾದನೆಗೆ ಅವಕಾಶವಾಯಿತು. ೧೭೮೯ರ ಕಾಲಕ್ಕೆ ಕೊಲ್ಕತ್ತದ ಉಚ್ಚ ನ್ಯಾಯಾಲಯಕ್ಕೆ ಉಪನ್ಯಾಯಾಧಿಪತಿಯಾಗಿ ನೇಮಕಗೊಂಡಿದ್ದ ಸರ್ ವಿಲಿಯಮ್ ಜೋನ್ಸ್ ಸಂಸ್ಕೃತ ಭಾಷೆಯಲ್ಲಿ ಆಸಕ್ತರಾಗಿ ಚೆನ್ನಾಗಿ ಅಭ್ಯಾಸ ಮಾಡಿದವರು. ಅವರಿಂದ ಕಾಳಿದಾಸರ ಶಾಕುಂತಲ ಮೊದಮೊದಲು ಆಂಗ್ಲಭಾಷೆಗೆ ಪರಿವರ್ತಿತವಾಗಿ ಪಾಶ್ಚಾತ್ಯ ಪ್ರಪಂಚಕ್ಕೆ ಪರಿಚಿತವಾಯಿತು. ೧೭೯೧ರ ವೇಳೆಗೆ ಚೆಜ್ಜಿ(ಚೆಜ್ಸಿ) ಎಂಬುವರಿಂದ ಫ್ರೆಂಚ್ ಭಾಷೆಗೂ ಬೆನ್ನೆ ಪಾರೆಸ್ಟರ್(ಫ್ಹಾರ್ಸ್ಟರ್) ಎಂಬುವುದರಿಂದ ಜರ್ಮನ್ ಭಾಷೆಗೂ ಪರಿವರ್ತನಗೊಂಡಿತು. ಇದುವರೆಗೆ ಕನ್ನಡದಲ್ಲಿ ಗೇಟೆ, ಗಯಟೆ, ಗೀಟೆ, ಗಯ್‌ಠೆ ಎಂದೆಲ್ಲಾ ಗುರುತಿಸಿಕೊಂಡಿರುವ ಗೋಥೆ ೧೭೪೯–೧೮೩೨, ಶಾಕುಂತಲವು ಜರ್ಮನ್ ಭಾಷೆಗೆ ಪರಿವರ್ತನೆಗೊಂಡ ಕಾಲಕ್ಕೆ ಹೆಸರಾಂತ ಕವಿ, ವಿಜ್ಞಾನಿ, ರಾಜನೀತಿಜ್ಞ ಹಾಗೂ ದಾರ್ಶನಿಕ. ಅವರು ಹಲವು ಗೀತಕಾವ್ಯ ನಾಟಕ ಹಾಗೂ ಕಾದಂಬರಿಗಳನ್ನು ಪ್ರಕಟಿಸಿದವರು. ಅವುಗಳಲ್ಲಿ ಫೌಸ್ಟ್ ಎಂಬುದು ಶಾಕುಂತಲದಂತಹ ನಾಟಕೀಯ ಕಾವ್ಯವಾಗಿದ್ದು ಪ್ರಸಿದ್ಧವಾದುದು. ಪರಿವರ್ತಿತ ಜರ್ಮನ್ ಭಾಷೆಯ ಶಾಕುಂತಲವನ್ನು ಪರಾಮರ್ಶಿಸಿದ ಗೋಥೆ, ಕಾಳಿದಾಸರ ಕವಿತಾಲಕ್ಷಣಕ್ಕೂ ರಮಣೀಯ ಆಲೋಚನೆಗಳಿಗೂ ಮಾರುಹೋಗಿ ಸಂಭ್ರಮಿಸಿ, ಬಲು ಬಹುಮಾನಿಸಿ ಶಾಕುಂತಲದ ಬಗೆಗೆ ತಾವಾಗಿ ಹೊಗಳಿ ಹಾಡಿದುದರ ಪರಿ ಹೀಗಿದೆ.

"ನೀನಲ್ಲವೇ ವರ್ಷರಂಭದ
ಎಳತನದ ಸೌಂದರ್ಯ!
ನೀನಲ್ಲವೇ ವರ್ಷಾಂತ್ಯದ
ಇಳಿವಯಸ್ಸಿನ ಫಲಸ್ವಾದತೆ!

ನಿನ್ನಿಂದಲ್ಲವೇ ಆತ್ಮವು
ಕಾಂತಿ ಉತ್ಸಾಹ ಉತ್ಕರ್ಷಗಳಿಂದ
ಉಣವುಗೊಂಡುದು?
ನೀನಲ್ಲವೇ ಈ ಮರ್ತ್ಯ ಆ ಸ್ವರ್ಗ ಎಲ್ಲ ತಾನಾದ ಹೆಸರು?
ನಿನಗೆ ನಾ ಹೆಸರಿಡುವೆನು
ಓ 'ಶಾಕುಂತಲ' ಎಂದು
ಅನಿತರಲೆ ಎಲ್ಲವನು
ಹೇಳಿದಂತಾಯಿತು ಆಗಿಂದ ಆಗಲೆ!!"[೨೦]

ಗೋಥೆಯವರ ಕಾಲದಿಂದೀಚೆಗೆ ಶಾಕುಂತಲವು ಹಲವಾರು ಪಾಶ್ಚಾತ್ಯ ಭಾಷೆಗಳಿಗೆ ಪರಿವರ್ತನೆಗೊಂಡು ಪ್ರಪಂಚದ ಅತ್ಯುತ್ತಮ ಕೃತಿಶತಕಗಳಲ್ಲಿ ಒಂದೆಂದು ಪರಿಗಣಿಸಲಾಗಿದೆ. ಶತ-ನೂರು-ಕ-ಒಂದು=ನೂರೊಂದರಲ್ಲಿ ಒಂದೆಂದು ಹೇಳುವುದಕ್ಕಿಂತ ನೂರರಲ್ಲಿ ಒಂದನೆಯದು ಎಂದು ಹೇಳಿದರೆ ಮಿಗಿಲ ಮಾತಾಗದು. ಅಂತೆಯೇ ಒಂದೊಂದು ಭಾಷೆಯಲ್ಲೂ ಒಂದರಿಂದ ಹಿಡಿದು ಹತ್ತಿಪ್ಪತ್ತು ಪರಿವರ್ತನೆಗಳು ಉಂಟಾಗಿ ಕಾವ್ಯದ ಆನಂದವನ್ನು ಉಕ್ಕಿಸಿ ರಸದ ಹೊಳೆಯನ್ನೇ ಹರಿಸಿವೆ. ಅಭಿಜ್ಞಾನ ಶಾಕುಂತಲ ನಾಟಕದ ಕಥಾವಸ್ತು ಇತಿಹಾಸ ಕಾವ್ಯ ಮಹಾಭಾರತದಿಂದ ಆಯ್ದದು. ಇಪ್ಪತ್ನಾಲ್ಕು ಸಾವಿರ ಶ್ಲೋಕಗಳಾಗಿ ಹುಟ್ಟಿ ನಲವತ್ತು ಸಾವಿರಕ್ಕೆ ಬೆಳೆದು ಎಂಬತ್ತು ಸಾವಿರಕ್ಕೆ ಏರಿ ನೂರಿಪ್ಪತ್ತು ಸಾವಿರದ ಮಹತ್ತಾದ ಎತ್ತರಕ್ಕೆ ನಿಮಿರಿನಿಂತ ಮಹಾಭಾರತದ ಕಾಲ ಇಂದಿನ ಎರಡು ಸಾವಿರದ ಇನ್ನೂರು ವರ್ಷಗಳ ಹಿಂದಿನ ಕಾಲ. ಅದಕ್ಕೂ ಹಿಂದಿನ ಕಾಲ ಪಾಂಡವ ಕೌರವರ ಕಾಲ. ಆ ಪಾಂಡವ ಕೌರವರ ಬಹುದೂರದ ಪೂರ್ವಿಕ-ಭರತ. ವೈದಿಕರ ನಂಬಿಕೆಯಂತೆ ಆ ಭರತನ ತಾಯಿಯೇ ಶಕುಂತಲೆ. ಮಹಾಭಾರತದ ಒಳಗಣ ಶಕುಂತಲೆಯ ಒಂದು ಪುಟ್ಟ ಪೌರಾಣಿಕ ಉಪಕಥೆಯೇ 'ಶಾಕುಂತಲೋಪಾಖ್ಯಾನ'. ಅದನ್ನು ಸಣ್ಣದಾಗಿ ಹೇಳುವುದಾದರೆ ಅದರಲ್ಲಿ ದೊರೆ ದುಷ್ಯಂತನು ಬೇಟೆಯ ಸಾಹಸದಲ್ಲಿ ಸೇನೆಯನ್ನು ಹೊರವಲಯದಲ್ಲಿ ಬಿಟ್ಟು ಮಂತ್ರಿಪುರೋಹಿತರೊಡನೆ ಮಾಲಿನೀ ತೀರದ ಕಣ್ವರ ಆಶ್ರಮವನ್ನು ತಲುಪಿ ಯಾರೂ ಇಲ್ಲದಿರುವುದನ್ನು ಕಂಡು ಕಃ ಇಹ? ಅಂದರೆ ಯಾರಿಲ್ಲಿ? ಎಂದು ಕಾಡು ಗಡುಚಿಕ್ಕುವಂತೆ ಕೂಗಿದನು. ಆ ಕೂಗನ್ನು ಕೇಳಿ ಶ್ರೀರೂಪಿಣಿಯೂ ತಾಪಸವೇಷಧಾರಿಣಿಯೂ ಆದ ಹೆಣ್ಣೊಬ್ಬಳು ಹೊರಬಂದಳು. ನೋಡುತ್ತಿದ್ದಂತೆ ಆತ ದೊರೆ ದುಷ್ಯಂತನೆಂದು ತಿಳಿದು, ತಂದೆ ಕಣ್ವರು ಹಣ್ಣು ತರಲು ಆಚೆ ಹೋಗಿದ್ದಾರೆ. ದಯೆಮಾಡಿ ಪಾದ್ಯಾದಿಗಳನ್ನು ಸ್ವೀಕರಿಸಿ ಆಸೀನರಾಗಿ ಅವರ ಬರವನ್ನು ಇದಿರುನೋಡಿದರೆ, ಹಿಂದಿರುಗುತ್ತಾರೆಂದು ಕುಶಲವನ್ನು ಕೇಳಿದಳು. ಆಕೆಯ ಸೊಬಗಿಗೆ ಸೋತ ದೊರೆ ಅವಳನ್ನು ಕುರಿತು ನೀನಾರು? ಎಂದೆಲ್ಲಾ ಕೇಳಿದನು.

ಅವಳು ತನ್ನ ಹುಟ್ಟಿನ ಬಗೆಗೆ ಮುಚ್ಚುಮರೆಯಿಲ್ಲದೆ ಹೇಳಿದುದನ್ನು ಕೇಳಿ, ಆಕೆ ಕ್ಷತ್ರಿಯಳೆಂದು ತಿಳಿದು ಅಭಿಲಾಷೆಗೊಂಡು ಆತುರದಿಂದ ಗಾಂಧರ್ವವಿವಾಹದ ಆಲೋಚನೆಯನ್ನು ಮುಂದಿಟ್ಟನು.

ವಸ್ತ್ರಾಭರಣಗಳನ್ನು ಕೊಡುವುದಲ್ಲದೆ ರಾಜ್ಯವು ಅವಳ ವಶವಾಗುವುದೆಂದೂ ಹೇಳಿದನು. ತನ್ನ ಹೊಟ್ಟೆಯಲ್ಲಿ ಹುಟ್ಟುವ ಮಗನಿಗೆ ಯುವರಾಜ ಪಟ್ಟಾಭಿಷೇಕವನ್ನು ಮಾಡುವುದಾದರೆ ಮದುವೆಯಾಗಬಹುದೆಂಬ ಅವಳ ಕರಾರಿಗೆ ಒಪ್ಪಿ ತನ್ನೊಡನಿದ್ದ ಪುರೋಹಿತನ ಪೌರೋಹಿತ್ಯದಲ್ಲಿ ಆಕೆಯನ್ನು ಕೂಡಿದನು. ಕಣ್ವಮುನಿಗಳ ಭಯದಿಂದ, ಅವಳನ್ನು ಬಿಟ್ಟು ಆಶ್ರಮದ ಹೊರವಲಯದಲ್ಲಿ ಪರಿಜನರು ಇದ್ದರೂ ರಾಜಧಾನಿಯಿಂದ ಚತುರಂಗಬಲವನ್ನು ಕಳುಹಿಸಿ ಆಕೆಯನ್ನು ಕರೆಯಿಸಿಕೊಳ್ಳುವುದಾಗಿ ಹೇಳಿ ಹೋದನು. ನಾಚಿಕೆಯಿಂದ ನಿಂತಿದ್ದ ಶಕುಂತಲೆಯ ನೆಲೆಯನ್ನು ಕಣ್ವಮುನಿಗಳು ದಿವ್ಯಜ್ಞಾನದಿಂದ ಅರಿತು ಪತಿವ್ರತಾಧರ್ಮವನ್ನು ಪಾಲಿಸೆಂದು ಹೇಳಿ, ಪ್ರೀತಿಯಿಂದ ಅವಳ ಮೈಮುಟ್ಟಿ ಪರಿಶುದ್ಧಗೈದರು. ಆ ವೇಳೆಗೆ ದುಷ್ಯಂತನ ವಂಶ ಆಕೆಯ ಗರ್ಭದಲ್ಲಿ ತಂಗಿದ್ದು, ಕಾಲ ಬಲಿತ ಮೇಲೆ ಅವಳು ಗಂಡುಮಗುವೊಂದನ್ನು ಹೆತ್ತಳು. 

ಅತ್ತ ರಾಜಧಾನಿಗೆ ಹಿಂದಿರುಗಿದ ದುಷ್ಯಂತನು ಶಕುಂತಲೆಯ ನೆನಪಿದ್ದರೂ ಜನಾಪವಾದದ ಭೀತಿಯಿಂದ ಆಕೆಯನ್ನು ತನ್ನಲ್ಲಿಗೆ ಕರೆಯಿಸಿಕೊಳ್ಳಲಿಲ್ಲ. ಇತ್ತ ಕಣ್ವರಿಂದ ಜಾತಕರ್ಮಗಳನ್ನು ಹೊಂದಿದ ಬಾಲಕನು ಆರು ವರುಷದವನಾಗಿ ತನ್ನ ತೋಳಬಲದಿಂದ ಹುಲಿಸಿಂಹಗಳನ್ನು ಕಟ್ಟಿ ಆಡಿಸುವುದರಿಂದ 'ಸರ್ವದಮನ' ಎಂದು ಹೆಸರಾದನು. ಕಾಲಕಳೆದಂತೆ ಶಕುಂತಲೆಗೆ ಚಿಂತೆ ಅತಿ ಹೆಚ್ಚಿದುದನ್ನು ಕಂಡ ಕಣ್ವರು ಶಕುಂತಲೆಯನ್ನು, ಸರ್ವದಮನನನ್ನೂ ತನ್ನವರೊಡನೆ ಪ್ರತಿಷ್ಠಾನಪುರದ ವರೆಗೆ ಬಿಟ್ಟು ಬರಲು ಹೇಳಿದರು. ಕಾಡುಬೆಟ್ಟಗಳನ್ನು ದಾಟಿ ಪ್ರತಿಷ್ಠಾನಪುರವನ್ನು ತಲುಪುತ್ತಿದ್ದಂತೆ ಒಡನೆ ಬಂದಿದ್ದ ಋಷಿಗಳು ತಮಗೆ ಪುರಪ್ರವೇಶವು ನಿಷಿದ್ಧವೆಂದು ಹಿಂದಿರುಗಿದರು. ಧೃತಿಗೆಡದ ಶಕುಂತಲೆ ಮಗನೊಡನೆ ಪಟ್ಟಣವನ್ನು ಪ್ರವೇಶಿಸಿ, ಅನುಮತಿಯಿಂದ ಅರಮನೆಯ ರಾಜಸಭೆಯನ್ನು ಸಂದರ್ಶಿಸಿ, ದೊರೆಗೆ ಗೌರವವನ್ನು ಸಲ್ಲಿಸಿ, ಒಂಬತ್ತು ವರ್ಷಗಳ ಹಿಂದೆ ತಮ್ಮಿಬ್ಬರಲ್ಲಿ ಆಗಿದ್ದ ಒಪ್ಪಂದದಂತೆ ಮಗನಿಗೆ ಯುವರಾಜ್ಯಾಭಿಷೇಕ ಮಾಡಲು ತನಗೆ ಪ್ರಸನ್ನವಾಗಬೇಕೆಂದು ಕೇಳಿಕೊಂಡಳು. ಆ ಸಂಗತಿ ದುಷ್ಯಂತನಿಗೆ ನೆನಪಿಗೆ ಬಂದರೂ ಮಡದಿ ಮಗನನ್ನಾಗಿ ಪಡೆಯದೆ ತನಗೆ ನೆನಪಿಲ್ಲವೆಂದು ನುಡಿದನು. ಶಕುಂತಲೆಗೆ ನಾಚಿಕೆಯೊಡನೆ ಕೋಪತಾಪಗಳು ಉಕ್ಕಿ, ಮಾತಿಗೆ ಮಾತು ಬೆಳೆದು, ಇಬ್ಬರೂ ಒಬ್ಬರಿಗೊಬ್ಬರು ಹೀಯಾಳಿಸಿದರು. ಕೊನೆಗೆ ಸತ್ಯವನ್ನು ಒತ್ತರಿಸುವುದು ಸರಿಯಲ್ಲವೆಂದು ಹೇಳಿದರೂ ಅಂಗೀಕರಿಸದ ದುಷ್ಯಂತನ ಆಸ್ಥಾನವನ್ನು ಬಿಟ್ಟು ಹೊರಟಳು. "ಶಕುಂತಲೆ ನಿನ್ನ ಮಡದಿ ಹೌದು. ಈ ಬಾಲಕ ನಿನ್ನ ಪುತ್ರನೇ ಹೌದು, ನೀನು ಭರಿಸುವುದರಿಂದ ಇವನು ಭರತನೆಂದು ಪ್ರಸಿದ್ಧನಾಗಿ ಭರತಖಂಡದ ಸಾರ್ವಭೌಮನಾಗುವನು.

ಅವರನ್ನು ತಳ್ಳುವುದು ತಕ್ಕದಲ್ಲ ಎಂಬ ಅಶರೀರವಾಣಿ ಕೇಳಿ ಬಂದುದರಿಂದ ಅವರನ್ನು ಸ್ವೀಕರಿಸಿ, ಲೋಕಾಪವಾದ ಭಯದಿಂದ ಹಾಗೆ ಮಾಡಿದೆನೆಂದು ಹೇಳಿದನು. ಭರತನಿಗೆ ಯುವರಾಜ್ಯಾಭಿಷೇಕ ಮಾಡಿ ಬಹುಕಾಲ ಸುಖವಾಗಿ ಬದುಕಿದನು. ಉಚಿತ ಕಾಲದಲ್ಲಿ ಚಕ್ರವರ್ತಿಯಾದ ಭರತ ಶತಾಶ್ವಮೇಧಯಾಗಗಳನ್ನು ಮಾಡಿ, ಈ ನಾಡನ್ನು ಬಹುಕಾಲ ಆಳಿದನು.

**ಮಹಾಭಾರತದ ಕಾವ್ಯ:** ತುಂಡರಿಸಿದ ತೊಳೆಹಾಕದ ಬೆಲೆಯುಳ್ಳ ವಜ್ರದ ಬೆಟ್ಟವಾದರೆ ಅದರೊಳಗಣ 'ಶಕುಂತಲೋಪಾಖ್ಯಾನ'ದಲ್ಲಿ ಮಾನಸಿಕ ಸಂಘರ್ಷಗಳಾಗಲೀ ಇಲ್ಲ. ಅದರಲ್ಲಿನ ನಾಲ್ಕು ಪಾತ್ರಗಳಾದರೋ ನೀರಸ ನಿಸ್ಸತ್ತ್ವದವು. ಅವುಗಳಲ್ಲಿ ದುಷ್ಯಂತನೊಬ್ಬ ಪ್ರೇಮಸಮಯ ಸಾಧಕನೂ ವಿವಾಹ ಪ್ರಸ್ತಾವದಲ್ಲಿ ಅತಿ ಜಾತ್ಸುಕ್ಯನೂ, ಅಂತರಂಗದಲ್ಲಿ ಮನಸ್ಸೃಷ್ಟಿಶೂನ್ಯನೂ ಆದರೆ ಶಕುಂತಲೆಯೊಬ್ಬಳು ಸ್ತ್ರೀತ್ವದ ದಯಾಶೀಲ ಶೂನ್ಯವಾದ ನಿರ್ವ್ಯಾಜ ವ್ಯಾವಹಾರಿಕ ಹೆಣ್ಣು. ಕಣ್ವರೊಬ್ಬರು ವಿರಾಗಿಗಳು. ಅಲ್ಲಿ ವಿವಾಹವೊಂದು ವ್ಯಾಪಾರ. ಕಥೆಯೊಂದು ಅಸಂಗತ ಕಗ್ಗಂಟಿನ ಕಗ್ಗ. ವಾಸ್ತವಿಕ ಸಂಭಾವ್ಯತೆಯು ಅನುಪಯೋಗಿತವಾಗಿ ಉಳಿದು ಕಥೆಗೆ ಯಾವುದೇ ಉದ್ದೇಶವೂ ಇದ್ದಂತಿಲ್ಲ. ಸಂಕ್ಷಿಪ್ತವಾಗಿ ಹೇಳುವುದಾದರೆ, ಆ ಪೌರಾಣಿಕ ಕಾವ್ಯ ಒಂದು ಕಥೆಯೇ ಅಲ್ಲ. ಅದೊಂದು ಘಟನಾವಳಿಗಳ ಕಾಂತಿಹೀನ ವರ್ಣನೆ. ಈ ನೀರಸ ಪೌರಣಿಕ ಕಥೆಯೊಳಗಣ ದುಷ್ಯಂತ ಶಕುಂತಲೆಯರ ಪ್ರೇಮವಿವಾಹದ ವಿಷಯವಷ್ಟೇ ಕವಿ ಕಾಳಿದಾಸರ ಹೆಸರಾಂತ ನಾಟಕಕ್ಕೆ ಕಥಾಬೀಜ. ಅಲ್ಲಿ ಬರುವ ನಾಲ್ಕು ಪಾತ್ರಗಳು ಹೆಸರಿಗೆ ಮಾತ್ರ. ಆ ನಾಲ್ಕು ಪಾತ್ರಗಳಿಗೂ ಕಾಳಿದಾಸರ ನಾಟಕೀಯ ಕಾವ್ಯದಲ್ಲಿನ ಅದೇ ಹೆಸರಿನ ನಾಲ್ಕು ಪಾತ್ರಗಳಿಗೂ ಆಡು ಆನೆಗಳನಿತು ಅಂತರ. ಆ ನಾಲ್ಕು ಪಾತ್ರಗಳಿಂದ ತೃಪ್ತರಾಗದ ಕವಿಕಾಳಿದಾಸರ ವಿಶಾಲ ಕಲ್ಪನಾಲೋಕದಲ್ಲಿ ಧರ್ಮಾರಣ್ಯದ ಮಾಲಿನೀತೀರದ ಪ್ರಕೃತಿಯ ಮಡಿಲಿನಲ್ಲಿ ವಿದ್ಯಾರ್ಜನೆಯ ಆಶ್ರಮ. ಅಲ್ಲಿನ ಕುಲಪತಿಗಳು ಕರುಣಾಮೂರ್ತಿ ಕಣ್ವರು. ಆ ಆಶ್ರಮದ ಅತ್ತ ತಳ್ಳಿ ಓಡುತ್ತಿರುವ ಜಿಂಕೆ, ಅದನ್ನು ಬೆನ್ನಟ್ಟಿರುವ ಹಸ್ತಿನಾಪುರದ ಅಲ್ಲಿನ ಪ್ರತಿಷ್ಠಾನಪುರದ ದೊರೆ ರಥಾರೂಢ ಧೀರೋದಾತ್ತ ದುಷ್ಯಂತ, ಸಾರಥಿ ಸೂತ ದುಷ್ಯಂತನ ಹೃದಯಂಗಮಸುಖ ಮಾತವ್ಯ, ಮಾಢವ್ಯ–ಆಶ್ರಮದಲ್ಲಿನ–ತಪಸ್ವಿಗಳು ಮೂವರು ವೈವಾನಸರು. ಆಶ್ರಮದಲ್ಲಿ ಗಿಡಮರ, ಬಳ್ಳಿಗಳು. ಜೊತೆಗೆ ಕಣ್ವರು ಸಾಕಿದ ಬಳುಕುವ ಶಕುಂತಲೆ. ಅವಳ ತಂದೆ ವಿಶ್ವಾಮಿತ್ರ. ಅವಳನ್ನು ತೊರೆದ ತಾಯಿ–ಅಪ್ಸರೆ ಮೆನಕೆ. ಆ ಶಕುಂತಲೆಗೆ ಇಬ್ಬರು ಗೆಳತಿಯರು. ಪ್ರಿಯಂವದೆ, ಅನಸೂಯೆ, ಆಶ್ರಮವಾಸಿಗಳು–ಅವರಲ್ಲಿ ಜ್ಞಾನವೃದ್ಧ ಆರ್ಯಗೌತಮಿ ಆಶ್ರಮದಲ್ಲಿನ ಹರೀತ ನಾರದ ಗೌತಮರಂತಹ ಪಾತ್ರರು. ಅವರಲ್ಲಿ ಮುಖ್ಯರು ಕೋಪಿ ಶಾಙ್ಗ್ರರವ, ಶಾಂತ ಶಾರದ್ವತ–ಆಶ್ರಮದ ಹೊರವಲಯದಲ್ಲಿ ಬೀಡುಬಿಟ್ಟರು.

ನಿರ್ಜೀವ ಉಂಗುರವು–ಬಹುತೇಕ ಜೈವಿಕ ಪಾತ್ರದಂತೆ ತೋರುತ್ತದೆ. ಕಾಳಿದಾಸನು ಸೃಷ್ಟಿಸಿದ ಪಾತ್ರಗಳು ಕಾಡಿನಿಂದ, ಆಶ್ರಮದಿಂದ, ಪ್ರಕೃತಿಯಿಂದ, ಪಟ್ಟಣದಿಂದ, ಪರಲೋಕದಿಂದ ತೋರುವ ಈ ಪ್ರಾಪಂಚಿಕ ಪಾತ್ರಗಳ ಸಮೂಹ ಮಾತ್ರಗಳಲ್ಲಿ ಒಂದೊಂದೊ ತಾನೇ ತಾನಾಗಿ ತೋರುವ ಚೈತನ್ಯವುಳ್ಳವನ್ನು ಪ್ರತಿನಿಧಿಸುವ ವೈವಿಧ್ಯಮಯ ಪಾತ್ರಗಳಿವೆ. ಮಹಾಭಾರತ ಕಾವ್ಯದಿಂದ ಏಳುನೂರು ವರ್ಷಗಳಿಂದೀಚೆಗೂ ಈ ಕಾಲಕ್ಕೆ ೧೫೦೦ ವರ್ಷಗಳ ಹಿಂದಣ ಕಾಲಕ್ಕೂ ಇದ್ದವರು ಕಾಳಿದಾಸರು. ಈ ಕಾಲದ ಅಂತರವೇ ಕಪಿಕಾವ್ಯಗಳ ಅಂತರ, ತಮ್ಮ ಕಾಲದ ಎಲ್ಲ ಕಲಾವಿಲಾಸವನ್ನೂ, ಕೋಮಲ ಅಂತರಾಳದ ವಿಲಾಸವನ್ನೂ ತಿಳಿದವರಾಗಿದ್ದರು. ಕಾಡಿನಲ್ಲಿಯ ನಾರುಡೆಯೊಡನಿರುವ ಶಕುಂತಲೆಯನ್ನು ಬಣ್ಣಿಸುವ ಕಾಳಿದಾಸರ ದೃಷ್ಟಿಯಲ್ಲಿ ಬೇರಾಗಿ ತೋರುವ ಸ್ತ್ರೀರತ್ನ. ಅದೂ

ಎಂತಹ ರತ್ನ? 'ಅನಾವಿದ್ಧಂ ರತ್ನಮ್ ಅಂದರೆ ಎಜ್ಜವಿಕ್ಕದ ಒಳ್ಮಣಿ' ಎನ್ನುವರು. ಹಲವು ಒಳ್ಮಣಿಗಳನ್ನು ಕಡೆದು ಸಾಣೆ ಹಿಡಿದು, ಎಜ್ಜವಿಕ್ಕಿ ರಾಗರಚನೆಗಳಿಗೆ ತಕ್ಕಂತೆ ಆರಾಯ್ದು. ಎಜ್ಜವಿಕ್ಕಿದ ಆ ಮಣಿಗಳನ್ನು ಹೊಸ ನೂಲೆಳೆಗಳ ಸರಗಳಲ್ಲಿ ಕೂಡಿಸಿಕೊಂಡು ಕಟ್ಟಿ, ಒಂದೊಂದು ವಿಂಗಡಿಸಲಾಗದ ಒಂದಕೊಂದು ಕೊಂಡಿಹಾಕಿಕೊಂಡು ಅಣಿಗೊಳಿಸಿ, ಕಲಾದೇವಿಗೆ ಕೂಡಿದ ಹಲವು ರಸರಾಗದ ಒಡವೆ. ಅಭಿಜ್ಞಾನ ಶಾಕುಂತಲ ನಾಟಕದ ಮೊದಲಲ್ಲಿ ದುಷ್ಯಂತ ಶಕುಂತಲೆಯರ ಪ್ರೇಮ ಮೊಳೆತು ಮದುವೆಯಾದ ಮೇಲೆ ಬೆಳೆಯಿತು. ಅವರು ನಲಿವು ನೋವುಗಳಿಗೆ ಬಲಿಯಾದವರು. ಹರೆಯದ ಅನುರಾಗ ಅಗಲುವಿಕೆಯ ಸುಳಿಗೆ ಸಿಕ್ಕಿ ಬಳಲಿದ ಮನ, ಕುದಿಕುದಿದು ಹೋದ ಕುಳಿಗಳ ಕುಲುಮೆಯಲ್ಲಿ ಕರಗಿ ಆರು ಕೊರತೆಗಳನ್ನು ನೀಗಿದ ನಾಟಕದ ಕೊನೆಯಲ್ಲಿಯೇ ಸಂಪಾದಿಸಲು ಸಾಧ್ಯವಿಲ್ಲವೆಂದು ಹೇಳಬಹುದು.

ಕನ್ನಡನಾಡಿನಲ್ಲಿ ಸಂಸ್ಕೃತ ಸಾಹಿತ್ಯ ಹಾಗೂ ಕನ್ನಡ ನುಡಿಯನ್ನು ಬಲ್ಲ ಕವಿಗಳು ಅನೇಕರಿದ್ದಾರೆ. ಆದರೆ ಕಾಳಿದಾಸನಿಗೆ ಸಮವೆನಿಸುವಂತಿರುವವರು ಯಾರೂ ಇಲ್ಲವೆನ್ನಬಹುದು. ಕಾಳಿದಾಸರ ಗ್ರಂಥಗಳನ್ನು ಭಾಷಾಂತರಿಸುವುದು ಸುಲಭವಲ್ಲವೆಂದು ಸಿ.ನಟರಾಜ ಅವರು ತಮ್ಮ ಮುನ್ನುಡಿಯಲ್ಲಿ ಹೇಳಿಕೊಂಡಿದ್ದಾರೆ.

ಹತ್ತೊಂಬತ್ತನೆಯ ಶತಮಾನದ ಕಾಲಕ್ಕೆ ಕನ್ನಡ ನಾಡಿನಲ್ಲಿ ಸಂಸ್ಕೃತ ಸಾಹಿತ್ಯ, ಕನ್ನಡ ಸಂಗೀತ ಹಾಗೂ ಗಮಕಗಳಲ್ಲಿ ಪಾಂಡಿತ್ಯ ಪಡೆದವರೂ ಮೈಸೂರು ಅರಸರ ಆಸ್ಥಾನಕವಿಗಳೂ ಆಗಿದ್ದ ಬಸವಪ್ಪಶಾಸ್ತ್ರಿಗಳು ರಚಿಸಿದ ಹನ್ನೆರಡು ಗ್ರಂಥಗಳಲ್ಲಿ 'ಕರ್ನಾಟಕದ ಶಾಕುಂತಲ ನಾಟಕಂ' ಅವರಿಗೆ 'ಅಭಿನವ ಕಾಳಿದಾಸ' ಎಂಬ ಬಿರುದು ಪಡೆದ ಕೃತಿಯಾಗಿದೆ. ಬಿರುದು ಭಾಷಾಂತರದ ಮಟ್ಟಿಗೆ ಮಾತ್ರವಲ್ಲ, ಸಂಸ್ಕೃತ ಮೂಲನಾಟಕಕ್ಕೆ ತಕ್ಕಂತೆ ಕರ್ಣಾಟಕ ಭಾಷೆಗೆ ತಂದು ಕಾಳಿದಾಸರ ಒಳಗಿನ ಎಣಿಕೆ, ಹುರುಳಿನ ಸಿರಿವಂತಿಕೆ, ಹರಿತಗಳನ್ನು ಮುಟ್ಟಿಸುವುದರ ಮೂಲಕ ಅವರು 'ಅಭಿನವ ಕಾಳಿದಾಸ' ಅಂದರೆ 'ಹೊಸಕಾಳಿದಾಸ' ಎಂಬ ಹೆಸರಿಗೆ ತಕ್ಕವರಾಗಿದ್ದಾರೆ. ಭಾಷಾಂತರದಿಂದ ಶಾಕುಂತಲ ನಾಟಕವು ಪಂಡಿತರಿಗೆ ಕಾವ್ಯವಾಗಿ ರಸಾನುಭೂತಿಗೆ ಭೂಮಿಕೆಯಾದರೆ, ಸಂಸ್ಕೃತವು ಕಡಿಮೆಯಾಗಿ ಕನ್ನಡವು ಮಿಗಿಲಾಗಿ ಬಳಕೆಯಾಗುವ ಕನ್ನಡ ನುಡಿಯಲ್ಲಿನ ರಾಗತಾಳಗಳ ರಚನೆಯ ರೂಪಾಂತರವಾಗಿ ಪದವಿಟ್ಟು ನಿಜವಾಗಿ ರಂಗಭೂಮಿಗೆ ತಕ್ಕಂತೆ ಪಂಡಿತಪಾಮರರ ನೋಟಕ್ಕೆ ನಾಟಕವಾಗಿ, ಕಿವಿಗೆ ಕೀರ್ತನೆಯಾಗಿ, ಮನಕ್ಕೆ ಮುದವನ್ನು ತರುವ ಅವರ ಶಾಕುಂತಲ ನಿಜವಾಗಿ ಹೊಸದು. ಅದರಿಂದಾಗಿ ಅವರು ನಿಜಕ್ಕೂ ಅಭಿನವಕಾಳಿದಾಸರೇ ಹೌದು.

ಮಹಾಭಾರತದ ಆದಿಪರ್ವದ ಶಾಕುಂತಲೋಪಾಖ್ಯಾನವು ಆದಿಕಾವ್ಯ ಕಥೆಯೂ ಕಾಳಿದಾಸರ ಅಭಿಜ್ಞಾನ ಶಾಕುಂತಲ ನಾಟಕೀಯ ಮಾರ್ಗಕಾವ್ಯವೂ ಆದರೆ, ಪ್ರಸ್ತುತ 'ಶಾಕುಂತಲ ಕಾದಂಬರಿ'ಯು ಅಭಿಜ್ಞಾನ ಶಾಕುಂತಲದ ಆಧಾರಿತ ರೂಪಾಂತರವು – ಕನ್ನಡ ಕಾದಂಬರಿ ಕಾವ್ಯವಾಗಿದೆ. ಕಾವ್ಯ ಮತ್ತು ವಿವರಣೆಯಿಂದ ಕೂಡಿದ ಕಾದಂಬರಿಯು ಅತ್ಯಂತ ವರ್ಣನೆಯಿಂದ ಕೂಡಿದೆ. ಪ್ರಕೃತಿಯ

ವರ್ಣನೆಯು ಇಲ್ಲಿ ಕಾಳಿದಾಸನಿಗಿಂತ ಅಧಿಕವಾಗಿದೆ ಎಂದು ಕಾದಂಬರಿಯ ಓದುಗರಿಗೆ ಅನಿಸುತ್ತದೆ. ಒಂದೊಂದು ಭಾಗದಲ್ಲಿ ಪದ್ಯದಿಂದ ಮತ್ತು ಗದ್ಯದಿಂದ ಅನುಕೂಲಕ್ಕೆ ತಕ್ಕಂತೆ ಕಾದಂಬರಿಯನ್ನು ಬರೆದಿದ್ದಾರೆ.

"ಕುದುರೆಗಳನ್ನು ನಡೆಯಿಸು, ಪುಣ್ಯಾಶ್ರಮದ ದರ್ಶನದಿಂದ ನಮ್ಮ ಆತ್ಮಗಳನ್ನು ಪವಿತ್ರಗೊಳಿಸಿಕೊಳ್ಳೋಣ" ಎನ್ನುತ್ತಿದ್ದಂತೆ ಅತ್ತ ಆ ಮೂವರು ಮುನಿಗಳೂ, ಬೇಳುವೆಗೆ ಪುಳ್ಳೆಗಳನ್ನು ಆಯ್ದುತರಲು ಹೊರಟರು. ಇತ್ತ ರಥವು ಸಾಗಿದಂತೆ ತಪೋವನದ ಒಳಪ್ರದೇಶವು ಸಮೀಪಿಸಿತು. ಯಾರೊಬ್ಬರು ಹೇಳದೆಯೂ ಅದು ತಪೋವನದ ಸುತ್ತಣ ಹೊರ ಪ್ರದೇಶವೆಂದು ತಾನಾಗಿ ಹೇಳುತ್ತಿತ್ತು.

"ಅಂಜಿಕೆ ಇಲ್ಲದುದರಿಂದ
ತಮ್ಮಿಚ್ಛೆಯಿಂದ ನಡೆದಾಡುವ ಜಿಂಕೆಗಳು
ತೇರಿನ ಓಜೆಗೆ ಒದಗದೆ ನೆಮ್ಮದಿಯಿಂದಿದ್ದವು.
ಆ ತಪೋವನವು ಶಾಂತಿಯಿಂದ ಮನೋಹರವಾಗಿತ್ತು.
ಮರದ ಕೆಳಗೆ ಹೆಣ್ಣು ಜಿಂಕೆಯೊಂದು ನಿಂತು
ತನ್ನ ಕಣ್ಣಿನ ನವೆಯನ್ನು ಗಂಡು ಜಿಂಕೆಯ
ಕೊಂಬಿನಿಂದ ಪರಿಹರಿಸಿಕೊಳ್ಳುತ್ತಿತ್ತು.
ಗಿಳಿಗಳು ಮರಗಳ ಪೊಟರೆಗಳಲ್ಲಿ
ತಮ್ಮ ಮರಿಗಳನ್ನು ಕಾಪಾಡುತ್ತ ಸುಖವಾಗಿದ್ದವು
ತಾಯಿ ಹಕ್ಕಿಗಳು ತೆಗೆದುಕೊಂಡು ಬಂದ ಗುಟುಕನ್ನು
ಒಳತೆಗೆದುಕೊಳ್ಳಲು ಬಾಯ್ದೆರೆದು ಪುಟ್ಟಮರಿಗಳು
ನಾ ಮುಂದೆ, ತಾ ಮುಂದೆ ಎಂದು, ಒಮ್ಮೆಲೆ
ಗೂಡಿನ ಬಾಗಿಲಿಗೆ ನುಗ್ಗಿ ಬರುವುದರಿಂದ
ಗುಟುಕಿನ ಕಿರುಪಾಲು ಕೆನ್ನೆಲ್ಲ ಕಾಳುಗಳು
ಮರಗಳ ಕೆಳಗೆ ಅಲ್ಲಲ್ಲಿ ಚೆದುರಿದವು.
ಆಶ್ರಮವಾಸಿಗಳು ಸ್ನಾನಕ್ಕಾಗಿ
ಇಪ್ಪೆಯ ಕಾಯಿಗಳನ್ನು ಜಜ್ಜಿ ಅರೆದಿರುವುದರಿಂದ
ಜಿಡ್ಡು ಜಿಡ್ಡಾಗಿರುವ ಕಲ್ಲುಗಳು ಅಲ್ಲಲ್ಲೆ ಕಾಣುತ್ತಿದ್ದವು.
ಮತ್ತೊಂದು ಕಡೆ – ಆಶ್ರಮ ವಾಸಿಗಳು,
ಜಾಮಜಾಮಗಳಲ್ಲಿ ಜಲಾಶಯಗಳಿಗೆ ತೆರಳಿ ಸ್ನಾನ ಮಾಡಿ
ನೀರನ್ನು ಹಿಂಡದ ಒದ್ದೆಯಾದ ನಾರುಡೆಗಳನ್ನು ಉಟ್ಟುಕೊಂಡು

ಅವರವರ ಪರ್ಣಶಾಲೆಗಳಿಗೆ ಹೋಗಿರುವುದನ್ನೂ
ಜಲಾಶಯಮಾರ್ಗಗಳನ್ನೂ, ಅವರ ನಾರುಡೆಯಿಂದ
ಸೋರಿ ತೊಟ್ಟಿಕ್ಕಿದ್ದ ನೀರಿನ ಗೆರೆಗಳು ತೋರುತ್ತಿದ್ದವು ॥೧೧೪॥
ಅದನ್ನು ದುಷ್ಯಂತನು ಗಮನಿಸಿದ"[೨೧]

ಹೀಗೆ ಪರಿಸರದ ಬಗ್ಗೆ ಹಾಗೂ ಆಶ್ರಮದಲ್ಲಿ ಋಷಿಮುನಿಗಳ ಬಗ್ಗೆ ಒಂದೊಂದೇ ವಿವರವಿರುವುದನ್ನು ಗಮನಿಸಬಹುದು. ಪ್ರಾಣಿ, ಪಕ್ಷಿಗಳ, ಮಾನವರ ಜೀವನದ ಬಗ್ಗೆ ಸಂಕ್ಷಿಪ್ತವಾದ ಮಾಹಿತಿಯನ್ನು ಗ್ರಹಿಸಬಹುದು. ಕಾಳಿದಾಸನ ಅಭಿಜ್ಞಾನ ಶಾಕುಂತಲ ನಾಟಕದಂತೆಯೇ ಸಿ.ನಟರಾಜ ಅವರು ಕಾದಂಬರಿಯಲ್ಲಿ ಪದ್ಯದ ರೂಪದಲ್ಲಿ ಹಾಗೂ ಗದ್ಯದ ರೂಪದಲ್ಲಿ ವಿವರಿಸಿದ್ದಾರೆ. ಓದುಗ ವರ್ಗಕ್ಕೆ ಹಿತವಾಗುವಂತೆ ಕಾದಂಬರಿಯಲ್ಲಿ ಸರಳ ಭಾಷೆಯನ್ನು ಬಳಸಿ ಬರೆದಿದ್ದಾರೆ. ದುಷ್ಯಾಂತನು ಕಣ್ವಾಶ್ರಮಕ್ಕೆ ಹೋಗುವಾಗ, ಬರುವಾಗ ತಾನು ಗಮನಿಸಿದ ಸೂಕ್ಷ್ಮ ಸನ್ನಿವೇಶಗಳನ್ನು ವಿವರಿಸುವುದು ತುಂಬಾ ವಿಶಾಲವಾದ ಹೃದಯ ಹೊಂದಿದ ಮನುಷ್ಯರಿಗೆ ಮಾತ್ರ ಸಾಧ್ಯವೆಂದು ಹೇಳಬಹುದು.

ಕಾಡಿನಲ್ಲಿರುವ ಜಿಂಕೆಗಳು ಬೆದರಿದಂತೆ ಬೆದರದೇ, ಆಶ್ರಮದಲ್ಲಿ ಸ್ವ ಇಚ್ಛೆಯಿಂದ ಭಯವಿಲ್ಲದೆ ಓಡಾಡುತ್ತಿದ್ದವು. ಪ್ರಶಾಂತತೆಯಿಂದ ಆಶ್ರಮ ಕಂಗೊಳಿಸುತ್ತಿತ್ತು. ಪ್ರಕೃತಿಯು ಸುಂದರವಾಗಿ ಗಿಡಮರ ಬಳ್ಳಿಗಳ ಅಲಂಕಾರದಿಂದ ದಣಿದ ಮನಸ್ಸಿಗೆ ಮುದು ನೀಡುವಂತಿದ್ದವು. ಮರದ ಕೆಳಗೆ ಹೆಣ್ಣು ಜಿಂಕೆಯೊಂದು ತನ್ನ ಕಣ್ಣಿನ ರೆಪ್ಪೆಯಲ್ಲಿ ತುರಿಕೆಯಾದ್ದರಿಂದ, ಗಂಡು ಜಿಂಕೆಯ ಚೂಪಾದ ಕೋಡಿನಿಂದ ತುರಿಸಿಕೊಳ್ಳುತ್ತಿತ್ತು. ಗಿಳಿಗಳು ಮರದ ಪೊಟರೆಗಳಲ್ಲಿ ಮೊಟ್ಟೆ ಇಟ್ಟು ಮರೆಯಾದ ನಂತರ ಆ ಮರಿಗಳಿಗೆ ಆಹಾರ ತಂದು ಬಾಯಿ ಹಾಕಿ ಗುಟುಕು ಕೊಡುತ್ತಿದ್ದವು. ತಾಯಿ ತಂದ ಗುಟುಕನ್ನು ಪಡೆಯಲು ಪುಟ್ಟ ಮರಿಗಳು ನಾ ಮುಂದೆ ತಾ ಮುಂದೆ ಎಂದು ಬಾಯಿ ತೆರೆದು ನಿಂತಿದ್ದವು. ಒಮ್ಮೆಗೆ ಗೂಡಿನ ಬಾಗಿಲಿಗೆ ನುಗ್ಗಿ ಬಂದಿದ್ದರಿಂದ ಗುಟುಕಿನ ಕೆಲವಷ್ಟು ತಂದ ಕಾಳುಗಳು ಕೆಳಗಡೆ ಬಿದ್ದು ಅಲ್ಲಲ್ಲಿ ಚೆದುರಿದ್ದವು. ಕಾಡಿನಲ್ಲಿ ಬೆಳೆದ ಇಪ್ಪೆ ಕಾಯಿಯನ್ನು ತಲೆಗೆ ಹಚ್ಚಿಕೊಂಡು ಆಶ್ರಮವಾಸಿಗಳು ಸ್ನಾನ ಮಾಡುತ್ತಿದ್ದರು. ಅವರು ಸೋಪು, ಶಾಂಪುಗಳನ್ನು ಬಳಸುತ್ತಿರಲಿಲ್ಲ. ಅವುಗಳು ಅಲ್ಲಿ ಸಿಗುತ್ತಿರಲಿಲ್ಲ. ಕಾರಣ ಕಾಡು ಆಗಿದ್ದರಿಂದ ಸ್ನಾನ ಮಾಡಿ ನೀರನ್ನು ಹಿಂಡದೆ ಒದ್ದೆಯ ನಾರುಡೆಗಳನ್ನುಟ್ಟುಕೊಂಡು ತಮ್ಮ ತಮ್ಮ ಪರ್ಣಶಾಲೆಗಳಿಗೆ ಹೋಗಿರುವುದನ್ನು ಅಲ್ಲಿ ಮಣ್ಣುಗಳ ಗೆರೆಗಳಂತೆ ಕಾಣುತ್ತಿದ್ದವು. ಇಂತಹ ಸನ್ನಿವೇಶಗಳನ್ನು ನೋಡುತ್ತಾ ಆಶ್ರಮದೊಳಗೆ ಪ್ರವೇಶ ಪಡೆದಾಗ ಅಲ್ಲಿ ಮೂರು ಜನ ಸ್ತ್ರೀಯರು ಗಿಡಗಳಿಗೆ ನೀರು ಹಾಕುವುದನ್ನು ಕಂಡನು. ಆ ಮೂವರಲ್ಲಿ ಒಬ್ಬ ಸ್ತ್ರೀಯು ಅತ್ಯಂತ ಸುಂದರವಾಗಿರುವುದನ್ನು ದುಷ್ಯಂತನು ಕಂಡನು. ಇತ್ತ ಮೂರು ಜನ ಸ್ತ್ರೀಯರು ತಮ್ಮಲ್ಲಿ ಮಾತನಾಡಿಕೊಳ್ಳುತ್ತಾ ಗಿಡಗಳಿಗೆ ನೀರು ಹಾಕುತ್ತಿದ್ದರು. ಆ ವೇಳೆಯಲ್ಲಿ ದುಂಬಿಗಳು ಹೂವಿನಲ್ಲಿದ್ದ ರಸಹೀರಲು ಗಿಡದಲ್ಲಿ ಬಂದು ಕುಳಿತಿದ್ದವು.

"ಶಕುಂತಲೆಯನ್ನು ಕವಿ ಈ ಕೆಳಗಿನಂತೆ ವರ್ಣಿಸಿದ್ದಾರೆ.
ತೆಳುಹಳದಿಯ ತೆಳ್ಳನೆಯ
ಹೂಗವಚನಗಳಿಂದ ಮುಸುಕಿದ ಮಲರ ಮೊಗ್ಗಿನಂತೆ
ಹೆಗಲ ಮೇಲೆ ಬಿಗಿದು ಕಟ್ಟಿದ
ತೆಳ್ಳನೆಯ ಮಂಜುಳ ಮಂಜಿಯ
ನವಿರುನಾರುಡೆಯು ಕೂಡಿಟ್ಟ
ಒಟ್ಟ ಮೊಲೆಗಳೆರಡರ ಗೋಲಗಳ ನಡುವೆ
ಎಡೆಕುಗ್ಗಿ ಎದೆಗವಚದಲ್ಲಿ ಹುದುಗಿಟ್ಟ
ಅವಳ ಏರುಂಜವ್ವನದ
ಉಬ್ಬಿದ ಎದೆಯ ಹಿಗ್ಗಿದ ಸೊಬಗನು ತೋರದಿಂದ ॥೧-೧೪॥
ಪಾಚಿ ಹರಡಿ ಹಬ್ಬಿದುದಾರೂ
ಕಮಲವು ಕಣ್ಣನ್ನು ಕೊಳ್ಳೆಯಿಡುತ್ತದೆ
ಚಂದಿರನಲ್ಲಿ ಕಾಣುವ ಕುಂದಿನ ಕುರುಹು
ಹೆಚ್ಚಿನ ಚೆಲುವನ್ನು ಹಿಗ್ಗಿಸುತ್ತದೆ
ನಾರುಡೆ ತೊಟ್ಟರೂ ಈ ಎಳೆವೆಣ್ಣು
ಮನವನ್ನು ಮರುಳುಗೊಳಿಸುವ ಮೋಹಿನಿಯೇ
ನಲ್ಲೊಡಲಿಗೆ ಎಲ್ಲಾ ಉಡುಗೆಗಳೂ
ಅಲಂಕಾರವಾಗುವುದು ಆಶ್ಚರ್ಯವೇ? ॥೧-೨೦॥"[೨೨]

ಶಕುಂತಲೆಯು ತನ್ನ ಮುಂದಿದ್ದ ಬಕುಳ ಮರದ ಎಳೆದಾದ ತಳಿರ ಬೆರಳುಗಳು ಗಾಳಿಯಿಂದ ಹಲುಗಾಡುವುದನ್ನು ನೋಡಿ ಅವು ತನ್ನನ್ನು ಸನ್ನೆ ಮಾಡಿ ಬಯಸುವುದೆಂದು ತಿಳಿದು, ಪ್ರೀತಿಸಲು ಅವುಗಳ ಹತ್ತಿರ ಹೋದಳು. ಶಕುಂತಲೆಯ ಸೌಂದರ್ಯ ದುಷ್ಯಂತನ ಕಣ್ಣಿಗೆ ಕಾಣುವುದನ್ನು ಕವಿ ಕಾದಂಬರಿಯಲ್ಲಿ ಅತ್ಯಂತ ಮನೋಹರವಾಗಿ ವರ್ಣಿಸಿ ಬರೆದಿದ್ದಾರೆ.

ಶಕುಂತಲೆಯು ನವಮಲ್ಲಿಕಾ ಲತಗೆ ನೀರೆರೆಯುತ್ತಿದ್ದಾಗ ಕರಿಯ ದುಂಬಿಯೊಂದು ಲತೆಯನ್ನು ಬಿಟ್ಟು ಅವಳ ದೇಹಸೌರಭ ಮುಗ್ಧವಾಗಿ ಆಕೆಯ ಮುಖಕಮಲಕ್ಕೆರಗಿತು.

"ಬಂಡುಣಿಯು ಬಟ್ಟ ವಿಡುವ ಎಡೆಯೆಲ್ಲಾ
ಮೀನ ಕಣ್ಣಾಲಿ ಸುಳಿದು ನೋಡುವುದು
ಕಾದಲ ಅರಿಯದ ಕನ್ನೆಯ ಹುಬ್ಬು
ಬೆದರಿ ಬಾಗಿ ನೋಟದ ಬೆಡಗ ಕಲಿಸುವುದು, ॥೧-೨೩॥
ಮಿಗಿಲಾಗಿ ನಡುಗಿ, ಹುಬ್ಬು ಆಡುವ

ಆಲಿಯ ಹತ್ತೆ ಹೋಗಿ ತೊಡಕುವೆ ಎಲೆದುಂಬಿ!
ಕಿವಿಯ ಅರುಗಿನಲಿ ಸೇರಿ
ಗುಟ್ಟು ಹೇಳುವ ಹಾಗೆ ಹಾಡುವೆ,
ಕೈಗಳನ್ನು ಒದರಿ ತಡೆಯುವ ಕನ್ಯೆಯ
ಕಾಮಬಂಡಾರದ ಕೆಳದುಟಿಯ ಕುಡಿಯುವೆ,
ಆವ ಆರಯ್ಯುವಲ್ಲಿ ನಾವು ನಸಿಕಿದೆವು,
ನೀನಲ್ಲವೇ ಬಂಡುಣಿ! ಗಾಳಿ ಬಂದಾಗ
ಹಾರಿ ಕುಳಿತು ಹೀರಿ, ತೂರಿಕೊಳ್ಳುವನು ॥೧-೨೪॥"[೨೩] (ಪು.ಸಂ.೧೨)

ತನ್ನನ್ನು ಓಡಿಸಲು ಕೈಕೊಡಹುತ್ತಿದ್ದ ಕಾರ್ಯದಲ್ಲಿ ಆನಂದಗೊಂಡು ಅವಳ ಅಧರಾಮೃತವನ್ನು ಪಾನಮಾಡಿದ ದುಂಬಿಯನ್ನು ಕಂಡ ದುಷ್ಯಂತನು ತನ್ನ ಮನದಲ್ಲಿಯೇ "ಓ ದುಂಬಿ, ನೀನೇ ಧನ್ಯ! ಸತ್ಯವನ್ನು ತಿಳಿಯುವುದರ ಆವಶ್ಯಕತೆಯಿಂದ ತತ್‌ಕ್ಷಣದಲ್ಲಿ ಅಭೀಷ್ಟ ಸಿದ್ಧಿಸದೆ. ನನಗಿಂತ ನೀನೇ ಧನ್ಯ! ಅಭಿಜ್ಞಾನ ಶಾಕುಂತಲ ನಾಟಕಕ್ಕಿಂತ ಕಾದಂಬರಿಯಲ್ಲಿ ಉತ್ತಮವಾಗಿ ವರ್ಣಿಸಿದ್ದಾರೆ. ದೂರದಲ್ಲಿ ನಿಂತು ನೋಡುವ ದುಷ್ಯಂತನ ಕಣ್ಣಿಗೆ ಆನಂದವೇ ಆನಂದ ಎನ್ನುವಂತೆ ಕವಿಯು ವರ್ಣಿಸಿದ್ದಾರೆ. ಅಪೂರ್ವವಾದ ಸುಂದರ ಸ್ತ್ರೀಯು ನನಗೆ ಸಿಕ್ಕರೆ ಎಷ್ಟೊಂದು ಚೆನ್ನ. ಆದರೆ ಆ ದುಂಬಿಯೇ ಹೆಚ್ಚು ಭಾಗ್ಯಶಾಲಿ ನೋಡು ಎಂದು ತನ್ನಲ್ಲಿ ತಾನು ಅಂದುಕೊಂಡು ಸಂಕಟ ಪಡುವನು. ಮಾನವನ ಹೃದಯಕ್ಕೆ ಹತ್ತಿರವಾಗುವುದು ಸೌಂದರ್ಯ. ಅಂತಹ ರೂಪಿನಿಂದ ಕೂಡಿದ ಶಕುಂತಲೆಯು ಪರಿಸರದ ನೆರಳಲ್ಲಿ ಸ್ವಚ್ಛಂದವಾಗಿ ಬೆಳೆದವಳು. ಯೌವನಕ್ಕೆ ಬಂದ ಗೊಂಬೆಯಂತೆ ನೋಡುಗರಿಗೆ ಕಂಗೊಳಿಸುತ್ತಿದ್ದಾಳೆ. **"ಕೂಟ"** ಎಂಬ ಭಾಗದಲ್ಲಿ ಶಕುಂತಲೆ ದುಷ್ಯಂತರ ಪರಸ್ಪರ ಪರಿಚಯದಲ್ಲೆ ಮುಗಿಯುವುದು.

ಶಾಕುಂತಲಾ ಕಾದಂಬರಿಯ ಎರಡನೆಯ ಭಾಗ **'ಬೇಟ'** ಪ್ರಾರಂಭವಾಗುವುದನ್ನು ಈ ಕೆಳಗಿನಂತೆ ವಿಶ್ಲೇಷಣೆ ಮಾಡಲಾಗಿದೆ. ಸುತ್ತಮುತ್ತಲೂ ಚಿಲಿಪಿಲಿ ಸದ್ದು ಕಂಗೆಡಿಸುವ ಬೇಟೆಗಾರರ ಕಿಚಿಕಿಚಿ ಕೂಗು ಬೆಳಗಾಯಿತೇನೂ ಎನ್ನಿಸಿತು. ಆದರೆ ಎದ್ದು ಗೂಡಾರದ ತೆರೆಯನ್ನೆಳೆಯಲೂ ಬೇಸರ, ಬೇಟೆಯ ಮೋಜಿನ ದೊರೆಯ ಸಂಗಡಿಗ ಮಾಢವ್ಯನು ದಣಿವನ್ನು ತಾಳಲಾರದವನಾಗಿದ್ದನು. ಬೇಸಗೆಯ ಬಿಸಿಲಿನಲ್ಲಿ ಸುತ್ತಿ ಸುತ್ತಿ ಬಳಲಿದ್ದಾರೆ. ಊಟಕ್ಕೆ ಈಟಿಯ ತುದಿಗೆ ಚುಚ್ಚಿ ಸುಟ್ಟ ಮಾಂಸವೇ ಹೆಚ್ಚಾಯಿತು. ಊಟದ ಸಮಯಕ್ಕೆ ಸರಿಯಾದ ಊಟವಿರಲಿಲ್ಲ. ಎಲೆ ಉದುರಿ ಬೆಚ್ಚನೆ ಬೆಂದಿರುವ ಬೆಟ್ಟದ ಜೋಗಿನಿಂದ ಹರಿವ ಬೆಚ್ಚನೆಯ ಒಗರು ನೀರು ಕುಡಿದು ದಣಿವಿನಿಂದ ಪರಿಹಾರವಿಲ್ಲ. ಕೂಡಿದರು ಇರುಳೆಲ್ಲ ನಿದ್ದೆ ಇಲ್ಲ ಎಂದು ದುಷ್ಯಂತನ ಸ್ನೇಹಿತ ಮಾಢವ್ಯನು ಮನದಲ್ಲಿ ಅಂದುಕೊಳ್ಳುತ್ತಿದ್ದನು. ವಿನೋದವಾಗಿ ಮಾತಾಡಿ ಮನಬಂದಂತೆ ತಿಂದುಂಡು ಕುಡಿದು ಹಾಯಾಗಿ ನಿದ್ರಿಸುವುದೇ ಬಾಳುವೆಯಲ್ಲಿ ಬೇಕಾದ ಸುಖವೆಂದುಕೊಂಡಿದ್ದ ಮಾಢವ್ಯನಿಗೆ ಸದ್ಯದಲ್ಲಿ

ಅದು ಯಾವುದೂ ಸಿಗದೇ ಬೇಸರವಾಗಿತ್ತು. ಮತ್ತೆ ಸೀಳಿಡುವ ಬೇಟೆಗಾರರ, ಊಳಿಡುವ ನಾಯಿಗಳ ದನಿ, ನಿದ್ದೆ ಬಾರದಾಯಿತು. ಮಾಢವ್ಯ ಎದ್ದು ಕುಳಿತನು. ಕುಳಿತ ಕಡೆಯಲ್ಲೇ ತನ್ನ ದೊಣ್ಣೆಯನ್ನು ತೆಗೆದುಕೊಂಡು ಗೂಡಾರದ ತೆರೆಯನ್ನು ಸರಿಸಿದನು. "ಇನ್ನೂ ಬೆಳಕು ಹರಿದೇ ಇರಲಿಲ್ಲ. 'ಈ ತೊತ್ತಿನ ಮಕ್ಕಳಿಗಿನ್ನೇನು ಕೆಲಸ' ಎಂದು ನಿದ್ದೆ ಮಬ್ಬಿನಲ್ಲೇ ನಿಟ್ಟುಸಿರುಬಿಟ್ಟು ಶಪಿಸಿದನು. ಇತ್ತ ದುಷ್ಯಂತನು ಶಕುಂತಲೆಯನ್ನು ನೋಡಿದುದು. 'ಕುರುವಿನ ಮೇಲೆ ಬೊಕ್ಕೆ ಎದ್ದಂತೆ' ಆಗಿತ್ತು. ಮಾಢವ್ಯನಿಗೆ ಈಗ ರಾಜನು ಸಹಾ ಪಟ್ಟಣಕ್ಕೆ ಹಿಂದಕ್ಕೆ ಹೋಗುವ ಮಾತನ್ನು ಎತ್ತುತ್ತಿಲ್ಲ. ಇಂದಾದರೂ ರಾಜನು ಪಟ್ಟಣಕ್ಕೆ ಹೊರಟರೆ ಸಾಕು ಎಂದು ಚಿಂತಿಸಿದನು. ಚಿಂತೆ ಹರಿಯುತ್ತಿದ್ದಂತೆ ಬೆಳಕು ಹರಿಯಿತು. ರಾಜನು ಊರಿಗೆ ಹೊರಡುವ ಸಮಾಚಾರವನ್ನೆತ್ತುವನೇನೋ ಎಂಬ ಆಶಯದಿಂದ ದೊಣ್ಣೆಯನ್ನು ಊರಿಕೊಂಡೇ ಮೇಲೆದ್ದ ಮಾಢವ್ಯನು ದುಷ್ಯಂತನನ್ನು ಕಾಣಲು ಹೊರಟನು. ದುಷ್ಯಂತನನ್ನು ಭೇಟಿಯಾದಾಗ ಅಲ್ಲಿ ಮಾತನಾಡುವ ಮಾತುಗಳನ್ನು ಈ ಕೆಳಗಿನಂತೆ ಗಮನಿಸಬಹುದು. ರಾಜ ಹೀಗೆ ರಾಜಕಾರ್ಯಗಳನ್ನು ಬಿಟ್ಟು ಬಿಟ್ಟು ಬೇಡನಂತೆ ಕಾಡುಮೃಗಗಳು ಸುಳಿದಾಡುವ ಕಾಡಿನಲ್ಲಿ ತಿರುಗುವ ಡೊಂಕುನಡೆ ನಿನಗೆ ಸರಿ. ನನಗಾದರೋ ನಿಜಕ್ಕೂ ದಿನದಿನ ಮೃಗಗಳ ಬೆನ್ನಟ್ಟಿ ಓಡಿಸುವುದರಲ್ಲಿ ಒಡಲ ಕೀಲುಗಳೆಲ್ಲಾ ಸಡಿಲವಾಗಿ ಕೈಕಾಲುಗಳು ನನ್ನ ಹತೋಟಿಯಲ್ಲೇ ಇಲ್ಲ. ಆದುದರಿಂದ ಒಂದು ದಿನದ ಮಟ್ಟಿಗಾದರೂ ವಿಶ್ರಮಿಸಿಕೊಳ್ಳಲು ನನಗೆ ಬಿಡುವು ಕೊಡಬೇಕೆಂದು ಬೇಡುವೆನು ಎಂದನು. ಆದರೆ ದುಷ್ಯಂತನ ಮನಸ್ಸು ಅಷ್ಟೊತ್ತಿಗೆ ಶಕುಂತಲೆಯ ಮೇಲೆ ನೆಟ್ಟಿತು. ಆದ್ದರಿಂದ ರಾಜ ವಿರಹದ ತಾಪದಲ್ಲಿದ್ದ, ಮಾಢವ್ಯನು ಏನು ಹೇಳಿದರೂ ಕೇಳುವ ಸ್ಥಿತಿಯಲ್ಲಿ ಇರಲಿಲ್ಲ."[೨೪]

ದುಷ್ಯಂತನು ಬೇಟೆಗೋಸ್ಕರ ಬಂದು ಶಕುಂತಲೆಯ ಸೌಂದರ್ಯದ ಲೂಟಿ ಮಾಡಿದ್ದ. ಆತನ ಮನದಲ್ಲಿ, ಕಣ್ಮಣಿ ಶಕುಂತಲೆಯ ನೆನಪು ತುಂಬಿತು. ಇದೀಗ ಅವನ ಮನಸ್ಸು ಶಕುಂತಲೆಯ ಮೇಲಣ ಹಂಬಲದಲ್ಲಿ ಮುಣಗಿ, ತಾನಾಗಿ ಬೇಟೆಯಲ್ಲಿ ಬೇಸರ ಪಟ್ಟಿತು. ಆದ್ದರಿಂದ ಬೇಟೆಯಲ್ಲಿ ಅಷ್ಟೊಂದು ಇಷ್ಟವಿರಲಿಲ್ಲ.

"ಹಳ್ಳಕೊಳ್ಳಗಳಲ್ಲಿ ಕಾಡುಕೋಣಗಳು
ಕೋಡುಗಳನ್ನು ಬಡಿಯುತ್ತಾ
ನೀರನ್ನು ಕದಡಿ ಮನಬಂದಂತೆ ಮುಳುಗಿವೆ
ಹುಲ್ಲೆಯ ಮಂದೆಗಳು ಅಲ್ಲಲ್ಲಿ ಗುಂಪುಗೂಡಿ
ಮರಗಳ ನೆಳಲಲ್ಲಿ ಮೆಲಕು ಹಾಕುವುದರಲ್ಲಿ ನಿರತವಾಗಿವೆ.
ಮಳೆಯ ನೀರು ನಿಂತ ಹೊಂಡಗಳಲ್ಲಿ ಎಕ್ಕಲಗಳು
ತುಂಗೆಗೆಡ್ಡೆಗಳನ್ನು ನೆಮ್ಮದಿಯಿಂದ ತೋಡಿ ತಿನ್ನುತ್ತಿವೆ.
ನಮ್ಮ ಈ ಬಿಲ್ಲೂ ಎಡೆಬಿಡದೆ ಬಿಗಿದಿರುವ
ಸಿಂಜಿನಿಯಿಂದ ಸಡಿಲಗೊಳ್ಳಲಿ ॥೨.೬॥"[೨೫] (ಪ್ರ.ಸಂ. ೩೦)

ಕಾಡಿನಲ್ಲಿ ಸೈನಿಕರೊಂದಿಗೆ ಬೇಟೆಯಾಡಲು ಹೋದಾಗ ಅಲ್ಲಿ ಹಳ್ಳದಲ್ಲಿ ಎರಡು ಕಾಡುಕೋಣಗಳು ನೀರೆನ್ನೆಲ್ಲಾ ಕೆದಕಿ ಕಾದಾಡುತ್ತ ನಿಂತಿವೆ. ಆದರೆ ದುಷ್ಯಂತನು ಬೇಟೆಯಾಡುತ್ತಿಲ್ಲ(ಹುಲ್ಲೆಯ ಮಂದೆಗಳು). ಜಿಂಕೆಯ ಹಿಂಡುಗಳು ಅಲ್ಲಲ್ಲಿ ಮರದ ನೆರಳಲ್ಲಿ ನಿಂತು ವಿಶ್ರಮಿಸಿಕೊಳ್ಳುತ್ತಿವೆ. ಕೆಲವು ಜಿಂಕೆಗಳು ನೀರಿನ ಹೊಂಡದ ಬದಿಯಲ್ಲಿ ಬೆಳೆದ ತುಂಗೆ ಗೆಡ್ಡೆಗಳನ್ನು ನೆಮ್ಮದಿಯಿಂದ ತೋಡಿ ತಿನ್ನುತ್ತಿವೆ. ಆದರೂ ದುಷ್ಯಂತನಲ್ಲಿರುವ ಬಿಲ್ಲುಗಳು ಸಡಿಲಗೊಳ್ಳದಂತೆ ಹೆಗಲ ಮೇಲೆ ಹಾಗೇ ಇರುವುದನ್ನು ಪರಿಜನರು ಕಂಡರು. ದೊರೆಯ ಇಂಗಿತವನ್ನರಿತ ಅವನ ಪರಿಜನರೂ ಭದ್ರಸೇನನ್ನು ಹಿಂಬಾಲಿಸಿದರು. ಅದನ್ನು ಕಂಡ ಮಾಢವ್ಯನಿಗೆ ಸಂತೋಷ ಮತ್ತೆ ಆಶ್ಚರ್ಯವಾಯಿತು. ಮಿತ್ರ ಒಳ್ಳೆಯದನ್ನೇ ಮಾಡಿದೆ. ಆ ಬೇಟೆಯ ಪ್ರೋತ್ಸಾಹಕನ ಆಸೆಯು ಧ್ವಂಸವಾಯಿತು. ಅಲ್ಲದೆ ಇಲ್ಲಿ ಒಂದು ನೊಣವೂ ಇಲ್ಲದಂತಾಯಿತು. ಈಗಲಾದರೂ ಆ ಮರದ ನೆಳಲಿನಲ್ಲಿರುವ ಶಿಲಾಪೀಠದ ಮೇಲೆ ಕುಳಿತುಕೋ ನಾನೂ ಸಹ ವಿಶ್ರಮಿಸಿಕೊಂಡಾಂತಾಗುತ್ತದೆ ಎಂದು ದುಷ್ಯಂತನನ್ನು ಕರೆದನು. ಆದರೆ ದುಷ್ಯಂತನು ಶಕುಂತಲೆಯನ್ನು ವರ್ಣಿಸಿದನು.

"ಸ್ತ್ರೀ ಚಿತ್ರವೊಂದನ್ನು ಬ್ರಹ್ಮನು ರೂಪಿಸಿ,
ಆಮೇಲೆ ಜೀವಕಳೆಯನ್ನು ಅದರಲ್ಲಿ ತುಂಬಿದನೋ!
ಅಥವಾ ಜಾಣನಾದ ಆ ಬೊಮ್ಮನು ಬಹು ಮನೋಜ್ಞವಾದ
ರೂಪಗಳೊಂದೊಂದನ್ನು ಆರಿಸಿ
ಆ ಆದರ್ಶಮೂರ್ತಿಯನ್ನು ಮಾಡಿದನೋ!
ಅಂತೂ, ಆ ಸ್ತ್ರೀರತ್ನದ ಸೃಷ್ಟಿಕ್ರಮವೇನೇ ಇರಲಿ ಅವಳಷ್ಟೂ ಮಟ್ಟಿನ ಸುಂದರಿಯು
ಈ ಇಳೆಯಲ್ಲೇ ಇಲ್ಲವೆಂದು ನನ್ನ ಭಾವನೆ
ಕುಂದಿಲ್ಲದ ಆಕೃತಿಯುಳ್ಳ ಅವಳು;
ಒಂದು ಆಘ್ರಾಣಿಸಿದ ನವಕುಸುಮ,
ಕೈಯ ಉಗುರುಗಳಿಂದ ಚಿವುಟದ ಎಳೆಯ ಚಿಗುರು,
ಎಜ್ಜವಿಕ್ಕದ ಅನರ್ಘ್ಯಮಣಿ,
ಸವಿನೋಡದಿರುವ ಹೊಸಜೇನು,
ಅರ್ಹತೆಯುಳ್ಳವನಿಗೆ ಸಲ್ಲಬೇಕಾದ ಅಖಂಡಪುಣ್ಯಫಲ.
ಆ ಫಲವನ್ನು ಪಡೆಯಲು ಈಡಾದ
ಯಾವನಲ್ಲಿ ವಿಧಿಯು ಸೇರಿದೆಯೋ ನಾಕಾಣೆನು!"[೨೬] (ಪ್ರಸಂ.೩೨)

ಶಕುಂತಲೆಯು ನವಕುಸುಮದಂತೆ, ಯಾರು ಸವಿನೋಡದ ಹೊಸಜೇನು, ಆ ಜೇನು ಪಡೆಯಲು ಅರ್ಹತೆಯು ಬೇಕು. ಒಂದು ವೇಳೆ ಆಕೆ ನನಗೆ ಸಿಕ್ಕರೇ ಅಖಂಡ ಪುಣ್ಯ ಫಲ

ದೊರಕಿದಂತೆ ಆಗುತ್ತದೆ. ಆದರೆ, ಆ ಫಲವನ್ನು ಪಡೆಯಲು ಕಾಡಲ್ಲಿ ವಿಧಿಯು ಸೇರಿದೆಯೋ ನನಗೆ ತಿಳಿಯದಾಗಿದೆ ಮಿತ್ರ ಎಂದು ದುಷ್ಯಂತ ಮಾಢವ್ಯನಿಗೆ ಹೇಳಿದನು.

ರಾಜನ ಮಾತಿಗೆ ಉತ್ತರವಾಗಿ ಮಾಢವ್ಯನು "ಮಿತ್ರ! ಆಕೆ ನೀನು ಹೇಳಿದಂತೆಯೇ ಇರುವುದಾದರೆ ಸ್ತ್ರೀ ರತ್ನವೇ ಹೌದು. ಜೋಪಾನವಾಗಿ ಕಾಪಾಡಿಕೋ. ಇಂಗುದೀ ಎಣ್ಣೆಯಿಂದ ಜಿಡ್ಡುಗಟ್ಟಿದ ಜಡೆಮುಡಿಯುಳ್ಳ ಯಾವನಾದರೂ ವನವಾಸಿಯ ಕೈಗೆ ಸಿಕ್ಕಿಕೊಂಡಾಳು" ಎಂದು ಎಚ್ಚರಿಸಿದನು.

"ಯಾವುದಕ್ಕೂ ಆಕೆ ಪರಾಧೀನೆ, ಅವಳ ಹಿರಿಯರು ಆಶ್ರಮದಲ್ಲಿಲ್ಲ."

"ಅದಿರಲ್ಲಿ, ನಿನ್ನ ಬಗ್ಗೆ ಆಕೆಯ ಕಟಾಕ್ಷಾನುರಾಗ ಹೇಗಿತ್ತು?"
"ಸಹಜವಾಗಿ ತಾಪಸ ಕನ್ನೆಯರು ಚತುರೆಯರಲ್ಲ, ಆದರೂ
ಎನ್ನ ಕಣ್ಣ ಮುಂದೆ ಅವಳ ಕಣ್ಣು ಮರೆವುದು
ಬೇರೆ ನೆವದಿಂದ ಮುಗುಳುನಗೆ ಅರಳುವುದು,
ತಾಳ್ಮೆಯಿಂದ ಅಡಗಿದ ಅವಳ ನಡೆಯಿಂದ
ಅವಳ ಕಾಮನೆ ಬೆಳಗಲೂ ಇಲ್ಲ." (ಪು.ಸಂ.೩೩)

"ನೋಡಿದೊಡನೆ ತೊಡೆಯನೇರುವಳೆಂದು ನೆನೆಯಬಹುದೇ?" ಎಂದು ಕೇಳಿದ ಮಾಡವ್ಯನ ಕೇಳ್ವಿಗೆ, "ಹಾಗೆನ್ನ ಬೇಡ ಮಿತ್ರ. ಆನೆಯ ವೃತ್ತಾಂತವನ್ನು ಕೇಳಿ, ಅವಳು ಸಖಿಯರೊಡನೆ ಹೊರಟು,

"ಕೆಲ ಅಡಿಯಿಟ್ಟ ಆ ಎಳೆಯಳು
ಕುರಿತಾದ ಕುಶದ ಮೊನೆ.
ಕಾಲಲ್ಲಿ ಕುತ್ತಿತೆಂಬ ನೆಪವಿಟ್ಟೂ
ಗೋರಂಟಿಯಲ್ಲಿ ಸಿಕ್ಕಿಕೊಂಡ
ನಾರುಡೆಯನ್ನು ಬಿಡಿಸಿಕೊಳ್ಳುವಂತೆಯೂ
ತಿರುಗಿ ನಿಂತು ನನ್ನನ್ನು ಚೆನ್ನಾಗಿ ನೋಡಿದಳು"[೨೭]

ಶಕುಂತಲೆಯ ಒಳಗಿನ ಇಂಗಿತವನ್ನು ನಿರ್ಣಯಿಸಿ ನುಡಿದ ದೊರೆಯ ಮಾತನ್ನು ಕೇಳಿದ ಮಾಢವ್ಯನು ಮತ್ತೇಕೆ ಚಿಂತಿಸುತ್ತಿರುವೆ ಗೆಳೆಯಾ, ಮುಂದುವರಿಸು ನಿನ್ನ ಪ್ರೇಮವನ್ನು ಎಂದನು. ಶಕುಂತಲೆಯು ನೋಡಿದ್ದೇ ನಿಜವಾದರೆ ಮತ್ತಿನ್ನೇನು? ಬುತ್ತಿಯನ್ನು ಕಟ್ಟಿ ಸಿದ್ಧನಾಗು. ಈಗಿನಿಂದಲೇ ತಪೋವನವು ಉಪವನವಾಯಿತೆಂದು ಭಾವಿಸುವೆನು ಎಂದನು. ಅಷ್ಟು ಸುಲಭವಾಗಿ ಹೇಳಿಬಿಟ್ಟೆಯಲ್ಲಾ! ಚೆನ್ನಾಗಿ ಯೋಚಿಸಿ ನೋಡು, ವಿಶೇಷ ಕಾರಣವಾವುದೂ ಇಲ್ಲದೆ ಪುನಃ ಆಶ್ರಮಕ್ಕೆ ತೆರಳುವುದು ಉಚಿತವೇ? ಎಂದು ಮಿತ್ರನನ್ನು ದುಷ್ಯಂತ ಕೇಳಿದನು. ಮಾಢವ್ಯನು ಅದಕ್ಕೆ ವಿಶೇಷ ಕಾರಣವೇಕೆ?

ನೀನು ಈ ಧರೆಯ ದೊರೆಯಲ್ಲವೆ? ಅಂದನು. ಆದ ಮಾತ್ರಕ್ಕೇನು? ಎಂದನು ದುಷ್ಯಂತ. ಕುಂಬುಕಾಳಿನ ಆರರಲ್ಲಿ ಒಂದು ಪಾಲು ಏರಿಯನ್ನು ವನವಾಸಿಗಳು ಕೊಡಬೇಕೆಂದು ಕೇಳಲೋಸುಗ ಹೋಗುವುದು. ಇದಕ್ಕೆ ವಿರುದ್ಧವಾಗಿ ದುಷ್ಯಂತನು ತಿಳಿಗೇಡಿ ಮಾಧವ್ಯ! ವನವಾಸಿಗಳನ್ನು ಕಾಪಾಡುವುದರಿಂದ ರತ್ನರಾಶಿಗೂ ಮಿಗಿಲಾದ ತೆರಿಗೆ ತರುವ ವರಮಾನ ದೊರಕುವುದು. ಹೀಗೆ ಇಬ್ಬರೂ ಚರ್ಚೆಯಲ್ಲಿ ತೊಡಗಿದ್ದರು. ಅದೇ ಸಂದರ್ಭದಲ್ಲಿ ಇಬ್ಬರು ಋಷಿಕುಮಾರರು ತಮ್ಮ ಕಡೆಗೆ ಬರುವುದನ್ನು ಗಮನಿಸಿದರು. ದುಷ್ಯಂತನು ಕುಂತಿದ್ದಲ್ಲಿಂದ ಎದ್ದು ಹತ್ತಿರ ಬಂದು ಋಷಿಕುಮಾರರು ಕೈ ಮುಗಿದನು. ಆ ಮಹಾರಾಜನಿಗೆ ಮಂಗಳವಾಗಲಿ" ಎಂದು ಹರಸಿ, ಹಣ್ಣುಗಳನ್ನು ಕೊಟ್ಟರು. ದುಷ್ಯಂತನು ಪ್ರೀತಿಯಿಂದ ಹಣ್ಣನ್ನು ಪಡೆದು ತಮ್ಮ ಆಜ್ಞೆಯನ್ನು ಕರುಣಿಸಬೇಕು ಎಂದನು. ಕಣ್ವ ಋಷಿಗಳು ಆಶ್ರಮದಲ್ಲಿಲ್ಲವೆಂದು ತಿಳಿದ ರಾಕ್ಷಸರು, ಆಶ್ರಮಗಳ ಋಷಿಗಳಿಗೆ ಯಜ್ಞಕ್ಕೆ ವಿಘ್ನ ಮಾಡುವರು. ಆದುದರಿಂದ ಕೆಲವು ರಾತ್ರಿಗಳನ್ನು ಸಾರಥಿಯೊಂದಿಗೆ ಶಸ್ತ್ರಾಸ್ತ್ರಸಹಿತ ಬಂದು ಆಶ್ರಮವನ್ನು ಕಾಪಾಡಬೇಕೆಂದರು. ಋಷಿಕುಮಾರರ ಮಾತಿಗೆ ಸಂತೋಷಗೊಂಡನು. ಕರ್ತವ್ಯ-ಬಯಕೆಗಳು ಒಂದಾಗಿ ಸೇರಿದುದಕ್ಕೆ ದುಷ್ಯಂತನು ಕೈ ಮುಗಿದು ಬರುತ್ತೇನೆ. ನೀವು ಮುಂದೆ ನಡೆಯಿರಿ ಎಂದನು.

ಮುನ್ನಿನವರನ್ನು ಹಿಂಬಾಲಿಸಿದ ನಿನಗೆ ಇದು ತಕ್ಕದು
ಬೇಳುವೆಗೆ ಬೆಳೆಯುವ ಭಯವನು ನೀಗಲು
ಕಂಕಣವ ಕಟ್ಟಿರುವವರು ಪೌರವರು.

ಆಪತ್ತಿಗೆ ಸಿಲುಕಿದವರಿಗೆ ಅಭಯ ನೀಡುವುದರಲ್ಲೇ ದೀಕ್ಷಾಬದ್ಧರಾದ ಪುರುಕುಲದವರ ಸಹಜ ಗುಣವನ್ನು ಬಹುವಾಗಿ ಮೆಚ್ಚಿದರು. ಋಷಿಕಲ್ಪನಾದ ದುಷ್ಯಂತನನ್ನು ಅವರು ಅಷ್ಟಾಗಿ ಮೆಚ್ಚಿದುದಕ್ಕೆ ಕಾರಣವಾದರೂ ಇಷ್ಟೆ.

"ಕೋಟೆಯ ಹೆಬ್ಬಾಗಿಲು ಹೂಡುವ
ಲಾಳ ಮುಂಡಿಗೆಯ ತೆರನ ತೋಳುಳ್ಳ ದುಷ್ಯಂತನು
ನೀಲ ಕಡಲಿನಿಂದ ಸುತ್ತುವರಿದ ನೆಲನ ಕಾವನ
ಎಂದರೆ ಚೋದ್ಯವಿಲ್ಲವು.
ಅಸುರರನ್ನು ಬಹುವಾಗಿ ವಿರೋಧಿಸುವ ಸುರರು
ನಾರಿಯ ಏರಿಸಿದ ದುಷ್ಯಂತನ ಬಿಲ್ಲನ್ನೂ
ಇಂದಿರನ ವಜ್ರಾಯುಧವನ್ನೂ ನಂಬಿರುವರು"[೨೮]

ಶಕುಂತಲೆಯನ್ನು ನೋಡುವ ಬಯಕೆ ಅತಿಯಾಗುವ ಸಮಯಕ್ಕೆ ಸರಿಯಾಗಿ ಋಷಿಮುನಿಗಳು ಬಂದು ಕೇಳಿದ್ದರಿಂದ, ದುಷ್ಯಂತನ ಬಯಕೆ ಈಡೇರಿದಂತಾಯಿತು. ಅದೇ ಸಮಯಕ್ಕೆ ಸರಿಯಾಗಿ ರಾಜನ ತಾಯಿಯಿಂದ ಓಲೆ ಬಂದಿತು. ಇದನ್ನು ತಿಳಿದ ಅವನು ಏನು ಮಾಡುವುದು ಎಂದು

ಚಿಂತೆಯಲ್ಲಿದ್ದನು. ಮಾಢವ್ಯನನ್ನು ಕರೆದು ಮಿತ್ರ, ಇಷ್ಟಕಾರ್ಯದಲ್ಲಿ ತಪಸ್ವಿಗಳಿರುವ ನನ್ನ ಅವಶ್ಯಕತೆಯನ್ನು ಈಡೇರಿಸುವೆ. ನೀನು ಪಟ್ಟಣಕ್ಕೆ ಮಾತೃಶ್ರೀಯವರಲ್ಲಿ ಬಿನ್ನವಿಸು, ಮಾತೆಯವರು ನಿನ್ನಲ್ಲಿ ಪುತ್ರವಾತ್ಸಲ್ಯವನ್ನಿಟ್ಟಿರುವುರಿಂದ ಅವರ ಪುತ್ರಕೃತ್ಯವನ್ನು ನೆರವೇರಿಸು" ಎಂದು ಹೇಳಿದನು. ಒಂದು ವೇಳೆ ನಾನು ಹಿಂದಿರುಗಿದರೆ ರಾಕ್ಷಸರಿಗೆ ಹೆದರಿ ಹೋದನೆಂದು ತಿಳಿಯುತ್ತಾರೆ. ಆದ್ದರಿಂದ ನಾನು ಬರುವುದಿಲ್ಲ ನೀನೆ ಹೋಗು ಎಂದನು. ಹಾಗಾದರೆ ಸರಿ, ರಾಜಸಹೋದರನು ಹೇಗೆ ಹೇಳಿದರೆ, ಹಾಗೇ ಪಯಣ ಬೆಳಸುವನು. ಹಾಗೆಯೇ ಮಾಡು, ನನ್ನ ಅನುಚರರನ್ನೆಲ್ಲಾ ನಿನ್ನೊಡನೆ ಕರೆದುಕೊಂಡು ಹೋಗು. ಹಾಗೆ ಮಾಡುವುದರಿಂದ ತಪೋವನಕ್ಕೆ ಬಾಧೆಯು ತಪ್ಪಿದಂತಾಗುತ್ತದೆ.

ಚಪಲನಾದ ಮಾಢವ್ಯನು ಪಟ್ಟಣಕ್ಕೆ ಹೋಗಿ ರಾಣೀವಾಸದವರಿಗೆ ಶಕುಂತಲೆಯ ವಿಚಾರವಾಗಿ ಏನಾದರೂ ಹೇಳುತ್ತಾನೆಂದು ದುಷ್ಯಂತನಿಗೆ ಹೊಳೆದು ಮಿತ್ರ ಈಗಾಗಲೇ ತಡವಾಯಿತು, ನಾನು ಋಷಿಗಳ ಗೌರವದಿಂದ ಆಶ್ರಮಕ್ಕೆ ಹೋಗಬೇಕು ತಾಪಸಕನ್ಯೆ ಶಕುಂತಲೆಯಲ್ಲಿ ನಿಜವಾಗಿ ನನಗೆ ಅನುರಾಗವಿಲ್ಲ.

ನಾವೆಲ್ಲಿ? ಹರಿಣಗಳೊಡನೆ ಬೆಳೆದು
ಪ್ರೇಮದ ಪರಿಯನ್ನು ಅರಿಯದ ಆಕೆ ಎಲ್ಲಿ?
ಪರಿಹಾಸ್ಯಕ್ಕಾಗಿ ಹೇಳಿದುದನ್ನು ನೀನು ನಿಜವೆಂದು
ತಿಳಿದು ಪ್ರಮಾದವಾದಿತು! ಪ್ರಮಾದವಾದಿತು!!'
ಎಂದನು

"ಎಲ್ಲಾದರುಂಟೆ, ಹಾಗೆಂದು ತಿಳಿಯುವಷ್ಟು ದಡ್ಡನೆ?" ಎಂದು ನುಡಿದ ಮಾಢವ್ಯನು ದುಷ್ಯಂತನನ್ನು ಬೀಳ್ಕೊಟ್ಟನು. ಶಕುಂತಲೆಯ ಮೇಲೆ ಅನುರಾಗ ಇದ್ದರೂ, ಇಲ್ಲವೆಂದು ದುಷ್ಯಂತನು ಮಾಢವ್ಯನಿಗೆ ಗೊತ್ತಾಗಬಾರದು ಎಂದು ಹೇಳುತ್ತಾನೆ. ಪ್ರತಿಯೊಬ್ಬ ಮನುಷ್ಯ ತನ್ನ ವೈಯಕ್ತಿಕ ಭಾವನೆಗಳು ಇನ್ನೊಬ್ಬರಿಗೆ ಗೊತ್ತಾಗಬಾರದೆಂದು ತಿಳಿದಿರುತ್ತಾನೆ."[೨೯] ಹೀಗೆ ಶಕುಂತಲೆ ಕಾದಂಬರಿಯಲ್ಲಿ ಲೇಖಕರು 'ಬೇಟ' ಎಂಬ ಭಾಗದಲ್ಲಿ ನಾಟಕಕ್ಕಿಂತ ಭಿನ್ನವಾಗಿ ತಿಳಿಸಿದ್ದಾರೆ.

**ಕೂಟ**

ದುಷ್ಯಂತ ಆಶ್ರಮಕ್ಕೆ ಬಂದ ಮೇಲೆ ನಿಮಿಷದಲ್ಲೇ ಮುನಿಗಳ ಕರ್ಮಗಳು ವಿಘ್ನ ದೂರವಾದವು. ಇಷ್ಟಕಾರ್ಯವು ಮುಗಿದು ಋತ್ವಿಜರಿಂದ ಅನುಗ್ರಹ ಪಡೆದು ಬೀಳ್ಕೊಂಡ ದುಷ್ಯಂತ ಆಶ್ರಮದಲ್ಲಿ ತಿರುಗಾಡಲು ಹೊರಟನು. ವಿರಹದಿಂದ ಶಕುಂತಲೆಯನ್ನು ಕಾಣುವ ಬಯಕೆ ಬಹುವಾಯಿತು. ಅವನ ಮನ ಒಂದೇ ಕ್ಷಣಕ್ಕೂ ಸುಮ್ಮನಿರದೇ ಶಕುಂತಲೆಯ ಕನಸಿನಲ್ಲಿ ಬೆರೆತಿತು, ಕಣ್ಮಣಿ ಶಕುಂತಲೆಯನ್ನು ಅವನ ಮನ ಹುಡುಕತೊಡಗಿತು. ಬೇಸಗೆಯ ಆ ವೇಳೆಯನ್ನು ಶಕುಂತಲೆ ಗೆಳತಿಯರೊಡನೆ ಬಳ್ಳಿಬೀಡುಗಳ ಸಾಲುಮರಗಳ ಕೂಟದ ಮಾಲಿನೀ ಹೊಳೆಯ

ದಡದಲ್ಲಿ ಕಳೆವಳು ಎಂದು ತಿಳಿದಿದ್ದ. ಅವನು ಅಲ್ಲಿಗೆ ಹೊರಟನು. ಎಳೆಯ ಸಾಲುಗಿಡಗಳ ದಾರಿಯಲ್ಲಿ ಆಕೆ ಆಗತಾನೇ ಹೋಗಿರುವಳೆಂದು ಊಹಿಸಿದನು. ಏಕೆಂದರೆ ಪುಷ್ಪಗಳು ಆಗತಾನೇ ಕೀಳಲುಪಟ್ಟ ಪುಷ್ಪಕೋಶಗಳು ಇನ್ನೂ ಬಾಡಿರಲಿಲ್ಲ. ಚಿವುಟಿದ ಚಿಗುರುಗಳಿಂದ ಇನ್ನೂ ಹಾಲುಬರುತ್ತಾ ಕಂಪನ್ನು ಬೀರಿದ್ದವು. ಪ್ರಿಯ ಶಕುಂತಲೆಯು ಆ ಲತಾಮಂಟಪದಲ್ಲಿ ಇರಬಹುದೆಂದು ಊಹಿಸಿ ಮರವೊಂದರ ಮರೆಯಲ್ಲಿ ನಿಂತು ಕೊಂಬೆಗಳ ಮರೆಯಲ್ಲಿ ನೋಡುತ್ತಾ ನಿಂತನು. ಮರೆಯಲ್ಲಿ ನಿಂತು ಸಖಿಯರೊಂದಿಗೆ ಶಕುಂತಲೆ ಮಾತನಾಡುವುದನ್ನು ಕೇಳಿಸಿಕೊಳ್ಳುತ್ತಿದ್ದನು.

"ಸಖಿ ಶಕುಂತಲಾ ತಾವರೆ ಎಲೆಯ ತಂಪಾದ ಗಾಳಿಯು ಹಿತವಾಗಿ ಇರುವುದೇ?" ಎಂದು ಮಮತೆಯಿಂದ ಗಾಳಿ ಬೀಸುತ್ತಿರುವ ಅನಸೂಯೆ, ಪ್ರಿಯಂವದೆಯರು ಕೇಳಿದರು. "ಇದೇನು ಹೀಗೆ, ಬರಿದೆ ಬೀಸುತ್ತಿರುವಿರಿ ಎಂದು ಸುತ್ತಮುತ್ತಣದ ಪರಿವೆಯಿಲ್ಲದಂತೆ ಕಂಡಳು. ದುಷ್ಯಂತನು ಸಹ ಭಾಗಿಯಾಗಿರುವುದರಿಂದ ವಿರಹದಲ್ಲಿರುವುದರಿಂದ ಇಬ್ಬರ ಬಯಕೆಗಳು ಈಡೇರುವವು. ನಂತರ ಲೇಖಕರು ತಮ್ಮ ಕಾದಂಬರಿಯಲ್ಲಿ ವಿವಾಹದ ಬಗ್ಗೆ ಈ ಕೆಳಗಿನಂತೆ ಶಾಕುಂತಲ ಕಾದಂಬರಿಯಲ್ಲಿ ವಿವರಿಸಿದ್ದಾರೆ.

**ಬ್ರಹ್ಮವಿವಾಹ ಪದ್ಧತಿ:** ವೇದವನ್ನು ಚೆನ್ನಾಗಿ ಅರಿತವನನ್ನು ತಾನಾಗಿಯೇ ಸ್ವಾಗತಿಸಿ ಗೌರವದಿಂದ ಕಂಡು, ಏಕವಸ್ತ್ರಧಾರಿಣಿಯಾದ ಮಗಳನ್ನು ತಂದೆಯಾದವನು ವರನಿಗೆ ಒಸಗೆಯಾಗಿ ಒಪ್ಪಿಸಿಕೊಡುವುದು ಬ್ರಹ್ಮವಿವಾಹ ಪದ್ಧತಿ ಎನ್ನುವರು.

**ದೈವವಿವಾಹ ಪದ್ಧತಿ:** ಸರ್ವಾಲಂಕಾರಭೂಷಿತೆಯಾದ ಕನ್ಯೆಯನ್ನು ತಂದೆಯಾದವನು ಸಮಾರಂಭವನ್ನು ನಡೆಸುವ ಪುರೋಹಿತನಿಗೆ ದಾನವಾಗಿ ಕೊಡುವುದು ದೈವವಿವಾಹ ಪದ್ಧತಿ ಎನ್ನುವರು.

**ಆರ್ಷವಿವಾಹ ಪದ್ಧತಿ:** ವರನು ಒಂದು ಜೊತೆ ಗೋವುಗಳನ್ನು ಕಳುಹಿಸಿದ ಮೇಲೆ ದೂರದೇಶದಲ್ಲಿರುವ ವರನಿಗೆ ವಿವಾಹ ಮಾಡಿಕೊಡುವುದು ಆರ್ಷವಿವಾಹ ಪದ್ಧತಿ ಎನ್ನುವರು.

**ಪ್ರಜಾಪತ್ಯ ವಿವಾಹ ಪದ್ಧತಿ:** ಸಾಮಾಜಿಕ ಹಾಗೂ ಧಾರ್ಮಿಕ ಕರ್ತವ್ಯಗಳನ್ನು, ನೀವೀರ್ವರು ಒಂದಾಗಿ ಪಾಲಿಸಿ ಎಂದು ಸ್ಪಷ್ಟವಾಗಿ ಹೇಳಿ ಪಿತೃವು ತನ್ನ ಮಗಳನ್ನು ಸಗೌರವದಿಂದ ಒಪ್ಪಿಸುವುದು ಪ್ರಜಾಪತ್ಯ ವಿವಾಹ ಪದ್ಧತಿ ಎನ್ನುವರು.

**ಅಸುರವಿವಾಹ ಪದ್ಧತಿ:** ವರನು ತಾನು ಮದುವೆಯಾಗಬೇಕೆಂದಿರುವ ಕನ್ಯೆಗೂ ಆಕೆಯ ತಂದೆ ಮತ್ತು ಬಂಧುವರ್ಗದವರಿಗೂ ತನ್ನ ಕೈಲಾಸದಷ್ಟು ಐಶ್ವರ್ಯವನ್ನು ಕೊಟ್ಟು ಕನ್ಯೆಯನ್ನು ಮದುವೆಯಾಗುವುದು ಅಸುರವಿವಾಹ ಪದ್ಧತಿ ಎನ್ನುವರು.

**ರಾಕ್ಷಸವಿವಾಹ ಪದ್ಧತಿ:** ಯುದ್ಧದಲ್ಲಿ ಶತ್ರುಸಮೂಹವನ್ನು ನಾಶಗೊಳಿಸಿ ನೆರವಿಗಾಗಿ ಬಂಧು ಜನಗಳನ್ನು ನೆನೆದು ಹಂಬಲಿಸುವ ಪರಾಜಿತ ರಾಜಪುತ್ರಿಯನ್ನು ಬಲಾತ್ಕಾರವಾಗಿ ಸ್ವೀಕರಿಸುವುದು ರಾಕ್ಷಸವಿವಾಹ ಪದ್ಧತಿ ಎನ್ನುವರು.

**ಪೈಶಾಚಿತವಿವಾಹ ಪದ್ಧತಿ:** ಮಧುಪಾನ ಪ್ರಮತ್ತಳಾಗಿರುವ ಅಥವಾ ನಿದ್ರಾವಶಳಾಗಿರುವ ತರುಣಿಯನ್ನು ಆಲಿಂಗಿಸಿ, ಅತ್ಯಾಚಾರದಿಂದ ನಿರ್ಬಂಧ ವಿವಾಹಕ್ಕೆ ಒಳಪಡಿಸುವುದು ಪೈಶಾಚಿತ ವಿವಾಹ ಪದ್ಧತಿ ಎನ್ನುವರು.

**ಗಾಂಧರ್ವ ವಿವಾಹ ಪದ್ಧತಿ:** ಯುವಕ ಯುವತಿಯರ ಪರಸ್ಪರ ಅನುರಾಗದಿಂದ ಉಂಟಾದ ಸಂಬಂಧ ಗಾಂಧರ್ವ ವಿವಾಹ ಪದ್ಧತಿ ಎನಿಸಿಕೊಂಡಿದೆ.

"ಗಾಂಧರ್ವ ಮದುವೆಯ ಮೊರೆಯಿಂದ
ಹಲವು ಮನ್ನೆಯರು,
ರಾಜಋಷಿ ಕನ್ಯೆಯರನು ಮದುವೆ ಆದರು, ಎಂದೂ
ಅದನು ಅವರ ತಂದೆಯರು ಸಂತಸದಿಂದ
ಅನುಮತಿಸಿ ಆಶೀರ್ವದಿಸಿದರು, ಎಂದೂ
ಹೇಳಿರುವ ಕಥೆಗಳನ್ನು ನೀನು ಕೇಳಿಲ್ಲವೇ?"[೩೦]

ಎಂದು ದುಷ್ಯಂತನು ಮನುವಿನ ಮಾತಿನಂತೆ ಕ್ಷತ್ರಿಯರಿಗನಿತೇ ಮೀಸಲೂ ಮೇಲೂ ಆದ ಗಾಂಧರ್ವ ವಿವಾಹದ ಆಲೋಚನೆಯನ್ನು ಹೇಳಿದನು.

**ಬೀಳ್ಕೋಡುಗೆ**

ಪ್ರೀತಿಯ ಸುಳಿಯಲ್ಲಿ ಸಿಲುಕಿದ ಶಕುಂತಲೆಯು ಕನಸಿನ ಲೋಕದಲ್ಲಿ ತಲ್ಲೀನಳಾಗಿದ್ದಳು. ಗಾಂಧರ್ವ ವಿವಾಹ ಒಂದಾಗಿ ಬೆರೆತಿರುವ ಎರಡು ಜೀವಗಳು ಸಮ್ಮಿಲನದಿಂದ ಬೇರ್ಪಟ್ಟಿರುವ ಸಮಯ ಈ ಭಾಗದಲ್ಲಿ ಉಕ್ತವಾಗಿದೆ. ಶಕುಂತಲೆಯು ಬಳಲಿದ ದೇಹ ಆರಾಮವನ್ನು ವಿಶ್ರಾಂತಿಯನ್ನು ಬಯಸಿದರೆ, ಮನವಿನ್ನೂ ಕನಸಿನ ಸೊಬಗಿನಲ್ಲಿತ್ತು. ಕನಸಿನಲ್ಲಿಯೂ ಅವಳ ಹಾಗೂ ಅವಳ ಇನಿಯನ ನೋಟ ಬೇಟ ಕೂಟಗಳ ಕೀಟಲೆ ಕೋಟಲೆಗಳೇ ನಿಜವಾಗಿ ಅವನೊಡನಿದ್ದಾಗ ಅವುಗಳಿಂದ ಎನಿತು ಆನಂದಗೊಂಡಿತ್ತೋ ಅನಿತೇ ಆನಂದಗೊಂಡಿತು. ಕನಸಿನಲ್ಲಿ ಕಂಡಾಗಲೂ ಈಗಾಗಲೇ ದುಷ್ಯಂತನು ಪಟ್ಟಣದ ಕಡೆಗೆ ಪಯಣ ಬೆಳೆಸಿದರೂ ಇಲ್ಲಿ ಅವಳ ಕಣ್ಣೊಳಗೇ ಇರುವನು. ಶಕುಂತಲೆಯು ಮಲಗಿ ಬಲಮಗ್ಗಲಾಗಿ ಎದ್ದು ಕುಳಿತು ಅಂಗೈಗಳನ್ನು ಉಜ್ಜಿ ಅಕ್ಷರವನ್ನು ಜಪಿಸಿ ಕರಗಳಿಂದ ಕಣ್ಣವರಿ, ಮೊದಲು ಕಂಡದ್ದು "ದುಷ್ಯಂತ, ನಾಮಾಕ್ಷರ ಮುದ್ರಿಕೆಯ ಉಂಗುರ, ನಗು ಬಂದಿತು. ಆದರೆ ಅವಳ ಮನ ದಿನವೊಂದು ಉರುಳಿತೆಂದು ಎಣಿಸಿತು. ದಿನನಿತ್ಯ ಆಶ್ರಮದಲ್ಲಿ ನಡೆಯುವ ಚಟುವಟಿಕೆಗಳು ಎಂದಿನಂತೆ ಪ್ರಾರಂಭವಾದವು. ಆ ಶಕುಂತಲೆಯ ಮನಸ್ಸು ಮಾತ್ರ ದುಷ್ಯಂತ ಹೇಳಿದ ಮಾತಿನ ಯೋಜನೆಯಲ್ಲಿ ಮಗ್ನವಾಗಿತ್ತು.

"ಜ್ಯೇಷ್ಠ ಮಾಸದ ಅಂತ್ಯವಾದರೂ ಆಷಾಡದ ಚಳಿ ಆಗಾಗಲೇ ಆವರಿಸಿಕೊಂಡಿತ್ತು. ಕೊರೆತದ ನಿರೋಳಗಣ ಮೀನುಗಳು ಬೆಳಗಿನ ಎಳೆಬಿಸಿಲನ್ನು ಕಂಡು ಹರ್ಷಗೊಂಡು ಹೊರಗೆ ನೆಗೆದು ಮತ್ತೆ ಮುಳುಗುತ್ತಿದ್ದವು. ನೀರು ಕಾಗೆಗಳು ತೇಲಿ ತೇಲಿ ಸಾಗುತ್ತಾ ಇದ್ದಕ್ಕಿದ್ದ ಹಾಗೆ ಮುಳುಗಿ ನೀರೊಳಗೆ ಬೇಟೆಯಾಡಿ ಮೀನುಗಳನ್ನು ಕಚ್ಚಿಕೊಂಡು ಮತ್ತೆ ಅವುಗಳನ್ನು ನುಂಗುತ್ತಾ ಮುಂದೆ ಸಾಗುತ್ತಿದ್ದವು. ದೂರದಲ್ಲಿ ಹಾಡುತ್ತಿದ್ದ ಜಾಲಗಾರ ಹಕ್ಕಿಗಳು ನೇರವಾಗಿ ಎರಗಿ ನೀರಿನೊಳಗಣ ಮೀನುಗಳನ್ನು ಕಚ್ಚಿಕೊಂಡು ಮತ್ತೆ ಮೇಲೆ ಹಾರುತ್ತಿದ್ದವು. ಈ ದೃಶ್ಯವನ್ನು ಕಂಡ ಅನಸೂಯೆಗೆ ಅಯ್ಯೋ ಎಂದೆನಿಸಿತು. ಆದರೆ ಅದು ಪ್ರಕೃತಿನಿಯಮ ಎಂದು ಸಮಾಧಾನ ತಂದುಕೊಂಡಳು. ಪ್ರಿಯಂವದೆಯಾದರೋ ಅಂದಿನ ಶಕುಂತಲೆಯ ಸ್ನಾನದ ಫಲ ಸದಾ ನೀರಿನೊಳಗಿರುವ ಮೀನಿನದರಂತಾಯಿತೆಂದು ತಿಳಿದಳು. ಸ್ನಾನ ಮುಗಿಯಿತು. ಮೂವರು ಪರ್ಣಶಾಲೆಯ ಕಡೆಗೆ ಹೊರಟರು.

ಶಕುಂತಲೆಯು ದುಷ್ಯಂತನಲ್ಲಿ ಮಗ್ನಳಾಗಿದ್ದಾಳೆ. ಇತ್ತ ದಾಸಿಯರು ಹೂ ತರಲು ಹೋಗಿದ್ದಾರೆ. ಅದೇ ಸಮಯಕ್ಕೆ ದೂರ್ವಾಸರ ಆಗಮನವಾಗುತ್ತದೆ. ದೂರ್ವಾಸ ಮುನಿಗಳು ಸುಲಭವಾಗಿ ಕೋಪಿಷ್ಠರಾಗಿದ್ದರು, ಶಕುಂತಲೆಗೆ ತಾವು ಬಂದಿರುವುದು ಗೊತ್ತಾಗಲಿಲ್ಲವೆಂದು ತಿಳಿದು ಶಾಪ ಹಾಕಿದನು.

"ಆಃ! ಅತಿಥಿಯನ್ನು ಅವಮಾನಿಸಿದವಳೇ!!
ಯಾವನನ್ನು ನೆನೆದು
ಬೇರೆ ಯಾವುದನ್ನು ಲೆಕ್ಕಿಸದೇ
ತಪಸ್ಸಂಪನ್ನನಾದ ನಾನು ಬಂದುದನೂ
ಅರಿಯದಾದೆಯೇ, ಅಂತೆಯೇ
ಮಧುವಿನಿಂದ ಉನ್ಮತ್ತನಾದವನು
ಮೊದಲು ತಾನು ಆಡಿದ ಮಾತನ್ನು
ಮತ್ತು ಇಳಿದ ಮೇಲೆ ಮರೆಯುವಂತೆ
ನೀನು ಎಷ್ಟು ನೆನಪು ಮಾಡಿಕೊಟ್ಟರೂ
ಅವನು ನಿನ್ನನ್ನು ಅರಿಯದಿರಲಿ"

ದೂರ್ವಾಸ ಮುನಿಯ ಈ ಮಾತನ್ನು ಕೇಳಿದ ಪ್ರಿಯಂವದೆಯು ಓಡಿಹೋಗಿ ದೂರ್ವಾಸರ ಕಾಲಿಗೆ ಬಿದ್ದಳು. "ಸ್ವಾಮಿ ದಯಮಾಡಿ ಓಂದಿರುಗಿ ಆತಿಥ್ಯವನ್ನು ಸ್ವೀಕರಿಸಬೇಕು" ಎಂದು ದೈನ್ಯದಿಂದ ಕೇಳಿಕೊಂಡಳು. "ಆ ಮಾತನ್ನು ಕೇಳಬೇಕಾದವಳು ಕಣ್ವರ ಪ್ರತಿನಿಧಿಯಾಗಿರುವ ಶಕುಂತಲೆ, ನೀನಲ್ಲ" ಎಂದು ಗುಡುಗಿದರು ದೂರ್ವಾಸರು.

“ಸ್ವಾಮಿ ಚಿತ್ತವು ಅರಿತಂತೆ ಆಕೆಯ ದೇಹ ಪರ್ಣಶಾಲೆಯಲ್ಲಿದ್ದರೂ ಮನ ಅಲ್ಲಿಲ್ಲ.” ಅದು ಸಂಯಮದ ಲಕ್ಷಣವಲ್ಲ. ಯಾರೇ ಆಗಲಿ ತನ್ನನ್ನು ತಾನು ಮರೆಯುವ ನೆಲಗೆ ತಂದುಕೊಳ್ಳಬಾರದು.”

ಇರಬಹುದು, ಆದರೂ ಈಗ ಮತ್ತೊಮ್ಮೆ ಪ್ರಿಯಸಖಿಯರ ಅನುಮತಿಯನ್ನು ಕೇಳಲು ಇಚ್ಛಿಸುವೆನು.” “ಅದು ಪ್ರೇಮಿಗಳ ಸ್ವಾಭಾವಿಕ ಲಕ್ಷಣವಲ್ಲವೇ ಸ್ವಾಮಿ.” ಆ ಗುಣ ಪ್ರಿಯ ಪ್ರೇಯಸಿಯರಿಗೆ ಹೇಗೆ ಸ್ವಾಭಾವಿಕವೋ ಧರ್ಮನಿಷ್ಠೆಯೂ ಹಾಗೆ ಸ್ವಾಭಾವಿಕವಾಗಿ ಇರಬೇಕಾದುದು ಸಹಜವೆಂಬುದನ್ನು ನೀನು ಅರಿಯೆಯಾ? ತನ್ನ ಚಿಂತೆಯಲ್ಲಿ ಅನುದಿನದ ಕರ್ತವ್ಯ, ಕರ್ಮ, ಧರ್ಮ, ಆಚರಣೆಗಳನ್ನು ಮರೆಯಬಾರದು, ಮರೆತು ಧರ್ಮಲೋಪವನ್ನು ಎಸಗಿದರೂ ಪ್ರತಿಫಲವನ್ನು ಅನುಭವಿಸಲೇಬೇಕು.

“ಸ್ವಾಮಿ ತಮ್ಮ ಆಗಮನವನ್ನು ಅರಿತೂ ಆಕೆ ಅಪಚಾರವನ್ನು ಮಾಡಿದ್ದರೆ ಅಕ್ಷಮ್ಯವೇ ಹೌದು. ಆದರೆ ಅರಿಯದೆ ಮಾಡಿದ ಅವಳ ಪ್ರಥಮಾಪರಾಧವನ್ನು ಕ್ಷಮಿಸಲಾರಿರಾ?” ಎಂದು ಅಂಗಲಾಚಿ ಕೇಳಿಕೊಂಡಳು.”[೩೧]

ದೂರ್ವಾಸರು ಸಿಡುಕಿನ ಸ್ವಭಾವದವರಾದರೂ ಕರುಣೆಯ ಗುಣವನ್ನು ಅರಿಯದವರಲ್ಲ. ಕೋಪದಿಂದ ಅವರ ಹಾಲಿನಂತಹ ಮನಸ್ಸು ಕಾಯ್ದು ಕುದಿತವಾಗಿದ್ದರೂ, ಒಡೆದು ಹುಳಿಯಾಗಿ ಉಳಿಯಲಿಲ್ಲ. ಮನದ ಕಾಠಿಣ್ಯ ಮಂಜಿನಂತೆ ಕರಗಿ ಕರುಣೆಗೆ ಎಡೆಗೊಟ್ಟಿತು. ಪ್ರಿಯಂವದೆಯ ಬೇಡಿಕೆಗೆ ಕ್ಷಮಿಸಲಾರೆ ಎಂದು ನುಡಿಯಲಾರದೆ ಒಂದರೆಕ್ಷಣ ನಿಂತು. “ಬೆಂಕಿಗೆ ತಗುಲಿದ ಗಾಯ ಮಾಯಬಹುದಾದರೂ ಋಷಿಶಾಪಕ್ಕೆ ಗುರಿಯಾದ ಗಾಯ ಮಾಯಲಾರದು, ಆದರೂ ಗುರುತಿನ ಒಡವೆಯನ್ನು ನೋಡಿದಾಗ ಶಾಪವಿಮೋಚನೆಯಾಗಲಿ” ಎಂದು ನುಡಿದು ದೂರ್ವಾಸರು ಅಲ್ಲಿಂದ ಹೊರಟು ಹೋದುದಕ್ಕೂ ಪ್ರಿಯಂವದೆಯ ಬಳಿಗೆ ಅನುಸೂಯೆ ಬಂದುದಕ್ಕೂ ಒಂದಾಯಿತು.

ವಿಮೋಚನೆಯ ವಾಕ್ಯವನ್ನು ಕೇಳಿ ಅವಳ ಮನ ನೆಮ್ಮದಿಗೆ ಬಂದಿತು. ಪಟ್ಟಣಕ್ಕೆ ಹೊರಟಾಗ ಆ ರಾಜನು ತನ್ನ ನಾಮಾಕ್ಷರ ಮುದ್ರಿಕೆಯನ್ನು ತನ್ನನ್ನು ನೆನೆಯಲೆಂದು ತಾನೇ ಶಕುಂತಲೆಯ ಬೆರಳಿಗೆ ಇಟ್ಟಿದ್ದಾನೆ. ಆದ್ದರಿಂದ ಶಾಪನಿವೃತ್ತಿಯ ಉಪಾಯವು ಶಕುಂತಲೆಯ ಕೈಯಲ್ಲಿಯೇ ಇದೆ ಎಂದು ಭರವಸೆಗೊಂಡು ಅನಸೂಯೆ ಸಂತಸ ಹೊಂದಿದಳು. ಎಡದ ಕೈಯ ಮೇಲೆ ಕೆನ್ನೆಯನಿಟ್ಟು ಚಿತ್ರದಲ್ಲಿ ಬರೆದಿರುವಳಂತೆ ಇರುವಳು ನಮ್ಮ ಪ್ರಿಯಸಖಿ ಪತಿಯ ಚಿಂತೆಯಲ್ಲಿ. ತನ್ನ ನೆನಪು ತನಗೆ ಇಲ್ಲ. ಇನ್ನು ಬಂದ ಅತಿಥಿಯನ್ನು ಹೇಗೆ ತಾನೇ ಅರಿಯಬಲ್ಲಳು ಎಂದಳು ಪ್ರಿಯಂವದೆ. ಅದಿರಲಿ ಈ ವೃತ್ತಾಂತ ನಮ್ಮಿಬ್ಬರಲ್ಲೇ ಇರಲಿ ಎಂದಳು. ಹೀಗೆ ಶಕುಂತಲೆಗೆ ಆದ ಶಾಪವನ್ನು ಈ ಇಬ್ಬರು ತಿಳಿಸಲಿಲ್ಲ.

ಶಶಿ ಮುಳುಗಿದಮೇಲೆ
ನೆಯ್ದಿಲೆಯ ನೋಟವು
ಗೆಲವನ್ನು ತಾರದು.

ಈಗ ಅದರ ಸಿರಿ ಬರಿನೆನಹು
ಅಂತೆಯೇ ಪ್ರಿಯನ ಪಯಣದಿಂದ ಒದಶಿದ
ವಿರಹದ ನೋವನ್ನು ಪ್ರೇಯಸಿಯು ತಾಳುವುದು ಕಷ್ಟ (ಪು.ಸಂ.೬೬)

ಶಕುಂತಲೆಯು ದುಷ್ಯಂತನ ನೆನಪಿನಲ್ಲಿ ಕಾಲ ಕಳೆದಳು. ಒಂದು ದಿನ ಕಣ್ವರು ಆಶ್ರಮಕ್ಕೆ ಬಂದರು. ಪ್ರಿಯಂವದೆಗೆ ಮತ್ತು ಅನಸೂಯೆಯರು ಕಣ್ವರಿಗೆ ಶಕುಂತಲೆಯ ಗಾಂಧರ್ವ ವಿವಾಹದ ಬಗ್ಗೆ ತಿಳಿಸಲು ಮನದಲ್ಲೇ ಹೆದುರುತ್ತಿದ್ದರು, ಮಕ್ಕಳೇ ಶಕುಂತಲೆ ಎಲ್ಲಿ ಎಂದು ಕೇಳಿದರು.

ಪ್ರಿಯಂವದೆ:– "ಕರುಣಾಳು ತಂದೆ!
ನಿಮ್ಮ ಪುತ್ರಿಯು ಗಾಂಧರ್ವ ವಿವಾಹದಿಂದ
ದುಷ್ಯಂತನ ಕೈವಿಡಿದು
ಅಂತಶಿಖಿಯಾದ ಶಮಿಯಂತೆ
ಗರ್ಭವನ್ನು ಧರಿಸಿ ಚತುರ್ಮಾಸಾರ್ಧಂಗಳು ಕಳೆದಿರುವವು"

ಎಂದಳು. ಕಣ್ವರು ಮುಗುಳು ನಕ್ಕು, ಮಗಳನ್ನು ಕಾಣಲು ತಾವೇ ಹೊರಟರು. ಸಾಕು ತಂದೆಯಾದ ಕಣ್ವರನ್ನು ಕಂಡೊಡನೆ ಶಕುಂತಲೆಯು ಅವರ ಪಾದಗಳಿಗೆ ನಮಸ್ಕಾರ ಮಾಡಲು ಬಾಗಿದಳು. ಬಾಗಿದರೆಲ್ಲಿ ಮಗಳ ಒಡಲಿಗೆ ನೋವಾಗುವುದೆಂದು ಆತಂಕಿಸಿದ ತಂದೆ ಮಗಳ ತೋಳುಗಳನ್ನು ಹಿಡಿದೆತ್ತಿ ಅಪ್ಪಿಕೊಂಡರು. ಶಕುಂತಲೆಯು ನಾಚಿ ತಲೆತಗ್ಗಿಸಿದಳು. ಮುಖವನ್ನು ಕಣ್ವರ ಕರುಣೆಯ ಮಡಿಲಲ್ಲಿ ಹುದುಗಿಸಿದಳು. ಕಣ್ವರ ಹೃದಯ ತುಂಬಿ ಬಂದು ನನಗೆ ಎಲ್ಲಾ ಗೊತ್ತು ಮಗಳೆ ಒಳ್ಳೇ ಗಂಡನನ್ನೆ ನೀ ಪಡೆದಿರುವೆ. ಆಯ್ತು ನಾಳೆಯೇ ನಿನ್ನನ್ನು ನಿನ್ನ ಪತಿಯಲ್ಲಿಗೆ ಕಳುಹಿಸಿಕೊಡುವೆ. ಪ್ರಕೃತಿಯಲ್ಲಿ ಸಿಗುವ ಹೂಗಳಿಂದ ಶೃಂಗಾರಗೊಂಡ ಶಕುಂತಲೆಯು ಹೊರಡುವಳು.

"ಅಂದು ಶಕುಂತಲೆಯು ಪಯಣ ಬೆಳೆಸುವಳೆಂದು
ನೊಂದ ಅವರ ಮನ ಅಳಲಿನಿಂದ ತುಂಬಿ ತುಳುಕಿ
ಬಂದ ಕಣ್ಣೀರ ಬತ್ತಿ ತಡೆದು ಕಟ್ಟಿತು
ಮನದಲ್ಲಿ ವಾಸಿಸುವ ತಮಗೇ ಮಮತೆಯಿಂದ
ಈ ತೆರೆನಾದ ಮನದ ತಳಿರು ಏರ್ಪಡುವುದಾದರೆ
ಮಗಳನ್ನು ಮೊದಲಿಗೆ ಅಗಲುವ ತೊಂದರೆಯಿಂದ
ಸಂಸಾರಿಗಳು ಸಂಕಟ ಪಡುವುದು ಅದಾವತೆರನೊ?"[೩೨]

ಎಂದು ಚಿಂತಿಸುತ್ತಾ ಅವರು ಶಕುಂತಲೆ ಇದ್ದಲ್ಲಿಗೆ ಬಂದರು. ಶಕುಂತಲೆಯು ನಾಚಿ ಭಕ್ತಿಪೂರ್ವಕವಾಗಿ ತಂದೆಗೆ ವಂದಿಸಿದಳು.

"ಮಗಳೇ! ಯಯಾತಿಗೆ ಶರ್ಮಿಷ್ಠೆ ಎಂತು
ಪತಿಹಿತೆಯಾಗಿ ಪುರೂರವನ್ನು ಪಡೆದಳೋ
ಅಂತು, ದುಷ್ಯಂತನ ಹಿತವಂತೆಯಾಗಿ
ಸಾಮ್ರಾಟ ಪುತ್ರನನ್ನು ಪಡೆ"

ಎಂದು ಕಣ್ವರು ಆಶೀರ್ವದಿಸಿದರು. ಆ ಆಶೀರ್ವಾದಗಳನ್ನು ಸಾಕ್ಷಾತ್ ವರಗಳೆಂದು ಭಾವಿಸಿದಳು ಗೌತಮಿ.

ಅಂಚಿನಲ್ಲಿ ದರ್ಭೆಯ ಹುಲ್ಲನ್ನೂ
ಸಮಿಧೆಯನ್ನು ಹೊಂದಿ,
ವೇದಿಕೆಯ ಸುತ್ತಲೂ ವಿಧಿವತ್ತಾಗಿ ಬೆಳೆದು
ಹೋಮದ ವಾಸನೆಯ ಹೊಗೆಯಿಂದ
ಹೊಲ್ಲೆಹವನ್ನು ಹೋಗಲಾಡಿಸುವ,
ಆಗತಾನೇ ಹವಿಸ್ಸನ್ನು ಒಪ್ಪಿದ್ದ
ಬೇಳುವೆಯ ಅಗ್ನಿಗಳನ್ನು ತೋರಿಸಿ
"ಮಗಳೇ ಈ ಅಗ್ನಿಗಳನ್ನು ಪ್ರದಕ್ಷಿಣೆ ಮಾಡು"

ಎಂದರು ಕಣ್ವರು ಶಕುಂತಲೆಯೊಡನೆ ಮತ್ತಿತರು ಶಿಷ್ಯರೂ ಅಗ್ನಿ ಪ್ರದಕ್ಷಿಣೆಯನ್ನು ಮಾಡುತ್ತಿದ್ದಂತೆ.

"ಹೋಮಧೂಮ ಘ್ರಾಣಮಾತ್ರದಿಂದ
ಪಾಪ ಪರಿಹಾರಕವಾದ ವೈತಾನವಹ್ನಿಯು
ನಿನ್ನನ್ನು ಕಾಪಾಡಲಿ".

ಎಂದು ಕಣ್ವರು ಶಕುಂತಲೆಗೆ ಹರಸಿದರು.

ಬಳಿಯ ದೇವತೆಗಳಾದ ತಪೋವನತರುಗಳೇ!
ನಿಮ್ಮ ನೀರಡಿಕೆಯು ತೀರುವುದಕ್ಕೆ ಮುಂಚೆ
ತಾನು ನೀರಿನ ಕುಡಿಯ ನೆನೆಯದ–ಅವಳು,
ಬೆಡಗಿನ ಆಸೆ ಇದ್ದರೂ ಎಳೆಯ ತಳಿರನು
ನಿಮ್ಮ ಮೇಲಣ ಆಸೆಯಿಂದ ಚಿವುಟಿದ–ಅವಳು
ನೀವು ಹೂಬಿಡಲು ಮೊಗ್ಗು ಕಚ್ಚತೊಡಗುವ
ಮೊದಲ ದಿನಗಳಲ್ಲೇ ಹಬ್ಬ ಮಾಡುವಂತಹ–ಅವಳು
ಇಂದು ತನ್ನ ಗಂಡನ ಮನೆಗೆ ಹೊರಡುವಳು
ನೀವೆಲ್ಲಾ ಆಕೆಗೆ ಅಪ್ಪಣೆ ಕೊಡಿರಿ".

ಎಂದು ಕೇಳಿಕೊಂಡ ಆ ಆರ್ತೀಯ ಕರೆಗೆ–
ವನವಾಸಬಂಧುವಾದ ತರುವೃಂದವು
ಶಕುಂತಲೆಯ ಪಯಣಕ್ಕೆ
ಕೋಗಿಲೆಯ ಇನಿದನಿಯ
ಪಡಿನುಡಿಯಿಂದ ಅಪ್ಪಣೆ ಕೊಟ್ಟವು–

"ಮಗಳೇ, ಪ್ರಿಯಬಂಧುಗಳಂತಿರುವ ವನದೇವತೆಗಳಿಂದ ಅನುಜ್ಞೆ ಹೊಂದಿರುವೆ. ಅವರುಗಳಿಗೆ ನಮಸ್ಕರಿಸಿ ನಡೆ" ಎಂದಳು ವೃದ್ಧ ಗೌತಮಿ. ಕೋಗಿಲೆಯ ಇಂಚರದ ಪ್ರತಿಧ್ವನಿಯಿಂದ ಬೀಳ್ಕೊಟ್ಟ ಶಕುಂತಲೆಯ–

"ಪಯಣದ ಹಾದಿಯ ಅಲ್ಲಲ್ಲಿ
ಅಚ್ಚ ಹಸಿರ ತಾವರೆ ಅಡರಿ
ಸೊಗಸುವ ಕೆರೆಕಟ್ಟೆಗಳೂ
ತಾವರೆಯ ಕುಸುಮಪರಾಗ ಪರಿಮಳದಿಂದ
ಮೃದುವಾಗಿ ಬೀಸಿ ಬರುವ ಮಾರುತವೂ ಕೂಡಿ
ಮಾರ್ಗವೆಲ್ಲವು ಮಂಗಳಕರವಾಗಲಿ

ಎಂದು ಕಣ್ವರ ಮನ ಹಾರೈಸಿತು.

ಪತಿಯನ್ನು ಕಾಣುವ ಕುತೂಹಲ ಅತಿಯಾಗಿದ್ದರೂ ಆಶ್ರಮವನ್ನು ಬಿಟ್ಟು ಹೋಗಲು ಶಕುಂತಲೆಗೆ ಕಾಲುಗಳೇ ಬಾರವು. ತಪೋವನವನ್ನು ಬಿಟ್ಟು ಹೋಗುತ್ತಿರುವೆನೆಂಬ ದುಃಖ ಅವಳೊಬ್ಬಳಿಗೇ ಅಲ್ಲ. ಅವಳ ಅಗಲುವಿಕೆಯಿಂದ ತಪೋವನದ ಅವಸ್ಥೆಯೂ ಅಂತೆಯೇ,

ಮೆಲ್ಲುವ ಹುಲ್ಲನ್ನು ಉಗುಳುತಿಹವು ಹುಲ್ಲೆಗಳು
ನರ್ತನವನ್ನು ನಿಲ್ಲಿಸಿಹವು, ನವಿಲುಗಳು
ಬಾಡಿದ ತರಗುಗಳು ಉದಿರಿಸಿಹವು, ಬಳ್ಳಿಗಳು
ಕಣ್ಣೀರ ಸುರಿಸುವ ತೆರದಿ"[೩೩]
ಶಕುಂತಲೆಗೆ ಲತಾಭಗಿನಿಯ ನೆನಪು ಬಂದು ವನಜ್ಯೋತ್ಸ್ನೆಯ ಬಳಿಸಾರಿ.

"ಬನದ ಬೆಳದಿಂಗಳೇ! ಮಾಮರದೊಡನೆ ಕೂಡಿ ಇದ್ದರೂ ಈ ಕಡೆಯ ಕೊಂಬೆದೊಳಗಳಿಂದ ಎನ್ನನು ಅಪ್ಪಿಕೋ, ಇಂದಿನಿಂದ ಮುಂದೆ ಬಹುದೂರ ನೆಲಸುವಳಾಗುವೆನು ಎಂದು ಅಂಗಲಾಚುತ್ತಿದ್ದ ಶಕುಂತಲೆಯನ್ನು ಕುರಿತು.

ಮೊದಲಿನಿಂದಲೂ ನಾನು ಮಾಡಿದ
ತೀರ್ಮಾನದಂತೆ, ತಕ್ಕ ಅಂತಹ

ಪತಿಯನ್ನು ಪುಣ್ಯ ವಶದಿಂದ ಪಡೆದಿಹೆ
ಈ ಮಲ್ಲಿ(ಗೆ)ಯೂ ಮಾಮರವನು ಅಪ್ಪಿದಳು,
ಇನ್ನು ಇಬ್ಬರ ಬಗೆಗೂ ಎನಗೆ ಕಳವಳವಿಲ್ಲ
ನಡೆ ಪಯಣ ಬೆಳೆಸು "ಎಂದು ಕಣ್ವರೆಂದರು.

ಶಕುಂತಲೆಗೆ ತನ್ನ ಸೀರೆಯನ್ನು ಹಿಡಿದು ಎಳೆದಂತಾಯಿತು. "ಇದು ಯಾರು ನನ್ನ ಸೆರಗನ್ನು ಅಡಿಗಡಿಗೆ ಹಿಡಿದೆಳೆಯುವುದು" ಎಂದು ಹಿಂದಿರುಗಿ ನೋಡಿದಳು.

ಹುಣ್ಣನ್ನು ಮಾಯಿಸುವ ಇಂಗುದೀ ತೈಲವನ್ನು
ದರ್ಭಾಂಕುರವು ಚುಚ್ಚಿದ ಮುಖಕ್ಕೆ ಹಚ್ಚಿ
ಹಿಡಿಸಾವೆಯನ್ನು ತನ್ನ ಕೈಯಾರ ಊಡಿಸಿ
ತಾನೊಲಿದು ಬೆಳೆಸಿದ ಜಿಂಕೆಯ ಮರಿ!
ಅವಳ ಕರುಣೆಯ ಪೋಷಣೆಯನ್ನು ನೆನೆದು
ಆ ಜಿಂಕೆಯ ಮರಿ ಅಂದು, ಅವಳಿಗೆ ದಾರಿ ಬಿಡದು"[೩೪] (॥ಪು.ಸಂ. ೩೪)

ನಾವು ತಪ್ಪೋಧನರು,
ಬಂಧು ಜನಗಳ ಅನುಮತಿಯಿಲ್ಲದೆ
ಈಕೆಯು ನಿನ್ನಲ್ಲಿಟ್ಟ ನಿಷ್ಕಪಟ ಪ್ರೇಮ ಅಥವಾ
ಆತ್ಮಸಂತೋಷದಿಂದ ಆಕೆಯಲ್ಲಿ ನೀನಿಟ್ಟ ಸಹಜಪ್ರೇಮ
ಇವುಗಳೆನ್ನೆಲ್ಲಾ ಚೆನ್ನಾಗಿ ತಿಳಿದು ಇವಳನ್ನು ಸ್ವೀಕರಿಸಿ
ಆತನ ಮತ್ತಿತರ ಮಡದಿಗಳಂತೆ
ಈಕೆಯನ್ನೂ ಸರಿಸಮವಾಗಿ ಮಾನ್ಯ ಮಾಡುವುದು,
ಅದರಿಂದಾಚೆನದು ಅವಳ ಭಾಗ್ಯಕ್ಕೆ ಹೊಂದಿದುದು
ಹೆಣ್ಣಿನ ಬಂಧುಗಳು ಆ ಬಗೆಗೆ ಹೇಳತಕ್ಕದಲ್ಲ"

ಎಂದು ದುಷ್ಯಂತನಿಗೆ ಹೇಳಲೇಬೇಕಾಗಿದ್ದ ಹಿತವಚನಗಳನ್ನು ಆಜ್ಞಾಪಿಸಿ ಶಕುಂತಲೆಗೆ ಬುದ್ಧಿವಾದವನ್ನು ಹೇಳತೊಡಗಿದರು.

"ಮಗಳೇ
ನಿನ್ನ ಗಂಡನ ಮನೆಯನ್ನು ಸೇರಿ
ಹಿರಿಯರ ಊಳಿಗಗೆಯ್
ಪರಿಜನರನ್ನು ಆದರಿಸು,
ಪರಿವಾರವನ್ನು ಒಲಿಸಿಕೋ,
ಸಿರಿ ಬಂದಾಗ ಸೊಕ್ಕದಿರು

ಸವತಿಯರನ್ನು ಅಕ್ಕರೆಯ ಗೆಳತಿರೆಂದೇ ತಿಳಿ
ಗಂಡನು ದುಡುಕಿದರೂ
ಆತುರಪಟ್ಟು ತಿರುಗಿಬೀಳದಿರು,
ತಾಳ್ಮೆಯಿಂದ ತಗ್ಗಿನಡೆ
ಕೈಕೆಳಗಿನವರೆಗೆ ಕರುಣೆತೋರು,
ಈ ಬಗೆಯ ತರುಣಿಯರು ಗೃಹಿಣಿಯರು,
ಬೇರೆ ಬಗೆ ಬಯಸುವವರು
ಕುಲಕ್ಕೆ ಕೊಡಲಿ ಕಾವು ಆಗುವುದು"[೩೫]

ಈ ಬಗ್ಗೆ ಗೌತಮಿ ಇನ್ನೇನು ಹೇಳುವಳೋ ಕೇಳು ಎಂದು "ವನವಾಸಿಗಳಾದರೂ ಲೋಕದ ನಡವಳಿಕೆಯನ್ನು ಚೆನ್ನಾಗಿ ಬಲ್ಲ ಕಣ್ವರು ಹೇಳುತ್ತಿದ್ದಂತೆ, ಮೇಧಾವಿಗಳಿಗೆ ಅರಿಯದ ಹುರುಳಿಲ್ಲ ಗಂಡನ ಮನೆಗೆ ಹೋಗುವ ಹೆಣ್ಣಿಗೆ ಬುದ್ಧಿವಾದ ಅಷ್ಟೆ, ಮಗಳೇ ಅಪ್ಪಿಕೋ" ಎಂದು ಗೌತಮಿಯು ಹೇಳಿದಳು.

ಶಕುಂತಲೆಯಿಲ್ಲದ ಶೂನ್ಯವಾದಂತಿರುವ ತಪೋವನವನ್ನು ಹೇಗೆ ತಾನೇ ಪ್ರವೇಶಿಸುದು.? ಎಂದು ಅನಸೂಯೆ ಪ್ರಿಯಂವದೆಯರು ತವಕಪಟ್ಟರು. ಪ್ರೇಮದ ಪರಿಯೇ ಹೀಗೆ ಆದರೆ ಶಕುಂತಲೆಯನ್ನು ಪತಿಯ ಗೃಹಕ್ಕೆ ಕಳುಹಿಸಿಕೊಟ್ಟ ಕಣ್ವರಿಗೆ ಅದೆಷ್ಟೋ ನೆಮ್ಮದಿ.

"ಹೆಣ್ಣು ಹೆರನೊಡವ ಪತಿಯ ಬಳಿಗೆ ಅವಳನ್ನು ಇಂದು ಕಳುಹಿಸಿ
ಅಡವಿಟ್ಟು ಒಡವೆಯನ್ನು ಹಿಂದಿರುಗಿಸಿ ಕೊಟ್ಟಂತೆ
ಅವರ ಮನ ನಿರ್ಮಲವಾಯಿತು.

ಸರೋವರವನ್ನು ದಾಟಿದ ಶಾಙ್ರ್ಗರವ ಶಾರದ್ವತರು ವೃದ್ಧ ತಾಪಸಿ ಗೌತಮಿ ಹಾಗೂ ಗರ್ಭಿಣಿ ಶಕುಂತಲೆಯರೊಡನೆ ಕಾಲ್ನಡಗೆಯಲ್ಲಿ ಪಯಣವನ್ನು ಮುಂದುವರಿಸಿದರು. ಅಲ್ಲಿಂದ ಪ್ರತಿಷ್ಠಾನಪುರಕ್ಕಿದ್ದ ಎರಡು ಯೋಜನಗಳ ಪಯಣ ನಿಧಾನವಾಗಿ ಸಾಗಿ ಗಿರಿವನಗಳನ್ನು ದಾಟಿದರು. ನಡೆದು ಆಯಾಸವಾಯಿತು. ಸೂರ್ಯಾಸ್ತದಲ್ಲಿ ಕತ್ತಲು ಮುಸುಕಿತು. ರಾತ್ರಿಯನ್ನು ಕಳೆಯಲು ಶಕ್ರಾವತಾರಕ್ಷೇತ್ರದಲ್ಲಿ ತಂಗಿದರು ಅಲ್ಲಿ ತಂಗಿದ ಒಂದು ರಾತ್ರಿಯನ್ನು ಒಂದು ಯುಗದಂತೆ ಕಳೆದಳು ಶಕುಂತಲೆ.

ಮರುದಿನ ಮುಂಜಾನೆ ಶಕ್ರಾವತಾರಕ್ಷೇತ್ರದ ಶಚೀತೀರ್ಥದಲ್ಲಿ ಮಿಂದು ಮಡಿಯುಟ್ಟು ತೀರ್ಥವನ್ನು ವಂದಿಸಿ ಅವರೆಲ್ಲರೂ ಅಲ್ಲಿಂದ ಪಯಣ ಬೇಳೆಸಿದರು."[೩೬]

ಹೀಗೆ ಆಶ್ರಮದಲ್ಲಿರುವ ಎಲ್ಲರನ್ನು ಬಿಟ್ಟು ಶಕುಂತಲೆಯು ದುಷ್ಯಂತನ ಅರಮನೆಗೆ ಹೋದಳು. ಹೋಗುವ ದಾರಿಯಲ್ಲಿನ ಪ್ರಕೃತಿಯ ಸೊಬಗನ್ನು ಲೇಖಕರು ವರ್ಣಿಸಿದ್ದಾರೆ. ಗೌತಮಿ ಮತ್ತು ಋಷಿಮುನಿಗಳು. ಶಕುಂತಲೆಯು ಶಚೀತೀರ್ಥದ ನದಿಯನ್ನು ತಡೆಯುವಾಗ ಶಕುಂತಲೆಯು

ದುಷ್ಯಂತನನ್ನು ಹಿಂದೆ ಕಂಡಂತಹ ಚಿತ್ರಣವನ್ನು ನೆನಪಿಸಿಕೊಳ್ಳುತ್ತಾ ಹೋಗುವಳು. ಶಚೀತೀರ್ಥದಲ್ಲಿ ಹೋಗುವಾಗ ದೋಣಿಯಿಂದ ಕೈ ಬೆರಳನ್ನು ನೀರಿನಲ್ಲಿ ಎದ್ದಿದ್ದಳು. ಕೈಯ ಬೆರಳಲ್ಲಿದ್ದ ಉಂಗುರ ಸಡಿಲವಾಗಿ ಜಾರಿ ನದಿಯಲ್ಲಿ ಬಿದ್ದಿತು. ಬಿದ್ದ ಉಂಗುರ ಮೀನಿನ ಹೊಟ್ಟೆಯನ್ನು ಸೇರಿತು. ಶಕುಂತಲೆಯ ಗಮನ ದುಷ್ಯಂತನಲ್ಲಿ ಅಡಕವಾಗಿದ್ದರಿಂದ, ಉಂಗುರ ಬಿದ್ದಿದು ನೆನಪಾಗಲಿಲ್ಲ. ಕನಸಿನ ಲೋಕದಲ್ಲೇ ನದಿಯನ್ನು ದಾಟಿದಳು. ಮುಂದೆ ದಡದಲ್ಲಿ ಹೋಗಿ ಇಳಿದು ದುಷ್ಯಂತನ ಅರಮನೆಗೆ ಹೋದರು. ಸನ್ನಿವೇಶಗಳು ಓದುಗರನ್ನು ಕಲ್ಪನಾಲೋಕಕ್ಕೆ ಕರೆದುಕೊಂಡು ಹೋಗುತ್ತವೆ.

**ತಳ್ಳು**

ಶಾಕುಂತಲ ಕಾದಂಬರಿಯಲ್ಲಿ ಬರುವ ಐದನೇ ಭಾಗ ತಳ್ಳು. ತಳ್ಳು ಎಂದರೇ ನೂಕು, ದೂಡು, ತೇಜಿಸು ಜರಿದುಬಿಡು, ನಿರಾಕರಣ, ಪರಿತ್ಯಾಗ ಎಂಬ ಅರ್ಥಗಳಿವೆ. ಅಭಿಜ್ಞಾನ ಶಾಕುಂತಲ ನಾಟಕದ ೫ನೇ ಅಂಕವನ್ನು ಕಾದಂಬರಿಯಲ್ಲಿ ಲೇಖಕರು ಐದನೇ ಭಾಗ ಮಾಡಿಕೊಂಡಿದ್ದಾರೆ. ಶಕುಂತಲೆಯ ತಿರಸ್ಕಾರವೇ ಈ ಭಾಗದ ಪ್ರಮುಖ ಅಂಶವಾಗಿದೆ.

ಚಳಿಗಾಲದ ಮೊದಲ ಸಂಜೆಯಲ್ಲಿ ದುಷ್ಯಂತನು ಮಿತ್ರ ಮಾಢವ್ಯನ ಜೊತೆಯಲ್ಲಿ ಪ್ರತಿಷ್ಠಾನಪುರದ ತನ್ನ ಅರಮನೆಯ ಆವರಣದ ಶಿಲಾಪೀಠದ ಮೇಲೆ ಕುಳಿತು ನೀಲಾಕಾಶದ ಎದ್ದು ಕಾಣುವ ಭವ್ಯ ಪ್ರಾಸಾದಗಳ ಗುಮ್ಮಟಾಕಾರದ ಪ್ರತಿರೂಪಗಳನ್ನೂ ಪರ್ವತಗಳ ಛಾಯಾಪಂಕ್ತಿಗಳನ್ನು ಅವಲೋಕಿಸುತ್ತಿದ್ದನು. ಆ ಸಮಯದಲ್ಲಿ ಶಕುಂತಲೆ, ಋಷಿಮುನಿಗಳು ಮತ್ತು ಗೌತಮಿಯು ಅರಮನೆಗೆ ಬಂದರು.

"ಅಲ್ಲಿ ಶಾರದ್ವತ ಹೇಳುವ ಮಾತು
ಈ ದೊರೆಯು ಸಿರಿವಂತನಾದರೂ
ಮರ್ಯಾದೆಯನ್ನು ಮೀರಿದವನು;
ಈತನ ರಾಜ್ಯದಲ್ಲಿ ವರ್ಣದೊಳು
ಅಧಮನೂ ಕುಪಥದಲ್ಲಿ ನಡೆಯನು;
ಆದರೂ ಏಕಾಂತವಾಸದಲ್ಲಿ
ಯಾವಾಗಲೂ ಪಳಗಿದ ನನ್ನ ಮನಸ್ಸಿಗೆ
ಈ ಜನಗಳ ಕೂಟ
ಉರಿಬಿದ್ದ ಏನದಂತೆ ತೋರುವುದು"[೩೭]

ಈ ಮಾತುಗಳನ್ನು ಗಮನಿಸಿದರೆ ನಾಡಿಗಿಂತ ಕಾಡೇ ಮುಖ್ಯ ಎನ್ನಬಹುದು. ಪ್ರಕೃತಿ ಮಡಿಲಲ್ಲಿ ಬೆಳೆದಿರುವ ತಾಪಸಿಗಳು ನಾಡಿಗೆ ಹೊಂದಿಕೊಳ್ಳುವುದು ಕಷ್ಟವೇ ಎಂಬ ಮಾತಿನ ಅರ್ಥವಾಗಿದೆ. ದುಷ್ಯಂತ ಮಹಾರಾಜನನ್ನು ಕುರಿತು ಕಣ್ವರು ಹೇಳಿದ ಮಾತುಗಳನ್ನು ದುಷ್ಯಂತನಿಗೆ

ಹೇಳಿದರು. ಪರಸ್ಪರ ಇಬ್ಬರೂ ಪ್ರೀತಿಸಿ ಸಂಧಿಸಿರುವುದರಿಂದ ನನ್ನ ಮಗಳನ್ನು ತಾವು ವರಿಸಿದ್ದೀರಿ. ಆದ್ದರಿಂದ ಹೆಣ್ಣು ಗಂಡನ ಮನೆಯಲ್ಲಿರುವುದು ಭಾರತೀಯ ಸಂಸ್ಕೃತಿ. ಅದರಂತೆ ಕಳಿಸಿಕೊಟ್ಟಿದ್ದೇನೆ.

"ಯೋಗ್ಯರಲ್ಲಿ ಮೊದಲಿಗರು ನೀವು;
ಶಕುಂತಲೆಯೋ ಒಳ್ಳೆಡೆಯೆ ಮೆಯ್ವೆತ್ತವಳು,
ಸಮಶೀಲವುಳ್ಳ ವದುವರರನ್ನು
ಜೊತೆಮಾಡಿದ ಬೊಮ್ಮನು
ಬಹುಕಾಲದಿಂದ ಬಂದ ಜನಾಪವಾದವನ್ನು
ಈಗಲೀಗ ಕಳೆದುಕೊಂಡನು;
ಆದುದರಿಂದ ಗರ್ಭವತಿಯಾದ ಇವಳನ್ನು
ಧರ್ಮಾಚರಣೆಗೆ ಸ್ವೀಕರಿಸಬೇಕು"[೩೮] ಎಂದು ಹೇಳಿಕೊಂಡರು.

ಶಾಙ್ಗ್ರರವನು ಹೇಳಿದ ಮಾತಿಗೆ, ದುಷ್ಯಂತನು ನಾನು ಯಾರನ್ನು ವರಿಸೆಯಿಲ್ಲ ಎಂದನು. ಪತಿಯುಳ್ಳ ಸತಿ ತವರಿನಲ್ಲಿ ನೆಲಸಿದರೆ ಪತಿವ್ರತೆಯಾಗಿದ್ದರೂ, ಲೋಕವು ಹಳೆಯುವುದು ಸತಿಯೇ ಅಹಿತೆಯಾದರೂ ಅವನೊಡನೆ ಅವಳು ಇರಬೇಕೆಂಬುದು ಬಂಧು ಜನಗಳ ಆಶ್ರಯ ಎಂದು ಹೇಳಿದನು. ಶಾಙ್ಗ್ರರವನು ಹೀಗೆ ಅನೇಕ ರೀತಿಯಲ್ಲಿ ದುಷ್ಯಂತನಿಗೂ ಗೌತಮಿಗೂ ಋಷಿಮುನಿಗಳಿಗೂ ವಾದ ನಡೆಸುವರು. ಅದಕ್ಕೆ ಪ್ರತಿರೂಪದಲ್ಲಿ ಮಹಾರಾಜ ಉತ್ತರ ಕೊಟ್ಟು ಪತಿಯನ್ನೂ ಶಕುಂತಲೆಯನ್ನು ತಿರಸ್ಕರಿಸುವನು. ಕೊನೆಯದಾಗಿ ದೊರೆಯೇ, ಇವಳು ನಿನ್ನ ಮಡದಿ ಕೊಳ್ಳು ಇಲ್ಲವೇ ತಳ್ಳು, ಮಡದಿಯ ಮೇಲಣ ಗಂಡನ ಹಕ್ಕು ಇದೆ ಎಂದು ಹೊರಡುವರು. ಶಕುಂತಲೆಯು ಕೋಮಲೆಯು ಆದ ಇವಳಿಗೆ ದಿಕ್ಕೇ ತೋಚದಂತೆ ಆಗಿ, ಈ ಭೂತಾಯಿಯೇ ಬಾಯಿ ತೆರೆ, ನಾನು ಇಲ್ಲೇ ಬಿದ್ದು ಸಾಯುವೇ ಎಂದು ಮೂರ್ಛೆ ಹೋಗುವಳು. ಅದೇ ಸಮಯದಲ್ಲಿ ಶಕುಂತಲೆಯ ತಾಯಿಯಾದ ಮೇನಕೆಯು ಬಂದು ಹೊತ್ತು ಯಾರಿಗೂ ಕಾಣದಂತೆ ಮಾಯವಾಗುವಳು. ಹೀಗೆ ಈ ಅಂಕವು ಕೊನೆಗೊಳ್ಳುತ್ತದೆ.

**ಹೊದಕುಳಿ:–** ಹೊದಕುಳಿ ಎಂದರೇ, ದುಃಖ, ಚಿಂತೆ, ಬೇಗುದಿ, ಬೇಸರಿಸು, ಉಮ್ಮಳ, ಅಗಲಿಕೆ, ಪರಿತಾಪ, ವಿರಹ, ಎಂಬ ಸಮಾನಾರ್ಥಕ ಪದವನ್ನು ನೋಡಬಹುದು. ಈ ಭಾಗದಲ್ಲಿ ಶಕುಂತಲೆಯ ಕೈಯಲಿದ್ದ ಉಂಗುರ ಬೆಸ್ತರವನಿಗೆ ದೊರೆತು ದುಷ್ಯಂತನಿಗೆ ಶಕುಂತಲೆಯ ನೆನಪು ಬರುವಂತೆ ಮಾಡುವುದು, ಅಲ್ಲಿಂದಲೇ ದುಷ್ಯಂತನ ವಿರಹ, ಶಕುಂತಲೆಯ ವಿರಹವನ್ನು ಲೇಖಕರು ತಮ್ಮ ಕಾದಂಬರಿಯಲ್ಲಿ ಬರೆದಿದ್ದಾರೆ. ಮುಖ್ಯವಾಗಿ ಬೆಸ್ತನ ವಿವರಣೆಯು ಸಿನಿಮಾಕ್ಕಿಂತ, ನಾಟಕಗಿಂತ, ಕಾದಂಬರಿಯ ಬರವಣಿಗೆ ಓದುಗರ ಕಲ್ಪನೆಗೆ ನಿಲುಕುವುದಾಗಿದೆ. ಅನೇಕ ರೀತಿಯಲ್ಲಿ ಕಲ್ಪನೆಯು ಗರಿಬಿಚ್ಚಲು ಈ ಸನ್ನಿವೇಶ ಕಾರಣವಾಗುತ್ತದೆ.

ಸಾಹಿತ್ಯ ಕೃತಿಯಲ್ಲಿ ಬರುವ ಸನ್ನಿವೇಶಗಳು ಓದುಗರ ಅನುಭವಕ್ಕೆ, ಕಲ್ಪನೆಗೆ, ಅನುಗುಣವಾಗಿ ಓದುಗರಲ್ಲಿ ಮೂಡುತ್ತದೆ. ಹಾಗೆಯೇ ಹೊದಕುಳಿಯಲ್ಲಿ ದುಷ್ಯಂತ ಶಕುಂತಲೆಯ ವಿರಹವನ್ನು ಮುಖ್ಯವಾಗಿ ಇದೊಂದು ಮರುಬರವಣಿಗೆಯಾಗಿದೆ ಎಂದು ಹೇಳಬಹುದು.

ಉದಾಹರಣೆಗೆ: (ಪು.ಸಂ. ೯೯) ಜಾನುಕ–ಸೂಚಕರೆಂಬ ತಳವಾರರು ಬೀದಿಯಲ್ಲಿ ಲೇಕಳ್ಳ ಹೆಸರು ಕೆತ್ತಿದ ರತ್ನ ಕಟ್ಟಿನ ರಾಜಮುದ್ರಿಕೆಯು ನಿನಗೆಲ್ಲಿಂದ ಬಂತು? ಬೇಗ ಹೇಳು"– ಎಂದು ಹಿಂಗಂಟ್ಟು ಮುರಿಯ ಧೀವರನನ್ನು ತಾಡಿಸಿ ಗದರಿಸಿದರು.

"ಕೊತ್ವಾಲಣ್ಣಾ ದಮ್ಮಯ್ಯಾ! ದಯವಿಡಬೇಕು, ನಾನಂಥ ಕೆಲ್ಸಾ ಮಾಡೋನಲ್ಲಾ" ಎಂದು ಮುಂದೆ ಮುಂದೆ ನಡೆಯುತ್ತಿದ್ದ ಕೊತ್ವಾಲ ಶ್ಯಾಲಕನಿಗೆ ಭಯ ಭಕ್ತಿಯಿಂದ ಬೇಡಿದನು ಧೀವರ. ಹೀಗೆ ರಾಜಬೀದಿಯಲ್ಲಿ ಮೀನುಗಾರರನ್ನು ಒದೆಯುತ್ತ ಅರಸನ ಅರಮನೆಗೆ ಕರೆದುಕೊಂಡು ಹೋದರು. ದುಷ್ಯಂತ ಮಹಾರಾಜನಿಗೆ ಈ ಉಂಗುರ ತೋರಿಸಿದ ತಕ್ಷಣ ಶಕುಂತಲೆಯ ನೆನಪು ಬರುತ್ತದೆ. ಅಲ್ಲಿಂದ ಶಕುಂತಲೆಯನ್ನು ಹುಡುಕಲು ವಿರಹದ ಬೇಗೆಯಲ್ಲಿ ಬೆಂದ ದುಷ್ಯಂತ ಇರುವುದನ್ನು ಈ ಭಾಗದಲ್ಲಿ ಲೇಖಕರು ತಿಳಿಸಿದ್ದಾರೆ.

**ಒಳ್ಪು:** ಇದು ನಾಟಕದ ಏಳನೇ ಅಂಕದಂತೆ, ಕಾದಂಬರಿಯಲ್ಲಿಯೂ ಏಳನೇ ಭಾಗವಾಗಿದೆ. ಒಳಿತು ಎಂದರೆ ಲೇಸು, ಕಲ್ಯಾಣ, ರಮಣೀಯ ಪರಿಣಾಮ(ದಿಟಕೂಟ, ಪುನಸ್ಸಮಾಗಮ ಫಲಪ್ರಾಪ್ತಿ) ದುಷ್ಯಂತ–ಶಕುಂತಲೆಯರು ಪುನಃ ಒಂದಾಗುವ ಸನ್ನಿವೇಶವನ್ನು ಈ ಭಾಗದಲ್ಲಿ ವಿಶ್ಲೇಷಿಸಿದ್ದಾರೆ.

ಇಂದ್ರಲೋಕಕ್ಕೆ ಹೋದ ದುಷ್ಯಂತನು, ಕೆಲ ಕಾಲದಲ್ಲೇ ಕಾಲನೇಮಿಯ ಕುಲದ, ದಿಗಿಲುತಂದ ದೈತ್ಯರ ವಿರುದ್ದ ದಂಡೆತ್ತಿ ಹೋಗಿ(ರಾಕ್ಷರ ವಿರುಧ್ಧ) ತನ್ನ ತೋಳಬಲದಿಂದಲೂ, ಮುಂದಾಳುತನದಿಂದಲೂ ದೇವತೆಗಳಿಗೆ ಗೆಲುವನ್ನು ತಂದುಕೊಟ್ಟನು. ದುಷ್ಯಂತನ ಗೆಲುವಿನ ಗುರುತಿಗಾಗಿ, ಸ್ವರ್ಗದಲ್ಲಿ ಅವನಿಗೆ ಸತ್ಕಾರ ಸಮಾರಂಭ ನಡೆದು ಹಬ್ಬದ ಔತಣ ಏರ್ಪಾಟಾಯಿತು. ನಂತರ ಇಂದ್ರನಿಂದ ಬೀಳ್ಕೊಂಡ ದುಷ್ಯಂತನು ಮಾತಲಿಯು ನಡೆಸುವ ಇಂದ್ರನ ವಾಯುರಥವನ್ನು ಏರಿ ಗಗನಗಾಮಿಯಾದನು ಅಂದರೆ ಗಾಳಿಯಲ್ಲಿ ತೇಲುವ ರಥವನ್ನು ಹತ್ತಿಕೊಂಡು ನಕ್ಷತ್ರ ಲೋಕವನ್ನು ಹಿಂದಾಕಿ ಭೂಲೋಕಕ್ಕೆ ಬರುವಾಗ ಈ ರೀತಿ ಹೇಳುವನು.

"ಮೇಲೇಳುವ ಮಲೆಯ ತುದಿಯಿಂದ
ಕೆಳಗೆ ಬೀಳುವಂತೆ ಕಾಣುವುದು ಬುವಿಯು,
ತಮ್ಮ ಎಲೆಗಳಲ್ಲಿ ಮರೆಯಾಗಿದ್ದ
ಮರಗಳ ಕೊಂಬೆಗಳು ಕಾಣತೊಡಗಿವೆ,
ಕುಗ್ಗಿ, ನೀರು ತೋರುವ

ನೂಲಿನ ಎಳೆಯಂತೆ ಇದ್ದ ನದಿಗಳು
ಹಿಗ್ಗಿ, ಹೊಳೆಯಾಗಿ ಹೊರಳಿ ತಿಳಿಯುತ್ತಿವೆ
ಯಾರೋ ಎತ್ತಿ ಎಸೆದು
ನನ್ನ ಅರುಗಿನಲ್ಲಿ ಬರುವ ಹಾಗೆ"[೩೯] (ಪು.ಸಂ.೧೩೩)

'ತೋರುವುದು ಈ ಬುವಿಯು' ಎಂದು ಮಾತಲಿ ದುಷ್ಯಂತನಿಗೆ ಹೇಳಿದನು. ಚೆನ್ನಾಗಿ ಬಣ್ಣಿಸಿದೆಯಾ, ನಿಜಕ್ಕೂ (ಮಿಗೆ) ಭೂಮಿ ಅಂದವಾಗಿ ತೋರುವಳು ನೆಲವೆಣ್ಣು ಎಂದನು ದುಷ್ಯಂತನು.

"ಮೂಡಲು ಪಡವಲು ಕಡಲುಗಳಲಿ
ಕಾಲೂರಿ ನಿಂತು
ಮುಸ್ಸಂಜೆಯ ಮುಗಿಲ ಮಾಲೆಯಂತೆ
ಹೊಂಬಣ್ಣವನು ಹೊರಚೆಲ್ಲುವ
ಆ ಕುಂದಾವುದು ಮಾತಲ್ಲಿ?
ಎಂದು ಕೇಳಿದ ದುಷ್ಯಂತನಿಗೆ.
"ಚಿರಂಜೀವಿಯೇ
ಅದು ಕಿಂಪುರುಷರು ಕುಡಿಯಿರುವ
ಹೇಮಕೂಟ ಮಹಾಪರ್ವತವು, । ನೋಡಲ್ಲಿ ।
ಮುನಿವರರು, ಸಿದ್ಧಿ ಸಾಧಿಸುವ ಕ್ಷೇತ್ರ
ಬ್ರಹ್ಮನ ಮಗನು ಮರೀಚಿ,
ಮರೀಚಿಯ ಮಕ್ಕಳೂ ಸುರಾಸುರರ ತಂದೆಯವರೂ
ಆದ ಪ್ರಜಾಪತಿಗಳು, ಮಡದಿಯೊಡನೆ
ತಪಗೆಯ್ಯುತಿಹರು"[೪೦]

ಮಾತಲಿ ಮಾರೀಚರ ದರ್ಶನ ಪಡೆಯುವ ಕಾಲ ಒದಗಿ ಬಂದುದಕ್ಕೆ ಕಾತರಿಸಿ ಆಶ್ರಮಕ್ಕೆ ದುಷ್ಯಂತನು ಹೋದನು. ಅಲ್ಲಿಯೇ ಸಿಂಹದ ಮರಿಯೊಂದಿಗೆ ಬಾಲಕನೊಬ್ಬ ಆಟ ಆಡುವ ಮಾತನ್ನು ಕೇಳಿ ಅಲ್ಲಿಗೆ ಹೋದನು. ಅಲ್ಲಿ ಅನೇಕ ಲಕ್ಷಣಗಳು ಆ ಮಗುವಿನಲ್ಲಿ ಕಂಡ ದುಷ್ಯಂತನು ದಾಸಿಯರೊಂದಿಗೆ ಬೆರೆತು ಬಂದ ಶಕುಂತಲೆಯನ್ನು ಅಲ್ಲಿ ಕಂಡನು.

"ದೂಳು ಹಿಡಿದ ಜೋಡಿ ನಾರುಡೆಯ ಉಟ್ಟು
ನೇಮದಿಂದ ಸೊರಗಿದ ಮೊಗದೊಡನೆ
ಜಿಡ್ಡು ಕಟ್ಟಿದ ಎಣೆಕೂದಲ
ಜಡೆಮುಡಿಯ ಗಂಟಿಕ್ಕಿದ ಅವಳು
ಕರುಣೆ ಇಲ್ಲದ ನನ್ನಿಂದಾಗಿ ಅಗಲಿ"[೪೧]

ನಿಡಿದಾದ ವಿರಹದ್ರತವ ತಳೆದಿರುವ ಅವಳು ತನ್ನ ಶಕುಂತಲೆ ಎಂದೇ ಗುರುತಿಸಿದನು. ಅವರಿಬ್ಬರಲ್ಲಿ ಕೆಲವು ಲಕ್ಷಣಗಳನ್ನು ಗುರುತಿಸಿಕೊಳ್ಳುತ್ತಿದ್ದರು. ನಂತರ ಉಂಗುರವನ್ನು ದುಷ್ಯಂತ ತೋರಿಸಿದನು. ಶಕುಂತಲೆಯು ಇದೇ ಉಂಗುರವೇ ಕಳೆದು ಹೋಗಿದ್ದರಿಂದ ಈ ತೊಂದರೆ ನಮಗೆ ಎದುರಾಯಿತು ಎಂದಳು. ಈ ಉಂಗುರ ಬೆಸ್ತನಿಂದ ನನಗೆ ದೊರೆಯಿತು. ಅಲ್ಲಿಂದ ನಿನ್ನ ನೆನಪಿನಲ್ಲಿಯೇ ಕಾಲ ಕಳೆದಿದ್ದೇನೆ ಎಂದು ದುಷ್ಯಂತ ಹೇಳಿದನು. ನಂತರ ದೊರೆಯು ಆ ಉಂಗುರವನ್ನು ಮತ್ತೆ ಶಕುಂತಲೆಗೆ ಕೊಡಲು ಹೋದರೆ ಅದನ್ನು ತಿರಸ್ಕರಿಸುವಳು. "ಒಳ್ಳೆಯ ವೇಳೆಯಲ್ಲಿ ಧರ್ಮಪತ್ನಿಯ ಒಡಗೂಡಿ, ಮಗನ ಮೊಗವ ಕಂಡು, ಚಿರಂಜೀವಿಗಳ ಹರುಷ ಹೆಚ್ಚಲಿ" ಎಂದು ಮಾತಲಿ ಮನಸಾರೆ ಹಾರೈಸಿದನು. ದುಷ್ಯಂತ, ಶಕುಂತಲೆ ಸರ್ವದಮನ ಇವರಿಗೆ ದ್ರಾಕ್ಷಣೆಯು ಮಾರೀಚರು ಅರ್ಶೀವದಿಸಿ ಹಾರೈಸಿದರು. ಕೊನೆಯದಾಗಿ ದುಷ್ಯಂತ ಆ ಉಂಗುರದ ದರ್ಶನದಿಂದ ಪುನಃ ನೆನಪಿಗೆ ಬಂತು ಎಂದನು. ಇದೆಲ್ಲಾ ದುರ್ವಾಸ ಮುನಿಯ ಶಾಪದಿಂದ ಹೀಗಾಗಿತ್ತು ಎಂದು ಶಕುಂತಲೆಯು ಹೇಳುತ್ತಾಳೆ. ಶಕುಂತಲೆಯ ತಾಯಿಯಾದ ಮೇನಕೆಯು ಇಲ್ಲಿಗೆ ತಂದಿರುವಳು. ಇವರಿಬ್ಬರ ಕೂಡುವಿಕೆಯನ್ನು ಕಣ್ವ ಋಷಿಮುನಿಗಳಿಗೆ ತಿಳಿಸಬೇಕು ಎಂದು ಮಾರೀಚರು ಹೇಳಿದರು. ಗಾಲವನನ್ನು ಕರೆದು ಕಣ್ವ ಋಷಿಮುನಿಗಳಿಗೆ ತಿಳಿಸಿ ಎಂದು ಹೇಳಿದರು. ನಂತರ ಗಂಡ ಹೆಂಡತಿ ಮಗನೊಂದಿಗೆ ಇಂದ್ರನ ರಥವನ್ನೇರಿದರು.

"ನಾಡ ಮಕ್ಕಳ ನಲ್ಮೆಗೆ ಮನ್ನೆಯನು ದುಡಿಯಲಿ
ಕಲಿತ ಕನ್ನಡ ಕಲಿಗಳ ನುಡಿಗೆ ಮನ್ನಣೆ ಸಿಗಲಿ
ತಂತಾನ್ ಆಗಿರುವ ಬಲ್ಮೆ ಯೊಡಗೂಡಿದ
ಮಂಗಳಾಂಗನು ನನ್ನ ಮರುಹುಟ್ಟ ಅಳಿಸಲಿ

ಕೊನೆಯದಾಗಿ ಕಾದಂಬರಿಯಲ್ಲಿ ಲೇಖಕರು ನಾಲ್ಕು ಸಾಲುಗಳನ್ನು ಬರೆದಿದ್ದಾರೆ.

ಅರಿತರು ಮೆಚ್ಚಿ ಹೊಗಳುವವರೆಗೆ ಈ ಶಾಕುಂತಲ
ಕಾದಂಬರಿ- ಕಾವ್ಯಕೊರತೆ ಅರತಿದಾಗಿ ನಂಬೆನು
ಹಿರಿದಾದ ಕಲಿಕೆ ಉಳ್ಳವರಿಗೂ, ಕಿರಿದಾದ"[೪೨]

ಒಳಗಿನ ತಳರು ಇರುವುದು ತನ್ಮೆಯೇ ಎನ್ನುವನು. ಶಾಕುಂತಲ ಕಾದಂಬರಿಯ ಸೂತ್ರಕಾರರಾದ ಸಿ. ನಟರಾಜ ಕಾಳಿದಾಸ ಅಭಿಜ್ಞಾನ ಶಾಕುಂತಲದ ಕಥಾವಸ್ತುವನ್ನು ಬಳಸಿಕೊಂಡು ತಮ್ಮ ಸ್ವಂತಿಕೆಯನ್ನು ಸಹ ಬಳಸಿಕೊಂಡು ಈ ಕಾದಂಬರಿಯನ್ನು ಬರೆದಿದ್ದಾರೆ.

**ಕವಿತೆಗಳು**

ಅಭಿಜ್ಞಾನ ಶಾಕುಂತಲ ನಾಟಕದ ಕಥಾವಸ್ತುವನ್ನು ಬಳಸಿಕೊಂಡು ಕನ್ನಡ ಸಾಹಿತ್ಯ ಲೋಕದಲ್ಲಿ ಕೆಲವು ಕವಿಗಳು ತಮ್ಮ ಕವಿತೆಗಳ ಮೂಲಕ ಓದುಗರಿಗೆ ಅರ್ಥೈಸಲು ಮಾಡಿದ

ಪ್ರಯತ್ನ ತುಂಬಾ ಉಪಯುಕ್ತವಾಗಿದೆ. 'ಅಭಿಜ್ಞಾನ ಶಾಕುಂತಲ ನಾಟಕ'ವು ಆಧುನಿಕ ಸಂದರ್ಭದಲ್ಲಿ ಅನೇಕ ಕಾವ್ಯ ಕೃತಿಗಳಿಗೆ ಪ್ರೇರಣೆ ನೀಡಿದೆ. ಸಮೇತನಹಳ್ಳಿ ರಾಮರಾಯರು 'ಶಾಕುಂತಲ' ಎಂಬ ದೀರ್ಘ ಕಾವ್ಯವೊಂದನ್ನು ರಚಿಸಿದ್ದಾರೆ. ಮೂಲವಸ್ತುವಿನಿಂದ ಅನೇಕ ಬದಲಾವಣೆ ಮಾಡಿಕೊಂಡು, ಕುವೆಂಪು ಅವರ ಶ್ರೀ ರಾಮಾಯಣ ದರ್ಶನಂ ಕೃತಿಯನ್ನು ಭಾಷೆ ಶೈಲಿಯಲ್ಲಿ ಅನುಕರಿಸುವ ಈ ಕೃತಿಯು ಸಾಹಿತ್ಯಕ ಮಹತ್ವ ಏನೇ ಇರಲಿ, ಕಾಳಿದಾಸನ ಕೃತಿಯೊಂದರಿಂದ ಸೃಷ್ಟಿಶೀಲ ಪ್ರೇರಣೆ ಪಡೆದು ಈ ಶತಮಾನದಲ್ಲಿ ರಚನೆಯಾದ ಅತ್ಯಂತ ದೀರ್ಘಕೃತಿ ಈ 'ಶಾಕುಂತಲ' ಕಾವ್ಯ.

ಜಿ.ಎಸ್.ಶಿವರುದ್ರಪ್ಪನವರು 'ಶಾಕುಂತಲ ಸಂಧ್ಯೆ', 'ಶಾಕುಂತಲದ ಐದನೇ ಅಂಕ' ಎಂಬ ಎರಡು ಕವಿತೆಯನ್ನು ಬರೆದಿದ್ದಾರೆ. ಶಾಕುಂತಲ ಸಂಧ್ಯೆ ಶಾಕುಂತಲ ನಾಟಕದ ಒಂದು ದೃಶ್ಯವನ್ನು ಪ್ರಕೃತಿವ್ಯಾಪಾರವೊಂದರ ನೆರವಿನಿಂದ ಪ್ರತಿಮೀಕರಿಸುವ ಯತ್ನವಾಗಿದೆ.

**ಶಾಕುಂತಲ ಸಂಧ್ಯೆ**

"ಸಂಜೆ ಬಾನಿನಂಚಿನಲ್ಲಿ,
ಬಿದ್ದ ಬಿದಿಗೆ ಚಂದಿರ!
ಶಚೀತೀರ್ಥದ ತಳದಲ್ಲಿ
ಶಕುಂತಲೆಯ ಉಂಗುರ
ದೂರ್ವಾಸರ ಶಾಪವಿಗೋ
ಕವಿಯುತಿಹುದು ಸುತ್ತಲೂ
ಕಂಡುದೆಲ್ಲ ಜಾರುತಿಹುದು
ಮೆಲ್ಲನಿರುಳ ತಮದೊಳು
ಅಸಹಾಯಕ ತಾರೆಬಳಗ
ಹನಿಗಣ್ಣೊಳು ನೀರುವ
ಸುಯ್ವ ಗಾಳಿ ತಡೆಯುತಿಹುದು
ಉಕ್ಕಿ ಬರುವ ದುಃಖವ"[೪೩]

ಪ್ರಕೃತಿಯ ನಿಯಮದಂತೆ ಪ್ರಕೃತಿಯ ಮಡಿಲಲ್ಲಿ ಆಗುವ ಬದಲಾವಣೆಗಳನ್ನು ಪ್ರಕೃತಿಯ ಕೂಸಂತೆ ಬೆಳೆದ ಶಕುಂತಲೆಯ (ಮನುಷ್ಯರ) ಜೀವನದ ಸನ್ನಿವೇಶಗಳನ್ನು ಪದಗಳ ವರ್ಣನೆಯೊಂದಿಗೆ ಕವಿ ವಿವರಿಸಿದ್ದಾರೆ. ಹುಣ್ಣಿಮೆಯ ದಿನ ಸಂಜೆಯ ಸಮಯದಲ್ಲಿ ಚಂದಿರ ಬರುತ್ತಾನೆ. ಹಾಗೆಯೇ ತನ್ನ ಪ್ರಿಯತಮನನ್ನು ಕಾಣಲು ಶಕುಂತಲೆಯು ನೆನಪಿನಾಳದ ದೂರ್ವಾಸ ಮುನಿಯ ಶಾಪದಂತೆ ಕವಿತೆಯ ಭಾಗ, ಪ್ರಕೃತಿಯ ಸನ್ನಿವೇಶ, ಶಕುಂತಲೆಯ ಜೀವನದ ಘಟನೆ ಒಂದೇ ರೀತಿಯಲ್ಲಿ ನಡೆಯುವುದನ್ನು ಕವಿತೆ ತೋರಿಸುತ್ತದೆ.

ದೂರ್ವಾಸರ ಶಾಪದಿಂದ ಕವಿಯುತಿಹುದು ಮೋಡ. ಸುತ್ತಲೂ ಕಂಡುದೆಲ್ಲ ಜಾರುತಿಹದು ಮೆಲ್ಲನಿರುಳ ತಮದೊಳು. ನಭದಲ್ಲಿರುವ ತಾರೆಗಳ ಅಸಹಾಯಕತೆ ಶಕುಂತಲೆಯ ತಾಯಿಯಾದ ಮೇನಕೆಯು ಗಾಳಿಯ ರೂಪದಲ್ಲಿ ಬಂದ ಶಕುಂತಲೆಗೆ ಬಂದ ದುಃಖವನ್ನು ತಡೆಯಲು ಭೂಮಿಗೆ ಬರುತ್ತಾಳೆ ಎಂಬ ಅರ್ಥದೊಂದಿಗೆ ಈ ಕವಿತೆ ಮುಗಿಯುತ್ತದೆ. ಓದುಗರ ಕಲ್ಪನೆಯಲ್ಲಿ ಶಕುಂತಲೆಯ ಪಾತ್ರ, ಚಂದ್ರ, ನದಿ, ದೂರ್ವಾಸ ಮುನಿಗಳ ಶಾಪ ಶಕುಂತಲೆಯ ಕೈಯಲ್ಲಿದ್ದ ಉಂಗುರ ಕಳೆಯುವ ಸನ್ನಿವೇಶವನ್ನು ಉತ್ತಮವಾಗಿ ಕವಿತೆಯಲ್ಲಿ ಜಿ.ಎಸ್.ಶಿವರುದ್ರಪ್ಪನವರು ತಿಳಿಸಿದ್ದಾರೆ. ಈ ಕವಿತೆಗೆ ಪ್ರೇರಣೆಯೆಂದರೆ ಕಾಳಿದಾಸನ ಅಭಿಜ್ಞಾನ ಶಾಕುಂತಲ ನಾಟಕವೆಂದೇ ಹೇಳಬಹುದು.

**ಶಾಕುಂತಲದ ಐದನೆಯ ಅಂಕ – ಜಿ.ಎಸ್.ಶಿವರುದ್ರಪ್ಪ.**

ದುಷ್ಯಂತನಿಂದ ಶಕುಂತಲೆಯು ತಿರಸ್ಕಾರಕ್ಕೆ ಒಳಗಾಗುವ ಸನ್ನಿವೇಶದಿಂದ ಕವಿತೆ ಆರಂಭವಾಗುತ್ತದೆ. ಕಾಳಿದಾಸನ ಅಭಿಜ್ಞಾನ ಶಾಕುಂತಲ ನಾಟಕಕ್ಕಿಂತ ಪದ್ಯದ ಬರವಣಿಗೆಯು ತುಂಬಾ ಆಕರ್ಷಕವಾಗಿದೆ.

"ಶಂಕೆ ಬೆಂಕಿಯ ದಾರಿಯನು ತುಳಿದು,
ಅರಮನೆಯ ಹೆಬ್ಬಾಗಿಲನು ಹೊಸ ಮದುವೆ ಹೆಣ್ಣುದಾಟಿ
ಜ್ವಲಿಸುವಾಸ್ಥಾನದಲಿ ಬಂದು ನಿಂತಾಗ
ಪರಿಚಿತದ ಮುಖದಲ್ಲಿ ಪ್ರಶ್ನೆಗಳ ಕೊಂಕು!"[೪೪]

ಶಕುಂತಲೆಯ ಜೀವನದಲ್ಲಿ ನಡೆಯುವ ಸನ್ನಿವೇಶವನ್ನು ಕವಿ ತನ್ನ ಕವಿತೆಯ ಮೂಲಕ ಹೇಳಿದ್ದಾನೆ.

ಪ್ರಥಮ ಬಾರಿಗೆ ಗಂಡನ ಮನೆಗೆ ಬಂದ ಶಕುಂತಲೆಗೆ ಪರಿಚಿತವಾದ ಮುಖವಿದ್ದರೂ ಅನೇಕ ರೀತಿಯ ಪ್ರಶ್ನೆಗಳು ಎದುರಾಗುತ್ತವೆ(ದುಷ್ಯಂತನಿಗೆ ಶಕುಂತಲೆಯನ್ನು ಮದುವೆಯಾಗಿದ್ದು ಮರೆತು ಹೋಗಿದ್ದರಿಂದ).

"ಕರೆತಂದ ಪರಿಜನಕೆ ಬೆರಗಿನ ಮುಳ್ಳು
ಕೈ ಹಿಡಿದು ಮರೆತವನ ಎದೆಯಲ್ಲೇನೋ ಕೊರಗು
ಯಾರಿವಳು? ಪ್ರಶ್ನೆಗುತ್ತರದ ಬೆಳಕಿಲ್ಲ.
ಹೊಗೆ ಕವಿದ ಕಾಳ್ಕಿಚ್ಚಿನಡವಿಯ ನಡುವೆ
ಹೋಮಧೂಮ!"[೪೫]

ಶಕುಂತಲೆಯನ್ನು ಕರೆತಂದ ಋಷಿಮುನಿಗಳಿಗೆ ಬೆರಗು ಅಂದರೆ ದುಷ್ಯಂತನ ಮಾತು ಕೇಳಿ ಆಶ್ಚರ್ಯವಾಯಿತು. ಕೈ ಹಿಡಿದ ಪತಿಯಿಂದಲೇ ತಿರಸ್ಕಾರದ ಮಾತನ್ನು ಹೇಗೆ ತಾನೆ ಸಹಿಸುವುದು. ದುಷ್ಯಂತನು ದೂರ್ವಾಸರ ಶಾಪದಿಂದ ಮರೆವು ಬಂದಿರುತ್ತದೆ. ಆದರೂ ಈ ಸುಂದರವಾದ ಸ್ತ್ರೀ.

ಯಾರು ಇರಬಹುದು ಎಂಬ ಪ್ರಶ್ನೆ ಎಂತಹವರನ್ನೂ ಕಾಡದೆ ಇರಲಾರದು. ಇಂತಹ ಪ್ರಶ್ನೆಗೆ ಉತ್ತರ ಸಿಗುವುದಕ್ಕೆ ಮುಖ್ಯವಾಗಿ ಮರೆವು ಬಂದಿದೆ, ವಿಸ್ಮೃತಿಯುಂಟಾಗಿದೆ. ಏಕೆಂದರೆ ಶಕುಂತಲೆಯು ದೂರ್ವಾಸರನ್ನು ಸತ್ಕರಿಸಲಿಲ್ಲ ಎಂಬ ಕಾರಣಕ್ಕಾಗಿ ಹಾಗೂ ಅತಿಥಿ ಬಂದಿದ್ದು ಕಾಣದೆ, ಯಾರ ಚಿಂತೆಯಲ್ಲಿ ಮಗ್ನಳಾಗಿರುವಳೋ, ಅವಳಿಗೆ ಆ ವ್ಯಕ್ತಿಗೆ ಇವಳ ನೆನಪಿಗೆ ಬರದೇ ಇರಲಿ ಎಂಬ ಶಾಪವನ್ನು ಕೊಟ್ಟ ಬಗೆಯೇ ಈ ಕವನದ ಅರ್ಥವಾಗಿದೆ.

"ಉಂಗುರದ ಬೆರಳನು ಸವರಿ ಬೆಚ್ಚಿದಳಾ ಬಾಲೆ;
ಇದ್ದ ಸೇತುವೆ ಮುರಿದು ದಾರಿಯಿಲ್ಲ
ಬೋರ್ಗರೆವ ಹೊನಲನೀಸುವುದೆ ನೆನಪಿನ ದೋಣಿ?
ಕೊಂಕು ನಗೆಗಳ ಮೊಳಗು ಸುತ್ತಮುತ್ತ"[೪೬]

ಅಭಿಜ್ಞಾನದ ಅಭರಣದಿಂದ ದೊರೆಗೆ ನೆನಪು ತರಬಹುದು ಎಂಬ ಉದ್ದೇಶದಿಂದ ಬೆರಳನ್ನು ತೋರಿಸಲು ಮುಂದಾದಳು. ಆದರೆ ಆ ಬೆರಳಿನಲ್ಲಿ ಉಂಗುರ ಇರಲಿಲ್ಲ. ಆದ್ದರಿಂದ ಬೆಚ್ಚಿಬಿದ್ದು ಆಶ್ಚರ್ಯ ಚಕಿತಳಾದಳು. ವಿಧಿ ಮುನಿದರೆ ಹುಲ್ಲು ಸಹ ಹಾವಾಗುವುದು ಎಂದು ಮನದಲ್ಲೇ ಅಂದುಕೊಂಡಳು. ಅವಳಿಗೆ ತೋರಿಸಲು ಇರುವುದು ಒಂದೇ ಆಭರಣ. ಆದರೆ ಅದೇ ಇಲ್ಲವೆಂದ ಮೇಲೆ ಮತ್ತಿನ್ನೇನು ಎಂಬ ಪ್ರಶ್ನೆಯೊಂದಿಗೆ ಶಕುಂತಲೆಯು ಅನೇಕ ಬಗೆಯ ಪ್ರಶ್ನೆಗಳಿಗೆ ತುತ್ತಾಗುವುದನ್ನು ಕವಿಯು ತನ್ನ ಕವಿತೆಯ ಮೂಲಕ ವಿವರಿಸಿದ್ದಾರೆ. ಸುತ್ತ ಬಲೆ ಹೂಡಿರಲು, ದಿಕ್ಕು ತಪ್ಪಿದ ಜಿಂಕೆ:

"ದೇಗುಲದ ಮೂಲೆಯಲಿ ದೀಪವಾರಿದ ಮೇಲೆ
ನಿಂತ ದೀಪದ ಮಲ್ಲಿ!
ಹಿಂದು ಮುಂದಿನ ಕೊಂಡಿ ಕಳಚಿ ಜಾರಿದ ಮುತ್ತು,
ಎತ್ತಿ ಕಟ್ಟುವರುಂಟೆ ಹಾರದಲ್ಲಿ?
ಪ್ರಶ್ನೆಗುತ್ತರವೆಲ್ಲಿ?
ನಗರದಿಂದ ಕಣ್ವಾಶ್ರಮದ ತನಕ ಸಂಶಯರಾತ್ರಿ
ತೌರೂರ ದಾರಿಯಲಿ ಕಲ್ಲು ಮುಳ್ಳು!
ಆ ಶಚೀತೀರ್ಥದಲಿ ಮಾತ್ರ ಮತ್ಸ್ಯ ಪ್ರಪಂಚದಲಿ
ಎಂಥದೋ ಕುಡಿಮಿಂಚು ಒಳಗು ಹೊರಗು!"[೪೭]

ಸುತ್ತಲೂ ಬಲೆಹಾಕಿರುವಾಗ, ದಿಕ್ಕು ತಪ್ಪಿದ ಜಿಂಕೆಯಾದಂತೆ ಶಕುಂತಲೆಗೆ ಮನಸ್ಸಿನಲ್ಲಿ ಆಘಾತ ಉಂಟಾಯಿತು. ದೇಗುಲದ ಮೂಲೆಯಲ್ಲಿ ದೀಪವಾರಿದ ಮೇಲೆ ನಿಂತ ದೀಪದ ಮಲ್ಲಿ! ಅಂದರೆ ಅರಮನೆಯಲ್ಲಿ ಯಾರು ಇವಳನ್ನು ಸಮರ್ಥಿಸಿಕೊಳ್ಳುವವರು ಇಲ್ಲದ ಕಾರಣ ದುಃಖಿಸುತ್ತಾ ನಿಂತಳು. ಹಿಂದು ಮುಂದಿನ ಕೊಂಡಿ ಕಳಚಿ ಜಾರಿದ ಮುತ್ತು, ಎತ್ತಿ ಕಟ್ಟುವರುಂಟೆ ಹಾರದಲ್ಲಿ?

ಪ್ರಶ್ನೆಗುತ್ತರವಲ್ಲಿ? ಸರಕ್ಕೆ ಮುಖ್ಯವಾಗಿ ದಾರ ಅತ್ಯಂತ ಪ್ರಮುಖವಾದ ವಸ್ತು, ಆದರೆ ಇತ್ತ ಕಣ್ವರಿಂದಲೂ ದೂರವಾಗಿದ್ದಾಳೆ ಹಾಗೂ ತನ್ನ ಪರಿಸರದಿಂದಲೂ ದೂರವಾದ ಶಕುಂತಲೆಗೆ ಯಾರು ದಿಕ್ಕು ಎಂಬ ಆಶಯವಾಗಿದೆ. ನಗರದಿಂದ ಕಣ್ವಾಶ್ರಮದ ತನಕ ಸಂಶಯರಾತ್ರಿ ತೌರೂರ ದಾರಿಯಲಿ ಕಲ್ಲು ಮುಳ್ಳು!

ದುಷ್ಯಂತನಿಗೆ ಶಕುಂತಲೆಯನ್ನು ಮದುವೆಯಾದ ನೆನಪು ಇರಲಿಲ್ಲದ ಕಾರಣ ತಿರಸ್ಕರಿಸಿದನು. ಇತ್ತ ಋಷಿಮುನಿಗಳು ಸಹ ಶಕುಂತಲೆಯನ್ನು ಬೈದು ನೀನು ಗಂಡನ ಮನೆಯಲ್ಲಿರುವುದೇ ಧರ್ಮ ಎಂದು ಹೊರಟು ಹೋದರು. ಅರಮನೆಯಿಂದ ಮುನಿಗಳ ಆಶ್ರಮದವರೆಗೆ ಬರಿ ಸಂಶಯದ ದಾರಿ ಎಂಬ ಮಾತನ್ನು ಕವಿ ತಮ್ಮ ಕವಿತೆಯ ಮೂಲಕ ಓದುಗರಿಗೆ ತಿಳಿಯಪಡಿಸಿದ್ದಾರೆ

ಆ ಶಚೀತೀರ್ಥದಲ್ಲಿ ಮಾತ್ರ ಮತ್ಸ್ಯ ಪ್ರಪಂಚದಲಿ ಎಂಥದೋ ಕುಡಿಮಿಂಚು ಒಳಗು ಹೊರಗು! ಶಕುಂತಲೆಯು ದುಷ್ಯಂತನ ಅರಮನೆಗೆ ಬರುವಾಗ ಶಚೀತೀರ್ಥ ಎಂಬ ನದಿಯನ್ನು ದೋಣಿಯ ಮೂಲಕ ದಾಟಿ ಬಂದಳು. ದೋಣಿಯಲ್ಲಿ ಬರುವಾಗ ದುಷ್ಯಂತನ ಕನಸು ಕಾಣುತ್ತಾ ದುಷ್ಯಂತ ಕೊಟ್ಟ ಉಂಗುರವನ್ನು ನೀರಿನಲ್ಲಿ ಕಳೆದುಕೊಂಡಳು. ಆ ಉಂಗುರವನ್ನು ಮೀನು ನುಂಗಿತು. ಆ ಉಂಗುರ ಸಿಗುವವರೆಗೂ ದುಷ್ಯಂತನಿಗೆ ನೆನಪು ಬರುವುದಿಲ್ಲ. ಆದ್ದರಿಂದ ಶಚೀತೀರ್ಥದಲ್ಲಿ ಎಂಥದೋ ಕುಡಿಮಿಂಚು ಇದೆ ಎಂದು ಕವಿಯು ತೋರಿಸಿದ್ದಾರೆ. ಈ ಕವಿತೆಯನ್ನು ಜಿ.ಎಸ್.ಶಿವರುದ್ರಪ್ಪನವರು ಶಕುಂತಲೆಯ ನಾಟಕದ ಐದನೇ ಅಂಕವನ್ನು ತಮ್ಮ ಕವಿತೆಯ ಮೂಲಕ ಕಟ್ಟಿಕೊಟ್ಟಿದ್ದಾರೆ.

**ಮಗಳಿಗೊಂದು ಕವಿತೆ**

ಇದು ಎಂ.ಆರ್.ಕಮಲ ಅವರು ೧೯೯೨ರಲ್ಲಿ ಬರೆದ ಕವಿತೆ. ಕದವ ತಟ್ಟದಿರು ಮಗಳೆ ತೆರೆಯಲಾರೆ ನಿನ್ನ ಕರೆಯಲಾರೆ ನಿನಗೆ ಗೊತ್ತೆ ಮಗಳೆ ಇದೆಂಥ ಪಾಷಾಣ ಪಾಪಕೂಪವೆಂದು, ಧರೆಯಾಳುವವರೆಲ್ಲ ದೈತ್ಯರೆಂದು. ನಿನಗೆ ಗೊತ್ತೆ ಮಗಳೆ ಎಂದು ತಮ್ಮ ಕವಿತೆಯಲ್ಲಿ ಸ್ತ್ರಿಯ ಮನೋಭೂಮಿಕೆಯನ್ನು ಪ್ರಸ್ತುತಪಡಿಸಿದ್ದಾರೆ. ಶಕುಂತಲೆಯನ್ನು ಕುರಿತು ಈ ಕವಿತೆಯಲ್ಲಿ ಈ ಕೆಳಗಿನ ಪದ್ಯಭಾಗದಲ್ಲಿ ವಿವರಿಸಿರುವುದನ್ನು ಗಮನಿಸಬಹುದು. ಲೇಖಕಿಯು ಹೀಗೆ ತಮ್ಮ ಕವಿತೆಯಲ್ಲಿ ಈ ಕೆಳಗಿನಂತೆ ವಿವರಿಸಿದಾರೆ.

"ನೀನು ಡಿಸ್ಸೈರಿ ವಾಷಿಂಗ್‌ಟನ್‌ಗಳಷ್ಟು ಚೆಲುವೆಯಾದರೆ
ಬಿಗಿ ಮುಷ್ಟಿಯಲಿ ನರಳಿಸುವ ಟೇಸನ್ನರಿದ್ದಾರೆ
ವನಜ್ಯೋತ್ಸ್ನೆ ಶಕುಂತಲೆಯಾದರೆ
ಕಾಡಿಗೆ ಕಿಚ್ಚು ಹಚ್ಚುವ ದುಷ್ಯಂತರಿದ್ದಾರೆ
ಹಾಗೆಂದೇ ಮಗು ಕದವ ತಟ್ಟದಿರು

ತೆರೆಯಲಾರೆ ಒಳಗೆ ಕರೆಯಲಾರೆ
ನಿನ್ನ ಕರೆ ಕರೆಯ ಕರೆಗೆ
ಕಿವುಡಾಗುವ ಯಾತನೆಯ ಸಹಿಸಲಾರೆ
ನಾನೆಂದಿಗೂ ನಿನ್ನ ಹೆರಲಾರೆ"

ತಮ್ಮ ಮಗಳನ್ನು ಕುರಿತು ಹೇಳಿರುವ ಕವಿತೆ ಅನ್ನಬಹುದು. ಅಲ್ಲದೆ ಸ್ತ್ರೀಯರನ್ನು ಕುರಿತು ಹೇಳಿರುವ ಮಾತಾಗಿದೆ. ಕಾಡಿನಲ್ಲಿರುವ ಶಕುಂತಲೆಯು ಜಿಂಕೆಯಂತೆ ಇರುವಳು. ಆದರೆ ದುಷ್ಯಂತ ಹೋಗಿ ಅವಳ ಹೊಟ್ಟೆಯಲ್ಲಿ ತನ್ನ ಕುಡಿ ನೆಟ್ಟು ದುಃಖ ಪಡುವಂತೆ ಮಾಡಿದ ಸುಂದರವಾದ ಕಾಡಿಗೆ ಬೆಂಕಿ ಹಚ್ಚುವ ದುಷ್ಯಂತರಿದ್ದಾರೆ ಎಂಬ ಮಾರ್ಮಿಕವಾದ ಮಾತು ಈ ಕವಿತೆಯಲ್ಲಿ ವ್ಯಕ್ತವಾಗಿದೆ(ಸ್ತ್ರೀಪರವಾದ).

**ಶಕುಂತಲೋಪಾಖ್ಯಾನ – ಎಂ.ಆರ್.ಕಮಲ**

"ಗಿಡದೊಂದಿಗೆ ಗಿಡವಾದವಳ, ಹುಲ್ಲೆಮರಿಯಾದವಳ
ಅಂಗುಲಂಗುಲವೂ ನಿಸರ್ಗವೇ ಆದವಳ!
ಉದ್ಯಾನ ಲತಾವಳಿಗಳ ಕೃತಕತೆಗೆ ಬೇಸತ್ತವನಿಗೆ
ವನಜ್ಯೋತ್ಸ್ನೆಯ ಒಡಲಲ್ಲಿ ಏನೋ ಉನ್ಮಾದ
ದುಷ್ಯಂತನ ಬಿಸಿಯಪ್ಪುಗೆಯಲ್ಲೂ ಶಕುಂತಳೆಗೆ ಮಾತ್ರ
ಜಿಂಕೆ ಮರಿಯ ಸೆಳೆತ!
'ಎಷ್ಟಾದರೂ ಅರಣ್ಯವಾಸಿಯಲ್ಲವೆ ನೀನು?
ಮತ್ತೇರಿ ನಕ್ಕವನು ಉಂಗುರವಿಟ್ಟು ನಡೆದೇಬಿಟ್ಟ.
ಉಂಗುರದ ಒಂದೊಂದಕ್ಷರದ ಎಣಿಕೆ ಮುಗಿಯುವ ಮುನ್ನ
ಬರುವನೆಂದವನು ಬರಲೇ ಇಲ್ಲ!
ಚಿತ್ರದಲ್ಲಿ ಬರೆದ ಪ್ರತಿಮೆಯಾದಳು ಹುಡುಗಿ
ಬಸಿರಲ್ಲಿ ಮೊಳಕೆಯೊಡೆದ ಕುಡಿ,
ತಿದಿಯೊತ್ತುವಾತಂಕ, ಚಿತ್ರದಲಿ ಬರೆದ ಪ್ರತಿಮೆಯಾದಳು ಹುಡುಗಿ.
ದೂರ್ವಾಸನ ಶಾಪ ಎದೆ ತಟ್ಟಲಿಲ್ಲ, ಮನ ಮುಟ್ಟಲಿಲ್ಲ,
ಗೆಳತಿ ಪ್ರಿಯಂವದೆ, ಎಷ್ಟೆಂದರೂ ಪ್ರಿಯಂವದೆ
ಸುಮ್ಮನಾದಳು.
'ಅನಾರ್ಯ!'
ತಾಯ್ತನದ ಕರುಳು ಚುರ್ರೆಂದಿರಬೇಕು ಮೇನಕೆಗೆ
ಕಂಗೆಟ್ಟ ಹುಡುಗಿಗೊಂದಿಷ್ಟು ಆಸರೆ,

ಆಸೆ, ಬದುಕು, ಕನಸುಗಳ ದಹಿಸಿಯೇ ಬಂದ
'ಸರ್ವದಮನ!'
ಪುರುಕುಲದ ಉತ್ತರಾಧಿಕಾರಿ, ಸಿಂಹದ ಮರಿ
ಭರತನಿಗಾಗಿಯೇ ಇರಬೇಕು,
ಧಾವಿಸಿ ಬಂದ ದುಷ್ಯಂತ.
ದೂರ್ವಾಸನ ಶಾಪ, ಉಂಗುರದ ನೆಪ
ಒಡ್ಡಿನಿಂತವನ ನೋಡಿ ನಕ್ಕಳು
(ನೋವುಂಡು ನಕ್ಕ ನಗೆ ನಗೆಯಲ್ಲ)
ಚಿಗುರು ಬೆರಳಿಗೆ ಮತ್ತೆ ಉಂಗುರದ ಸಂಭ್ರಮ
ಹಿಮ್ಮೆಟ್ಟಿದ್ದ ಹುಡುಗಿ–ಅಲ್ಲಲ್ಲ ಪ್ರೌಢೆ
ತಣ್ಣಗೆ ನುಡಿದಳು
'ನನಗೆ ಈ ಉಂಗುರದಲ್ಲಿ ನೆಚ್ಚಿಗೆಯಿಲ್ಲ'"[೪೯] (ಪು.ಸಂ.೩೨)

ಶಕುಂತಲೆಯ ವರ್ಣನೆಯು ಈ ಕವಿತೆಯಲ್ಲಿ ಮೂಡಿಬಂದಿದೆ. ಪ್ರಕೃತಿಯಲ್ಲಿ ಬೆಳೆದ ಕೂಸು. ಆದರೆ ಪ್ರಕೃತಿಗೆ ವಿರುದ್ಧ ನಡೆಯಲು ಸಾಧ್ಯವಿಲ್ಲ. ಅದಕ್ಕೂ ಮನಸ್ಸು ಇದೆ ಎಂಬುದಕ್ಕೆ ಸಾಕ್ಷಿಯಂತಿದೆ. ಅರಮನೆಯಿಂದ ಕಾಡಿಗೆ ಬಂದವನು ಕಾಡಿನಲ್ಲಿರುವ ಜಿಂಕೆಯನ್ನೊಲುವ ಶಕುಂತಲೆಯನ್ನು ಕುರಿತು ಈ ಕವಿತೆಯಲ್ಲಿ ವ್ಯಕ್ತವಾಗಿದೆ.

ಶಕುಂತಳೋಪಾಖ್ಯಾನ ಎಂಬ ಕವಿತೆಯಲ್ಲಿ ಮಲ್ಲಿಗೆಯ ಬಳ್ಳಿಗೆ ಬಿಸಿಯಾದ ನೀರುಹಾಕಿದಂತೆ ಶಕುಂತಲೆಗೆ ದುಷ್ಯಂತ ವಿರಹದಲ್ಲಿ ನರಳುವಂತೆ ಮಾಡಿದ ಎಂಬ ಮಾತು ವ್ಯಕ್ತವಾಗುತ್ತದೆ. ಈ ಕವಿತೆಯಲ್ಲಿ ಬರುವುದು ಗಿಡದೊಂದಿಗೆ, ಜಿಂಕೆಯೊಂದಿಗೆ, ಪ್ರಾಣಿ ಪಕ್ಷಿಗಳೊಂದಿಗೆ ಬೆರೆತು ಬೆಳೆದ ಶಕುಂತಲೆಯ ಜೀವನದ ವಿವರಣೆಯನ್ನು ಎಂ.ಆರ್.ಕಮಲ ತಮ್ಮ ಕವಿತೆಯಲ್ಲಿ ಕಟ್ಟಿಕೊಟ್ಟಿದ್ದಾರೆ. ನದಿಯಲ್ಲಿ ಕಳೆದು ಹೋದ ಉಂಗುರವು ಕಳೆದುಹೋದರು ಲಜ್ಜೆ, ಭಯ, ಆತಂಕ, ಕೊನೆಗೆ ಮುಸುಕು ತೆರೆದರು ರಾಜ ಗುರಿತಿಸಲಿಲ್ಲ ಎಂಬ ಮಾತು ಮಾರ್ಮಿಕವಾಗಿ ಲೇಖಕಿಯು ತಮ್ಮ ಕವಿತೆಯಲ್ಲಿ ಹೇಳಿರುವುದನ್ನು ಗ್ರಹಿಸಬಹುದು.

**ಅಭಿಜ್ಞಾನ ಶಾಕುಂತಲೆ**

[ಪುಸ್ತಕ:– ದೇಶ ಕುಲಕರ್ಣಿಯವರು "ಕೊಂಪೆಯಲ್ಲಿ ಕೋಗಿಲೆ", ೧೯೮೩ ಕನ್ನಡ ಸಂಘ ಶೇಷಾದ್ರಿಪುರಂ, ಬೆಂಗಳೂರು].

"ಮುಂಜಾನೆ ಜೂಲಿ ಸಂಜೆ ನೂರಿ
ನೋಡುತ್ತ ಕಣ್ದುಂಬಿ
ಮಮ್ಮಲ ಮರುಗಿದಳು
ಕೊನೆಯ ಬೆಂಚಿನ ಧೀರ

ಲಲಿತ ಕುಮಾರ

ಹೊಗಿತ್ರಿ ಕೆಮಿಸ್ಟ್ರಿ

ಅಂತ ರೇಗಿಸಿದ್ದಾಗ

ಒನೆದು ನಾಚಿದಳು.

ರಾತ್ರಿ

ಕತ್ತಲಲ್ಲಿ ಕಣ್ಣು ಪಿಳ ಪಿಳ

ನಿದ್ರೆ ಬಾರದ ಮೂಕ ತಳ ತಳ

ಪಕ್ಕಹೊರಳಿದರೆ ಅಮ್ಮ

ಯಾಕೆ ಬರಲಿಲ್ವೇನೆ ನಿದ್ದೆ

ಅಂತ ಕೇಳಿದರೆ

ಯಾಕೋ ಬ್ರಾಬಿಗಿಯುತ್ತಲ್ಲಮ್ಮ

ಅಂತಾಳಲ್ಲ ತರಲೆ

ನಂ ಪುಟಾಣಿ ಶಕುಂತಲೆ"[೫೦]

ದೇಶ ಕುಲಕರ್ಣಿಯವರು ಬರೆದಿರುವ 'ಕೊಂಪೆಯಲ್ಲಿ ಕೋಗಿಲೆ' ಎಂಬ ಕವನ ಸಂಕಲನದಲ್ಲಿರುವ **'ಅಭಿಜ್ಞಾನ ಶಾಕುಂತಲೆ'** ಎಂಬ ಕವಿತೆಯನ್ನು ೧೯೮೩ರಲ್ಲಿ ಬರೆದಿದ್ದಾರೆ. ಈ ಕವಿತೆ ಪ್ರಸ್ತುತ ಕಾಲಕ್ಕೂ ಅನ್ವಯವಾಗುವಂತಹ ವಾಕ್ಯಗಳನ್ನು, ಭಾಷೆಯನ್ನು, ಸನ್ನಿವೇಶವನ್ನು ಹೊಂದಿದೆ. ಪ್ರಕೃತಿಯ ನಿಯಮದಂತೆ ಶಕುಂತಲೆಯ(ಜೀವನದಲ್ಲಿ) ಯೌವನದಲ್ಲಿ ಉಂಟಾದ ದೇಹದಲ್ಲಿನ ಮಾನಸಿಕ ಬದಲಾವಣೆಯನ್ನು ಇಲ್ಲಿ ಪ್ರತಿಯೊಬ್ಬ ಸ್ತ್ರೀಯರಲ್ಲಿ ಅಂದರೆ ಹುಡುಗಿಯರಲ್ಲಿ ಉಂಟಾಗುತ್ತದೆ ಎಂಬುದನ್ನು ಕವಿಯು ಉತ್ತಮವಾಗಿ ತಮ್ಮ ಕವಿತೆಯ ಮೂಲಕ ಓದುಗರಿಗೆ ತಿಳಿಸುವಲ್ಲಿ ಪ್ರಯತ್ನಿಸಿದ್ದಾರೆ.

**ಇನ್ನೊಬ್ಬಳು ಶಕುಂತಲೆ – ಕೆ.ಎಂ.ಮುನಿಕೃಷ್ಣಪ್ಪ**

"ಕೊಡಗು ಕಾವೇರಿಯ ತೀರ–

ವಿವರವನೊದಗಿಸಿದವು ಜಿಂಕೆ ಮೊಲ ಸಾರಂಗ

ಮುನಿಕಣ್ವನ ಯಜ್ಞ ಶಾಲೆ

ಸುಕೋಮಲೆ ಶಕುಂತಲೆಯ

ರಾಗ ವಿರಾಗ ರಂಗಮಂಚ

ಕೇಳಿ ಬಲ್ಲೆವು ಎಳವೆಯಲಿ ಹಿರಿಯರಿಂದೆ

ನೀನವಳ ವಂಶಜಳೆ?

ನಕ್ಕಳಲ್ಲದೆ ಇವಳು ಮಾರ್ನುಡಿಯಲಿಲ್ಲ

ಮಂಜು ಮುಸುಕುವುದು
ತಿಳಿಗೊಳ್ಳುವುದು ಬೆದರದು
ನೂರು ಕೊರಳುಗಳಲ್ಲಿ ಹಕ್ಕಿ ಗುನುಗು
ದೈವ ಸೃಷ್ಟಿಗೆ ಎಣೆಯಿಲ್ಲ
ಕನಸುಗಣ್ಣಿನ ಹುಡುಗಿ
ದೇಹಕಂಟಿದ ವೀರ
ಯಾರು ಏನೆಂದು ಕೇಳಲಿಲ್ಲ
ಕಿನ್ನರರು
ಇಂದು ನಾಳೆಗಳ ಭಯವಿಲ್ಲ."[೫೧] ಮಾರ್ಚ್- ೧೯೮೮

ಕೆ.ಎಂ.ಮುನಿಕೃಷ್ಣಪ್ಪ ಅವರು 'ಇನ್ನೊಬ್ಬಳು ಶಕುಂತಲೆ' ಎಂಬ ಕವನ ಸಂಕಲನದಲ್ಲಿ 'ಇನ್ನೊಬ್ಬಳು ಶಕುಂತಲೆ' ಎಂಬ ಕವಿತೆಯನ್ನು ಬರೆದಿದ್ದಾರೆ. ಈ ಕವಿತೆಯ ಆಶಯ ಮುಖ್ಯವಾಗಿ ಕಾಳಿದಾಸನ ಅಭಿಜ್ಞಾನ ಶಾಕುಂತಲ ನಾಟಕದಲ್ಲಿ ದುಷ್ಯಂತನಿಂದ ಶಕುಂತಲೆ ಉಂಗುರವನ್ನು ಸ್ವೀಕರಿಸಿದರೆ ಎಂಬುದು. ಈ ಕವನದಲ್ಲಿ ಆ ಬಾಲೆ ಉಂಗುರವನ್ನು ತಿರಸ್ಕರಿಸುತ್ತಾಳೆ. ಹೀಗೆ ಸಾಂಸ್ಕೃತಿಕವಾಗಿ ಇದ್ದಂತಹ ಶಕುಂತಲೆಯ ಕಥಾವಸ್ತುವನ್ನು ಲೇಖಕರು ಮರು ಉತ್ತರದಂತೆ ತಮ್ಮ ಕವಿತೆಯಲ್ಲಿ ಪಾತ್ರವನ್ನು ಸೃಷ್ಟಿಸಿಕೊಂಡು ಇನ್ನೊಬ್ಬಳು ಶಕುಂತಲೆ ಎಂಬ ಕವಿತೆಯನ್ನು ಬರೆದಿದ್ದಾರೆ. ಈ ಕವಿತೆಯ ಆಶಯವನ್ನು ಈ ಕೆಳಗಿನಂತೆ ವಿಶ್ಲೇಷಿಸಲಾಗಿದೆ.

**ಹರಪನಹಳ್ಳಿ ಭೀಮವ್ವನ ಜಾನಪದ ಶಾಕುಂತಲ**

**ಶಕುಂತಲೆ-ದುಷ್ಯಂತ ಮಹಾರಾಜನ ಹಾಡು**

ಮೂಲತಃ ಇದು ಮಹಾಭಾರತದ ಶಾಕುಂತಲೋಪಾಖ್ಯಾನದ ಕತೆ. 'ಭೂಮಿಗೊಡೆಯ ಭೀಮೇಶಕೃಷ್ಣನು ಈ ಮಹಾಭಾರತದ ಕತೆಯನ್ನು ದಯಮಾಡಲಿ' ಎಂದು ಭೀಮವ್ವ ಕೇಳಿಕೊಂಡರೂ ಕಾಳಿದಾಸನ ಶಾಕುಂತಲಾ ನಾಟಕವನ್ನು ನೋಡಿ, ಕಥಾಸರಣಿಯನ್ನು ಈ ಹಾಡಿನ ಉದ್ದಕ್ಕೂ ಕಾಣಬಹುದು.

ಒಮ್ಮೆ 'ಶಾಕುಂತಲಾ' ಎಂಬ ಕಂಪನಿ ನಾಟಕವನ್ನು ನೋಡಿದವಳು ಅವರ ಮನೆಯಲ್ಲಿಯರೋ ಭೀಮವ್ವಾ ನೀನೇಕೆ ಅದರ ಮೇಲೆ ಒಂದು ಹಾಡು ಮಾಡಬಾರದು, ಎಂದು ಕೇಳಿದ ಮರುದಿನವೇ ಈ ಹಾಡು ಬರೆದಳೆಂದು ಭೀಮವ್ವನ ಮರಿಮಕ್ಕಳಾದ ಶ್ರೀವಿಜಯರಾಯರು ತಿಳಿಸುತ್ತಾರೆ.

ವಿಶ್ವಾಮಿತ್ರನ ತಪಸ್ಸನ್ನು ಭಂಗ ಮಾಡಲು ಇಂದ್ರನಿಂದ ಪ್ರೇರಿತಳಾದ ಮೇನಕೆ ಭೂಲೋಕಕ್ಕೆ ಬರುವಲ್ಲಿಂದ ಕತೆ ಪ್ರಾರಂಭವಾಗುತ್ತದೆ. ಮೇನಕೆಯನ್ನು ವಿಶ್ವಾಮಿತ್ರ ಮೋಹಿಸಿದ ಪರಿಣಾಮವಾಗಿ ಒಂದು ಹೆಣ್ಣು ಮಗು ಜನಿಸುತ್ತದೆ. ಮೇನಕೆ 'ಒಣಗಿದೆಲೆಗಳ ಮ್ಯಾಲೆ ಅಣುವಿನ ಆ ಮುನಿಚರಣದಲ್ಲಿ

ಬಿಸುಟು ತಿರುಗಿಯೂ ನೋಡದೆ ತನ್ನ ಲೋಕಕ್ಕೆ ಹೊರಡಲು ವಿಶ್ವಾಮಿತ್ರನೂ ತನ್ನ ದಾರಿ ಹಿಡಿದ.

ಆ ಅನಾಥಮಗು ಪುಷ್ಪಸಂಗ್ರಹಣೆಗಾಗಿ ಕಾಡಿಗೆ ಬಂದ ಕಣ್ವರಿಗೆ ಸಿಕ್ಕುತ್ತದೆ. ಮಗುವನ್ನು ಆಶ್ರಮಕ್ಕೆ ಕರೆದೊಯ್ದು ಶಕುಂತಲ ಎಂದು ಹೆಸರಿಟ್ಟು ಸಾಕ ತೊಡಗುತ್ತಾರೆ. ಆಶ್ರಮವಾಸಿಗಳ ಲಾಲನೆ ಪಾಲನೆಯಲ್ಲಿ ಶಕುಂತಲೆ ಬೆಳೆದು ದೊಡ್ಡವಳಾಗುತ್ತಾಳೆ.

ಒಮ್ಮೆ ಬೇಟೆಯಾಡುತ್ತಾ ಅಲ್ಲಿಗೆ ಬಂದ ಹಸ್ತಿನಾವತಿಯ ರಾಜ ದುಷ್ಯಂತ ಒಂದು ಚಿಗರೆಯನ್ನು ಬೆನ್ನಟ್ಟಿ ಇನ್ನೇನು ಬಾಣ ಬಿಡಬೇಕು ಎನ್ನುವಷ್ಟರಲ್ಲಿ ಇಬ್ಬರು ಬ್ರಾಹ್ಮಣರು ಎದುರಿಗೆ ಬಂದು,

"ಇತ್ತ ಮಾಲಿನೀ ನದಿಯು ನೋಡದ
ರ್ಥತ್ತಿಲೆ ಕುಟೀರವು
ಸತ್ಯವಂತರು ಕಣ್ವಋಷಿಗಳ
ಪುತ್ರಿಯಾದ ಶಕುಂತಲೆ
ಪತ್ನಿಯಾದರೆ ನಿನ್ನ ಸರಿ
ಪುಣ್ಯಕ್ಕೆ ಜೋಡಿನಿಲ್ಲವೋ,"[೫೨]

ಎಂದು ಹೇಳಿ ಜಿಂಕೆಯನ್ನು ಉಳಿಸುವರು. ಆ ಪ್ರಕಾರ ದುಷ್ಯಂತ ಆಶ್ರಮಕ್ಕೆ ಬಂದು ಥಳಥಳನೆ ಹೊಳೆವ ಶಕುಂತಲೆಯನ್ನು ನೋಡಿ, ದುಂಬಿಯನ್ನು ನಿವಾರಿಸಿ ಅವಳನ್ನು ಗಾಂಧರ್ವ ವಿಧಿಯಿಂದ ವಿವಾಹವಾದ. ಆದಷ್ಟು ಜಾಗ್ರತೆ ಕರೆಸಿಕೊಳ್ಳುವುದಾಗಿ ಹೇಳಿ ಹಸ್ತಿನಾವತಿಗೆ ತೆರಳಿದ.

ವಿರಹತಪ್ತೆಯಾದ ಶಕುಂತಲೆ ದೂರ್ವಾಸರ 'ದೊರೆ ತಾನು' ನಿನ್ನೀಗ ಮರೆತು ಎಂಬ ಶಾಪಕ್ಕೆ ಗುರಿಯಾಗುವಳು. ಅನಸೂಯೆ ಪ್ರಿಯಂವದೆಯರು ಶಾಪವನ್ನು ಬೇಡ ಎಂದು 'ರಾಜ ಕೊಟ್ಟ ಉಂಗುರವನ್ನು ನೋಡಿದ ಕೂಡಲೇ ನಿನಪಾಗಲಿ' ಎಂದು ಹೇಳಿ ನಡೆದರು. ಇತ್ತ ಗರ್ಭಿಣಿಯಾದ ಶಕುಂತಲೆಗೆ ಮಗ ಹುಟ್ಟಿದ ಭರತರಾಯನೆಂದು ಹೆಸರಿಟ್ಟರು. ತಾಯಿ ಮಗನನ್ನು ಕಣ್ವರು ದುಷ್ಯಂತನಲ್ಲಿಗೆ ಕಳುಹಿಸಲು ಅವನು,

"ಇಂದುವದನೆ ನಿನ್ನ ಮುಖವ ಎಂದೂ
ಕಂಡರಿಯೆನೆ ನಾನು ನಂದು ಗುರುತೇನಿದ್ದರೆ ತೋರು,
ಸುಂದರಾಂಗಿ ಸುಮ್ಮನೆ ಪೋಗು"[೫೩]

ಎಂದು ಬಿಟ್ಟ. ಆ ಹೊತ್ತಿಗೆ ಜಾಲಗಾರನೊಬ್ಬ ಮತ್ಸ್ಯವೊಂದು ನುಂಗಿದ್ದ ರಾಜನ ಮುದ್ರೆಯುಂಗುರವನ್ನು ತಂದುಕೊಡಲು, ಅದನ್ನು ನೋಡುತ್ತಲೇ ದುಷ್ಯಂತನಿಗೆ ತಟ್ಟನೆ ಎಲ್ಲವೂ ನೆನಪಾಗುತ್ತದೆ. ಅದೇ ವೇಳೆಗೆ 'ಪೊಡವಿಗೊಡೆಯನೆ ದುಷ್ಯಂತನೆ ಕೇಳು ನಿನ್ನ ಮಡದಿ ಹೌದೀಕೆ ನೀ ಮಾಡಿಕೊಂಡದೌದು', ಎಂದು ಅಶರೀರವಾಣಿ ನುಡಿಯುತ್ತದೆ. ಆಗ ರಾಜ ಎದ್ದು ಶಕುಂತಲೆಯನ್ನು ಸ್ವೀಕರಿಸಿ,

ಮಗನೊಡನೆ ತಾಯಿಗೆ ನಮಸ್ಕರಿಸಲು ತೆರಳಿದ. ಶೀಘ್ರದಲ್ಲಿಯೇ ಮಗ ಭರತನಿಗೆ ಪಟ್ಟಾಭಿಷೇಕ ಮಾಡಿ ತನ್ನ ಮಾತನ್ನು ಉಳಿಸಿಕೊಂಡ.

"ಕಾಂತನಾದಂಥ ದುಷ್ಯಂತರಾಜನು ತನ್ನ
ಕಾಂತೆ ಶಕುಂತಲೆಯ ಕೂಡಿಕೊಂಡ ಕಥೆಯ
ಸಂತೋಷದಿಂದ್ಹೇಳಿ ಕೇಳಿದ ಜನಕೆಲ್ಲ
ಸಂತಾನ ಸಂಪತ್ತು ಸಾಯುಜ್ಯ ಪದವಿ ಶ್ರೀ
ಕಾಂತ ಭೀಮೇಶಕೃಷ್ಣನು ಒಲಿದು ವರಗಳ ಕೊಡುವನು"[೫೪]

ಎಂಬ ಫಲಸ್ತುತಿಯೊಂದಿಗೆ ಧ್ವನಿ, ವಚನಗಳಿಂದ ಕೂಡಿದ ೬೧ ಧ್ವನಿಗಳ ಈ ಹಾಡು ಮುಗಿಯುತ್ತದೆ. ಹಾಡಿನುದ್ದಕ್ಕೂ ನಾಟಕೀಯತೆಯ ಸೊಬಗು ಮಿಂಚಿದೆ. ದೂರ್ವಾಸರ ಶಾಪ ವೃತ್ತಾಂತ ಮೂಲಭಾರತದಲ್ಲಿ ಇಲ್ಲದಿದ್ದರೂ ಭೀಮವ್ವ ಕಾಳಿದಾಸನನ್ನನುಸರಿಸಿ ತನ್ನ ಹಾಡಿನಲ್ಲಿ ತಂದಿದ್ದಾಳೆ. ಉಂಗುರದರ್ಶನವಾದಾಗ ಜೊತೆಗೆ ಮೂಲದ ಅಶರೀರವಾಣಿಯನ್ನೂ ಉಳಿಸಿಕೊಂಡಿದ್ದಾಳೆ. ಆದರೂ ಕಣ್ವರಿಗೆ ಶಕುಂತಲೆಯ ವಿವಾಹವಾಗಿ ಆಕೆ ಗರ್ಭಿಣಿಯಾಗಿರುವ ವೃತ್ತಾಂತ ಅಶರೀರವಾಣಿಯ ಮೂಲಕ ತಿಳಿಯುವುದು. ಗರ್ಭಿಣಿಯಾಗಿದ್ದಾಗಲೇ ಶಕುಂತಲೆಯನ್ನು ಕಣ್ವರು ದುಷ್ಯಂತನಲ್ಲಿಗೆ ಕಳುಹಿಸುವುದು, ದುಷ್ಯಂತನಿಂದ ತಿರಸ್ಕೃತಳಾದ ಶಕುಂತಲೆಯನ್ನು ಮೇನಕೆ ಕರೆದೊಯ್ಯುವುದು, ಶಕುಂತಲೆಯ ಮಗನಿಗೆ ಸರ್ವದಮನನೆಂದು ಹೆಸರಿಡುವುದು, ದುಷ್ಯಂತ–ಶಕುಂತಲೆಯರ ಪುನರ್ಮಿಲನ ಮಾರೀಚಾಶ್ರಮದಲ್ಲಿ ಆಗುವುದು. ಈ ಕೆಲವು ಕಾಳಿದಾಸನ ನಾಟಕದ ಅಂಶಗಳನ್ನು ಭೀಮವ್ವ ಕೈಬಿಟ್ಟಿದ್ದಾಳೆ. ಆದ್ದರಿಂದ ಭೀಮವ್ವನ ಕಥಾನಿರೂಪಣೆ ಇನ್ನೂ ಸರಳ, ಸುಲಭ, ನೇರವಾಗಿ ಪರಿಣಮಿಸಿದರೂ ಸೊಗಸಿನಿಂದ ಕೂಡಿದೆ. ಶಾಕುಂತಲಾ ಚರಿತ್ರೆಯಲ್ಲಿ ಶಕುಂತಲೆ ಮತ್ತು ದುಷ್ಯಂತರ ವಿವಾಹ, ವಿಯೋಗ ಮತ್ತು ಸಮಾಗಮದ ವರ್ಣನೆಯಿದೆ.

ನಮ್ಮ ಪ್ರಾಚೀನ ಸಾಹಿತ್ಯದ ಇತರ ಕೃತಿಗಳೊಂದಿಗೆ ದಾಸಸಾಹಿತ್ಯವನ್ನು ಹೋಲಿಸಿದಾಗ ಎದ್ದು ಕಾಣುವ ಒಂದು ಮುಖ್ಯ ಅಂಶವೆಂದರೆ ಈ ಸಾಹಿತ್ಯದ ವಾಕ್ ಪರಂಪರೆ ಗ್ರಂಥಸ್ಥವಾಗಿ ಉಳಿದು ಬಂದಿರುವುದಕ್ಕಿಂತಲೂ ಜನರ ಬಾಯಲ್ಲಿ ನಿಂತಿರುವುದೇ ಹೆಚ್ಚು. ಭಕ್ತರ ಹೃದಯದ ಮೊರೆಗಳಾದ ಈ ಕೀರ್ತನೆಗಳು ತಲೆಮಾರಿನಿಂದ ತಲೆಮಾರಿಗೆ ಹಬ್ಬಿ ಬಂದಿವೆ.

ಕಾಳಿದಾಸನಿಗೆ ತನ್ನ ನಾಲಿಗೆ ಮೇಲೆ ಕಾಳಿದೇವಿ ಬರೆದಂತೆ ಹರಪನಹಳ್ಳಿ ಭೀಮವ್ವನ ನಾಲಿಗೆ ಮೇಲೆ ನಾರದರ ಆಜ್ಞೆಯಂತೆ ಕೃಷ್ಣ ಸರ್ಪವೊಂದು ಮೂರು ಅಕ್ಷರಗಳನ್ನು ಬರೆದಂತೆ ಸ್ವಪ್ನವನ್ನು ಕಂಡ ಆಕೆಯ ಮನೋವ್ಯಾಪಾರವೇ ಬದಲಾಯಿತು. ಅವಳ ಆ ಸ್ವಪ್ನಾನುಭವವೇ ಹಾಡುಗಳನ್ನು ಬರೆಯುವುದಕ್ಕೆ ನಾಂದಿಯಾಯಿತು ಎಂದು ಹೇಳಿಕೊಳ್ಳಲಾಗಿದೆ. ನಾರದರಿಂದ ಸ್ವಪ್ನದಲ್ಲಿ 'ಭೀಮೇಶಕೃಷ್ಣ' ಎಂಬ ಅಂಕಿತ ಸೂಚಿತವಾಯಿತಂತೆ.

ಭೀಮವ್ವನ ಸಂಭಾಷಣೆಯ ತಂತ್ರ ಅನನ್ಯವಾದುದು. ವರ್ಣನಾ ಕೌಶಲ್ಯ ಭೀಮವ್ವನ ಸಹಜ ಪ್ರವೃತ್ತಿ. ಆಕೆಯ ಹಾಡುಗಳಲ್ಲಿ ಕಣ್ಣಿಗೆ ಕಟ್ಟಿದಂತೆ ಭಕ್ಷ್ಯಭೋಜ್ಯಗಳ ವರ್ಣನೆ, ಹೆಂಗೆಳೆಯರ ಅಲಂಕಾರ ಆಭರಣಗಳ ವರ್ಣನೆ ವಸ್ತ್ರಾಭರಣಗಳಿಂದ ಅಲಂಕೃತರಾಗಿ ಉತ್ಸಾಹದಿಂದ ಪರಸ್ಪರ 'ನೋಡುತ ನಗುತ್ತ' ನಿಂತು ಮಾತನಾಡುತ್ತಿದ್ದ ಚಿತ್ರ ಎಳೆ ಎಳೆಯಾಗಿ ನಮ್ಮ ಕಣ್ಣಮುಂದೆ ಬರುತ್ತದೆ. ಭೀಮವ್ವ ಮುಖ್ಯವಾಗಿ ಸಂಪ್ರದಾಯ ಪ್ರಿಯತೆಯಾಗಿದ್ದಾಳೆ. ಭೀಮವ್ವನ ಶಾಕುಂತಲಾ ಚರಿತ್ರೆಯನ್ನು ಓದುತ್ತಾ ಹೋದರೆ ಅದನ್ನು ಹೆಚ್ಚು ಶ್ರಮಪಡದೆ ಸುಲಲಿತವಾಗಿ, ನಿರರ್ಗಳವಾಗಿ ಹಾಡಬಹುದು ಎನಿಸುತ್ತದೆ..

**ವಚನ ಮತ್ತು ಧ್ವನಿ**

**ವಚನ** : ಹರಪನಹಳ್ಳಿ ಭೀಮವ್ವ ತನ್ನ 'ಶಕುಂತಲೆ-ದುಷ್ಯಂತ ಮಹಾರಾಜನ ಹಾಡು' ಎಂಬ ಕವಿತೆಯಲ್ಲಿ ವಚನ ಮತ್ತು ಧ್ವನಿ ಎಂಬ ಎರಡು ಪ್ರಸಾರಗಳನ್ನು ಬಳಸಿಕೊಂಡಿದ್ದಾಳೆ. 'ವಚನ' ಶಕುಂತಲೆ ಮತ್ತು ದುಷ್ಯಂತರ ಬಗ್ಗೆ ಇರುವ ಕವಿತೆಯಾದರೂ ಇಲ್ಲಿ ವಚನದಲ್ಲಿ ಶಕುಂತಲೆಯ ಸ್ಥಿತಿಯು, ಪ್ರಕೃತಿಯ ವರ್ಣನೆಯು ಮುಂತಾದವುಗಳನ್ನು ಕುರಿತು ಹೇಳುತ್ತದೆ.

**ಧ್ವನಿ**: ಕಥೆಯು ಮುಂದುವರಿಯುವುದು. ವಚನದ ನಂತರ ಧ್ವನಿಯಲ್ಲಿ ಹಾಡಿನ ಮುಂದುವರಿದ ಭಾಗ ಕುರಿತು ವಿವರಣೆಯನ್ನು ಹೇಳುವುದು.

ಉದಾಹರಣೆ:

ಹಡೆದವರು ಬಿಟ್ಹೋಗಿ ಅಡವಿ ಅರಣ್ಯದಲಿ
ಒಡ್ಡಲಸ್ತು ಒಣಗಿ ಬಾಯಿಬಿಡುತ ಸಂತಾಪದಲಿ
ಗಡಗಡನೆ ತಾನಾಗ ಹುಡಿಯಲ್ಲಿ ಹೊರುಳುತಲಿ
ದಡದಡನೆ ಕಣ್ಣೀರ ಸುರಿಸುತಲಿ ಅಳುತಿರಲು
ಗಿಡಗಿಡದಿ ಕುಳಿತ ಪಕ್ಷಿಗಳೆಲ್ಲ ನೋಡುತಲಿ
ಹಿಡಿದು ಜೇನುತುಪ್ಪ ತಂದ ಬಾಯೊಳಗ್ಹಾಕಿ
ಗುಡಿಗಟ್ಟಿ ನಿಂತವಾ ಬಿಸಿಲು ಬೀಳದೆ(ದಂತೆ) ಶಿಶುವಿಗೆ

ಹೀಗೆ ಅಲ್ಲಿ ನಡೆಯುವ ಸನ್ನಿವೇಶ ವರ್ಣನೆಯನ್ನು ಲೇಖಕಿಯು ಕಣ್ಣಿಗೆ ಕಟ್ಟುವಂತೆ ವರ್ಣಿಸಿದ್ದಾಳೆ. ಮಾತಿನ ರೂಪಕದಂತಿರುವುದನ್ನು ಪ್ರಮುಖವಾಗಿ ಗಮನಿಸಬಹುದು.

**ಧ್ವನಿ**

ಪಾತ್ರಗಳೊಂದಿಗೆ ನಡೆಯುವ ಸಂಭಾಷಣೆ

ಉದಾಹರಣೆ:

ನೀಡೋ ನೀಡೋ ನೀಡ್ವವರವ
ಆಡಿದ್ವಚನ ಮಾಡೋ ಸತ್ಯ

ತಾತನಿಲ್ಲದ ವ್ಯಾಳ್ಯದಲ್ಲಿ ಆತುರದಲಿ ಬಂದು ನೀವು
ಮಾತುಕೊಟ್ಟು ಮದುವೆಯಾದರೆ ತಾತ ಬಂದೇನೆಂಬುವರೆನಗೆ
ನಿನ್ನದೆಸೆಯಿಂದಲವರಾ ಘನ್ನತಪವ ಮಾಡವರು
ಎನ್ನ ಕರೆತಂದು ವರ ಪ್ರಸನ್ನನಾದನವರಿಗ್ಹರಿಯು
ರಂಭೆರಿರಲು ಗೊಂಬೆಯನ್ನು ಹಂಬಲಿಸುವುದ್ಯಾತಕಿನ್ನು
ಕುಂದು ಬರುವುದೆನನ್ನೀನು ನಂಬಲಾರೆ ನಿಮ್ಮನೆ ನಾನು
ಮುಚ್ಚುಮರೆಯ ಮಾತಿದೇನು ಮೆಚ್ಚಿಬಂದೆ ನಿನಗೆ ನಾನು
ಇಚ್ಛೆಪೂರ್ಣ ಮಾಡುವೆ ಎನ್ನಚ್ಛದರಸಿಯಾಗೆ ನೀನು
ಸ್ವಚ್ಛವಾದ ಚಂದ್ರಮನಂತೆ ಮಚ್ಛಲೋಚನೆ ಮುಖಬಾಯಿಂದ
ಅಚ್ಚಮುತ್ತು ಉದುರುವಂತೆ ಅಪೇಕ್ಷೆಯ ಮಾತಾಡಿದಳು.
ಪಟ್ಟದರಿಸಿ ಸುತಗೆ ರಾಜ್ಯಪಟ್ವಾಗಟ್ಟೋರೀಲೋಕದೊಳಗೆ
ಎನ್ಹೋಟ್ಟೆಲ್ಹುಟ್ಟಿದೆ ಸುತಗೆ ಅರಸು ಪಟ್ಟಗಟ್ಟೋದೆ ಇಷ್ಟವೆನೆಗೆ
ಸರ್ಪವೇಣಿ ನಿನ್ನ ಮಾತಿಗೆ ಒಪ್ಪಿಕೊಂಡು ವಚನವೀಗ
ಕೊಟ್ಟೆ ನಿನ್ನಸುತಗೆ ಅರಸು ಪಟ್ಟಗಟ್ಟಿದೆ ನಿಜವೀಗೆಂದನು.
ಅಂಗುಲಿಯಲ್ಲಿಟ್ಟ ವಜ್ರದುಂಗರವನು ತೆಗೆದು ಸತಿಯ
ಮುಂಗೈ ಹಿಡಿದು ಮುದ್ರಿಕೆಯಿಟ್ಟ ಅಂಗನೆಗಾಲಿಂಗನೆ ಕೊಟ್ಟ
ಚಂದದಿಂದ ಸತಿಯಕೂಡ ಗಾಂಧರ್ವಿವಾಹ ಮಾಡಿಕೊಂಡು
ಅಂದು ಸುರರು ಮಂತ್ರಾಕ್ಷತೆ ಮಂದಾರ ಮಲ್ಲಿಗೆ ಕರೆದರಾಗ
ಕಟ್ಟಿ ಕರಿಮಣಿ ಮಂಗಳಸೂತ್ರ ಬುಕ್ಕಿಟ್ಟು ಗಂಧ ಕುಂಕುಮ ಕುಸುಮ
ಹಚ್ಚಿದರನಸೂಯ ಪ್ರೇಮದ ಮುತ್ತಿನಾರತಿ ಬೆಳಗಿದರಾಗ
ಹಣ್ಣುಹಾಲು ಸಕ್ಕರೆ ಜೇನುತುಪ್ಪ ಘೃತವ ತಂದ ಬ್ಯಾಗ ಇಟ್ಟು ಭೂಮ
ಉಣಿಸಿ ವೀಳ್ಯಕೊಟ್ಟುಸಾಡ್ಯವ ಸುತ್ತಿದರಾಗ
ಗಿಡವ ನೋಡಿ ಬರುವೆವೆನುತ ನಡೆದರನಸೂಯ ಪ್ರೇಮದ ತಾವು
ಮಡದಿ ಸಹಿತ್ವಿಹಾರ ಮಾಡುತ ಪಡೆದು ಗರ್ಭವ ಧರಿಸಿದಳಾಗ
ನಾನು ಸ್ವಲ್ಪದಿವಸದಲ್ಲೆ ಆನೆವತಿಗೆ ಕರೆಸಿಕೊಂಬೆ ನೀನು
ಭೀಮೇಶಕೃಷ್ಣನಂಘ್ರಿಧ್ಯಾನ ಮಾಡುತಿರು ಇಲ್ಲೆಂದ.

ಹೀಗೆ ಧ್ವನಿಯೆಂಬ ಭಾಗದಲ್ಲಿ ಕವಿತೆಗಳು ಮುಗಿಯುತ್ತವೆ. ೬೧ ಭಾಗಗಳನ್ನಾಗಿ ಮಾಡಿಕೊಂಡು ಕವಿತೆಯನ್ನು ಹರಪನಹಳ್ಳಿ ಭೀಮವ್ವ ರಚನೆ ಮಾಡಿದ್ದಾಳೆ. ಈ ಕವಿತೆಯಲ್ಲಿ ಶಕುಂತಲೆ ಮತ್ತು ದುಷ್ಯಂತ ಇಬ್ಬರು ಕೂಡುವುದನ್ನು ಮಾಡಿ ಸುಖಾಂತ್ಯವಾಗುತ್ತದೆ.

**ವಚನ ೬೦ :** ಕಾಂತನಾದಂಥ ದುಷ್ಯಂತರಾಜನು ತನ್ನ
ಕಾಂತೆ ಶಕುಂತಲೆಯ ಕೂಡಿಕೊಂಡ ಕಥೆಯ
ಸಂತೋಷದಿಂದ್ಹೇಳಿ ಕೇಳಿದ ಜನಕ್ಕೆಲ್ಲ
ಸಂತಾನ ಸಂಪತ್ತು ಸಾಯುಜ್ಯ ಪದವಿ ಶ್ರೀ
ಕಾಂತ ಭೀಮೇಶಕೃಷ್ಣನು ಒಲಿದು ವರಗಳ ಕೊಡುವನು.

**ಧ್ವನಿ**

ಮಾಡೋಣೆ ಮುತ್ತೈದೇರು ಜೋಡು ಜೋತಿ ಆರತಿ
ಹಾಡಿಪಾಡಿ ಹರುಷದಿಂದ ಮಾಡುತಾಶೀರ್ವಾದವ
ಸಂತೋಷದಲಿ ಕಲಸಿಕೊಂಡು ಕೆಂಪು ಕದಲಾರತಿ
ಶಕುಂತಲೆ ದುಷ್ಯಂತರಾಯಗೆ ಮಂತ್ರಾಕ್ಷತೆಗಳ್ಹಾಕುತ
ರತ್ನ ವಜ್ರ ಮುತ್ತು ಮಾಣಿಕ್ಯದ್ವಸ್ತ್ರವಿಟ್ಹೋಯ್ಯಾರದಿ
ಬಿಟ್ಟಪತಿಯ ಮುಖವ ನೋಡಿ ಅತ್ಯಂತ್ಹರುಷದಿ ನಗುತ
ಕಾಮ ಮೋಹದಿ ಶಕುಂತಲೆಯ ಕರೆದು ತೊಡೆಯಲಿಟ್ಟ
ಭೀಮೇಶಕೃಷ್ಣನ್ನದಯವ ಪಡೆದ ಪಟ್ಟದರಸಿಗೆ.

ಕಾಳಿದಾಸನ ಅಭಿಜ್ಞಾನ ಶಾಕುಂತಲ ನಾಟಕವನ್ನು ನೋಡಿ ಸ್ವಯಂಪ್ರತಿಭೆಯಿಂದ ಉತ್ತಮವಾಗಿ ಕವಿತೆಯನ್ನು ಹರಪನಹಳ್ಳಿ ಭೀಮವ್ವನವರು ರಚಿಸಿದ್ದಾರೆ. ಇದು ಜನಪದದ ಶೈಲಿಯಲ್ಲಿ ಮೂಡಿ ಬಂದಿವೆ.

"ಸಣ್ಣ ಮಾಧವಿಗಿಡ ಅದರಿಂದ
ಬಣ್ಣದ ಎಲೆ ಹೂ ಕಾಯಿಂದ
ಕಣ್ವಪುತ್ರಿ ನೋಡಿ ಕಣ್ಣುಗಳಿಂದ
ಬಣ್ಣಿಸಿ ಮಾತನಾಡುವೂ ಚೆಂದ
ತಂದು ತಂದು ನೀರ್ಹಾಕುತಿರೆ
ಅದರಿಂದೆದ್ದಿತು ಒಂದಾಭ್ರಮರ
ಮಂದಗಮನೆ ಮೈ ಮೈಗೆ ಸುತ್ತ್ಹು
ರಿದು ಹೋಗೆಂದರೆ ಮುಂದಕೆ ಪೋಗದಲ್ಲಿ
ಸ್ತನದ ಮ್ಯಾಲೆ ಬಂದು ಕೂಡುವುದೆ
ಎದೆ ಬಗಲಿಲಿ ಸುತ್ತಿ ಸುತ್ತ್ಯಾಡುವುದೆ
ಸುಳಿಗುರುಳಿನ ಮ್ಯಾಲೆ ಸುಮ್ಮನೋಡ್ಯಾಡಿ
ಕರ್ಣದಲಿ ಬಂದ್ವಾರ್ತೆಗಳ್ಹೇಳುವುದೆ

ಅನುಸೂಯ ಪ್ರೇಮದ ಇವನ್ಯಾರೆ
ಮನಸಿಜನಂತೆನ್ನ ಮನಕೆ ತೋರೆ
ಕನಕ ಕನ್ನಡಿಯಂಥ ಗಲ್ಲದಲ್ಲಿತ್ತಿ
ಸುಮ್ಮನೆ ಕೊಡುವುದು ತುಟಿ ಬಾಯಲ್ಲಿ
ಹೊಡೆದರ್ಹೋಗದು ಇದಕೇನು ಧಾಡಿ
ಬಂದಡರೋದು ಮೋರೆ ಮೋರೆಗೆ
ಪೀಡೆ ತಡಯಲಾರಿದರ ಬಾಧೆಯ ಖೋಡಿ ಈ
ಗಿಡದ್ದಿಂದೆತು ನೋಡೀಗುಂಗಾಡಿ
ಸಂತೋಷದಲಿ ವನಕೆ ಬಂದು ನಿ
ರಂತರ ನೀರು ಚೆಲುವೆ ನಾನು
ಎಂಥ ಭ್ರಮರ ಎದೆ ಒಡೆಸಿ ಎನ್ನನು
ಸಂತಾಪಕ್ಕೆ ಗುರಿ ಮಾಡುವುದೀಗ
ಬಿಡು ಬಿಡು ಅಂದರೆ ಬಿಡೋದಲ್ಲ
ಬಿಡಿಸುವೋದು ಭೀಮೇಶಕೃಷ್ಣನೆ ಬಲ್ಲ
ತಡೆಯಲಾರಿದರ ರಾಗದ ಸೊಲ್ಲ
ಬಂದ್ಹೊಡೆದೋಡಿಸುವ ಪುರುಷರಿಲ್ಲ"[೫೫]

**ರಂಗಗೀತೆ (ವೈಕುಂಟರಾಜು ಬಿ.ವಿ. ಕನ್ನಡ ರಂಗಭೂಮಿ-೨೦೦೭ ಸನತ್ ಪ್ರಕಾಶನ, ಬೆಂಗಳೂರು,(ಪು.ಸಂ.೧೫೫-೧೬೦)**

**ಶಾಕುಂತಲ ನಾಟಕದ ಹಾಡು**

ರಾಗ: ಸುರಟಿ

ರೂಪಕ: ತಾಳ

"ಆಸರಿಮಪನಿಸ ಆಸನಿದಪಮಗಪಮರೀ
ದುಷ್ಯಂತ ಶಾಕುಂತಲೆಯರ ಯುಗಗಳ ಗೀತೆಶ್ರಿ
ಪಲ್ಲವಿ: ದುಷ್ಯಂತ ನಾಗವೇಣಿ ನಗರಿಗೆ ನಾಂ ಪೋಗಿಬರುವೆನೆ
ಅರಸುತನದ ಕಾರ್ಯವನ್ನ ತೊರೆತಗೊಳಿಪ್ಪುದು
ಹರುಷದಿಂದ ಕಳುಹಿಸು ನೀಂ ಮರುಗಲಾಗದು
ಶಾಕುಂತಲ: ಇಂತು ಪೇಳಿ ಹೋಗಿ ಸೇರಲ್ ಆಂತಃಪುರವನು
ಅಂತರಂಗವೆಂತಿಹುದೋ, ಕಾಂತ ಕಾಣೆನು

ದುಷ್ಯಂತ: ಅರಸಿ ನಿನ್ನ ಅಗಲಿ ನಿಮಿಷ ಇರಲು ಒಲ್ಲೆನೇ
ಕರಸಿಕೊಂಬೆ ಬೇಗ ನಿನ್ನ ಸರಸಿಜಾನವೇ
ಶಾಕುಂತಲ: ತಡೆಯಲಾರೆ ನಿನ್ನನು ನಾ- ಬಿಡಲುಲಾರೆನೋ
ಪೊಡವಿಗೊಡೆಯ ಪೋಪೆಯಾ ಸಂಗಡಲೆ ಬರುವೆನೋ"[೫೬]

**ನಾಟಕಗಳು**

ಕಾಳಿದಾಸನ ಶಾಕುಂತಲ ನಾಟಕದ ಪ್ರಭಾವದಿಂದ ಕನ್ನಡ ಸಾಹಿತ್ಯದಲ್ಲಿ ಮೂಡಿಬಂದ ನಾಟಕವನ್ನು ಈ ಕೆಳಗಿನಂತೆ ವಿಶ್ಲೇಷಿಸಲಾಗಿದೆ.

**ಲೋಕ ಶಾಕುಂತಲ**

ಕಾಳಿದಾಸನ ಅಭಿಜ್ಞಾನ ಶಾಕುಂತಲ ಆಧರಿಸಿ ಕೆ.ವಿ.ಸುಬ್ಬಣ್ಣನವರು ರಂಗ ಪ್ರಯೋಗಕ್ಕೆ ಅಳವಡಿಸಿದ್ದಾರೆ. ಹಾಗೂ ಆ ರಂಗ ಪ್ರಯೋಗವನ್ನು ಪುಸ್ತಕ ರೂಪದಲ್ಲಿ ಪ್ರಕಟಿಸಿದ್ದಾರೆ. ವಾಸ್ತವಕ್ಕೆ ತಕ್ಕಂತೆ ನಾಟಕದಲ್ಲಿ ಪಾತ್ರಗಳನ್ನು ಹಾಗೂ ಸಂಭಾಷಣೆಗಳನ್ನು ಬದಲಾವಣೆ ಮಾಡಿಕೊಂಡಿದ್ದಾರೆ. ಈ ನಾಟಕ ರಂಗ ಪ್ರಯೋಗ ನಡೆದಿದ್ದು ೧೯೮೫-೮೬ರಲ್ಲಿ. ನೀನಾಸಮ್ ತಿರುಗಾಟ ತಂಡದಿಂದ ಇದಕ್ಕೂ ಮೊದಲೇ ದೆಹಲಿಯ ರಾಷ್ಟ್ರೀಯ ನಾಟಕಶಾಲೆಯ ವಿದ್ಯಾರ್ಥಿಗಳಿಗಾಗಿ ೧೯೮೧ರಲ್ಲಿ ಬರೆದು ೧೯೮೨ರ ಮಾರ್ಚ್ ತಿಂಗಳಲ್ಲಿ ನಾಲ್ಕು ಪ್ರದರ್ಶನ ನಡೆದಿತ್ತು. ಈ ನಾಟಕದಲ್ಲಿ ಮುಖ್ಯವಾಗಿ ಭಾಷೆಯ ಪ್ರಯೋಗ ಅತ್ಯಂತ ಸರಳವಾಗಿದೆ. ಶಕುಂತಲೆ-ದುಷ್ಯಂತನ ಅರಮನೆಗೆ ಬಂದಾಗ ನಡೆಯುವ ಸಂಭಾಷಣೆ ಮತ್ತು ಸಂಸ್ಕೃತದ ವಾಕ್ಯಗಳಿಂದ ಕೂಡಿದೆ. ನನಗೆ ಮುಖ್ಯವಾಗಿ ನೋಡಬೇಕಾದ ಭಾಗ ಅನ್ನಿಸಿದ್ದು. ಬೆಸ್ತರನ್ನು ಹಿಡಿದು ತರುವ ರಾಜನ ಸೇವಕರು ಬಳಸುವ ಭಾಷೆ ಮುಖ್ಯವಾಗಿ ಕಂಡುಬರುತ್ತದೆ. ಪ್ರವೇಶ ನಿರ್ಗಮನಗಳಿಂದ ಮೊದಲುಗೊಂಡು ರಥ ಪ್ರಯಾಣ ಮುಂತಾದವೂ ಕೂಡಿ ನಾಟಕದಲ್ಲಿ ಬರುವ ಎಲ್ಲ ಪರಿಚಲನೆಗಳೂ ಇತರ ರಂಗಚಲನೆಗಳೂ ಲಯಬದ್ಧವಾದ ನೃತ್ಯಚಲನೆಗಳೇ ಆಗಿವೆ. ಭಾಗವತನ ಹಾಡು ಬರುವ ಸಂದರ್ಭದಲ್ಲಿ ಎದುರಿನ ಪಾತ್ರ ಅಭಿನಯಿಸಿ ನರ್ತಿಸುತ್ತದೆ. ಜಿಂಕೆ ಮುಂತಾದುವನ್ನು ನಟನಟಿಯರೇ ಸಾಂಕೇತಿಕ ಸನ್ನೆಗಳನ್ನು ಬಳಸಿ ಅಭಿನಯಿಸುತ್ತಾರೆ. ಈ ನಾಟಕವನ್ನು ಹದಿನೆಂಟು ದೃಶ್ಯಗಳನ್ನು ಮಾಡಿಕೊಂಡು ನಾಟಕವನ್ನು ಬರೆದಿದ್ದಾರೆ.

ಉದಾಹರಣೆಗೆ: ಬೆಸ್ತನನ್ನು ಹಿಡಿದು ತರುವ ಸನ್ನಿವೇಶದಲ್ಲಿ ರಾಜನ ಸೇವಕರು ಬಳಸುವ ಭಾಷೆಯನ್ನು ಇಲ್ಲಿ ಗಮನಿಸಬಹುದು.

**ನಗರ ಪಾಲಕ ಶ್ಯಾಲ,** ಅವನ ಹಿಂದೆ ಧೀವರ(ಮೀನುಗಾರ)ನೊಬ್ಬನನ್ನು ಬಂಧಿಸಿ ಕರೆ ತಂದಿರುವ ಸೂಚಕ ಮತ್ತು ಜಾನುಕ ಎಂಬ ಇಬ್ಬರು ಭಟರು ಪ್ರವೇಶಿಸುತ್ತಾರೆ.

**ಸೂಚಕ:** (ಧೀವರನನ್ನು ಹೊಡೆಯುತ್ತ) ಏ ಕಳ್ಳ ಸೂಳೆಮಗನೆ, ಹೇಳು, ಹೇಳು ಮುತ್ತಿನಲ್ಲಿ ಹೆಸರು ಕೆತ್ತಿರೋ ಈ ರಾಜರ ಚಿನ್ನದ ಉಂಗುರವನ್ನು ಎಲ್ಲಿ ಕದ್ದೆ?

**ಧೀವರ:** ಬಡೀಬೇಡಿ ಬುದ್ಧಿ ನಾ ಅಂಥೋವನಲ್ಲ.

**ಜಾನುಕ:** ಥೇಥೇ ಅಂಥೋನು ಅಲ್ವೇ ಅಲ್ಲ. ಈ ಬೋಳಿಮಗ, ದಾನಕ್ಕೆ ಯೋಗ್ಯನಾದ ಸದ್ಬ್ರಾಹ್ಮಣ ಇವನು ಅಂತ, ಮಹಾರಾಜರೇ ಇವನಿಗೆ ಇದನ್ನು ದಾನ ಕೊಟ್ಟರು ಅಲ್ವೇನೋ?(ಒದೆಯುತ್ತಾನೆ)

**ಧೀವರ:** ಒದೀಬೇಡಿ, (ಶಾಲನ ಕಡೆಗೆ) ನನ್ನ ಮಾತು ಸ್ವಲ್ಪ ಕೇಳಿ, ದೇವರೂ, ಸಕ್ರಾತಾರ ತೀರ್ತಾ ಇಲ್ಲವಾ, ಅದರ ಬದೀಲೇ ವಸ್ತಿ ಮಾಡಿಕೊಂಡಿರೋ ಬೆಸ್ತರೋನು ನಾನು.

**ಸೂಚಕ:** ಏಯ್, ನಾವೇನು ನಿನ್ನ ಜಾತಿ ಕೇಳಿದೆವೇನೋ, ಕಳ್ಳಸೂಳೆ ಮಗನೆ?

**ಶ್ಯಾಲ:** (ಸೂಚಕನಿಗೆ, ಅಧಿಕಾರದಿಂದ) ಏಯ್ ಕತ್ತೆ ಮಗನೆ ಆ ರಂಡೆಮಗ ಏನು ಹೇಳಿಕೋತಾನೋ ಹೇಳಲಿ, ಮಧ್ಯೆ ತಡೀಬೇಡ.

**ಸೂಚಕ:** ಅಪ್ಪಣೆಸ್ವಾಮಿ, ಹುಂ, ಹೇಳಪ್ಪಾ ಹೇಳು.

**ಧೀವರ:** ದೇವರೂ, ನೀರಲ್ಲಿ ಗಾಳ ಹಾಕಿ, ಬಲೆಬೀಸಿ ಮೀನು ಹಿಡಕೊಂಡು ಅದರಿಂದ ಬದುಕು ಸಾಗಿಸತಿರೋನು ನಾನು.

**ಶಾಲ್ಯ:** ಭಾರೀ ಪರಿಶುದ್ಧವಾದ ಜೀವನ, ರಂಡೇ ಮಗನದು... ಹೇಳು, ಆ ಮೇಲೆ?

**ಧೀವರ:** ಗಾಳ ಹಾಕಿ ಮೀನು ಹಿಡೀತಾ ಇದ್ದೆ, ದೇವರೂ ಒಂದು ಬಾರೀ ಕೆಂಪು ಮೀನು ಸಿಕ್ಕಿತು. ಮನೇಗೆ ತಂದು ಆ ಮೀನನ್ನು ಕತ್ತರಿಸಿದಾಗ, ಅದರ ಹೊಟ್ಟೇಲಿ ಈ ಚಿನ್ನದ ಉಂಗುರ ಸಿಕ್ಕಿತು. ನನ್ನ ಹೆಂಡತಿ ಹೇಳಿದಳು. ಈ ಉಂಗುರ ನಮಗ್ಯಾಕೆ ಅಂದಳು.. ತಗೊಂಡು ಹೋಗಿ ಮಾರಿ ಬನ್ನಿ ಅಂದಳು, ಮಾರೋಕೆ ಅಂತ ಪೇಟೆಗೆ ತಂದೆ. ಇಲ್ಲಿ ತಮ್ಮ ಕೈಗೆ ಸಿಕ್ಕಿಬಿದ್ದೆ. ದೇವರೂ, ಕೊಲ್ಲತೀರಾ ಕೊಲ್ಲಿ ಬಿಡತೀರಾ ಬಿಡಿ. ನಿಜವಾಗಿ ನಡೆದ ಸಂಗ್ತಿ ಹೇಳಿದ್ದೇನೆ.

**ಶಾಲ್ಯ:** "ಜಾನುಕ, ಇವನ ಮೈ ಮೀನಿನ ಹಸೀ ವಾಸನೆ ಸೂಸುತಿದೆ. ಈ ರಂಡೇಮಗ ಮೀನು ತಿನ್ನೋ ಬೆಸ್ತರವನೇ ಹೌದು. ಮೀನು ತಿನ್ನತಾನೋ ಅಥವಾ ನನ್ನ ಮಗ ಮೊಸಳೇನೇ ತಿನ್ನತಾನೋ. ಉಂಗುರದ ಸಂಗತಿ ಮಾತ್ರ ಕೂಲಂಕಷ ವಿಚಾರಣೆ ನಡೀಬೇಕು. ಈ ಬೆಸ್ತ ಬೋಳಿ ಮಗನಿಗೆ ಸದ್ಯ ಶಿಕ್ಷೆ ಕೊಡೋ ಹಂಗಿಲ್ಲ. ವಿಚಾರಣೆ ಆಗಿ ಅಪರಾಧಿಯ ಅಪರಾಧ ಸಾಬೀತು ಆಗೋತನಕ ಶಿಕ್ಷೆ ಕೊಡದು ಅಂತ ಮಹಾರಾಜರ ಆಜ್ಞೆ. ಅಂತಃಕರುಳು ಅವರದು... ತೀಳಿತಾ, ಈಗ ಇವನಿಗೆ ಯಾವುದೇ ಶಿಕ್ಷೆ ಕೊಡೋ ಹಂಗಿಲ್ಲ. ಹಾದಿ ಮೇಲೆ ಹೋಗ್ತಾ ನಾಲ್ಕು ಒದೇ ಕೊಡೋದಲ್ವೆ... ಯಾವುದಕ್ಕೂ ಇವನನ್ನು ಈಗ ಅರಮನೆ ಹತ್ತಿರ ಒಯ್ಯಬೇಕು. ನಡೀರಿ..."[೫೭]

ಯಕ್ಷಗಾನ ಅಂಶಗಳನ್ನು ಉಪಯೋಗಿಸಿಕೊಂಡು ನ್ಯಾಶನಲ್ ಸ್ಕೂಲ್ ಆಫ್ ಡ್ರಾಮಾದ ವಿದ್ಯಾರ್ಥಿಗಳಿಗೆ ಒಂದು ನಾಟಕ ಮಾಡಿಸುವಂತೆ ಬಿ.ವಿ.ಕಾರಂತರು ಕೆ.ವಿ.ಸುಬ್ಬಣ್ಣ ಅವರಿಗೆ ಸೂಚಿಸಿದ್ದರಂತೆ. ಅದ್ದರಿಂದ ೧೯೮೭ರಲ್ಲಿ ಮಾರ್ಚ್‌ನಲ್ಲಿ ನಡೆದ 'ಲೋಕ ಶಾಕುಂತಲ' ಪ್ರದರ್ಶನವಾಗಿದೆ.

'ಲೋಕ ಶಾಕುಂತಲ'ವನ್ನು ರೂಪಿಸಲು ಲೇಖಕರು ಕರ್ನಾಟಕದ ಕರಾವಳಿಯಲ್ಲಿ ಪ್ರಚಲಿತವಿರುವ 'ಯಕ್ಷಗಾನ'ವೆನ್ನುವ ವಿಶಿಷ್ಟ ರಂಗ ಪ್ರಕಾರವನ್ನು ಆಯ್ದುಕೊಂಡಿದ್ದಾರೆ.

ಕಾಳಿದಾಸನ ಅಭಿಜ್ಞಾನ ಶಾಕುಂತಲ ನಾಟಕದ ಸಂಪೂರ್ಣ ಭಾಗವನ್ನು ತೆಗೆದುಕೊಂಡಿಲ್ಲ. ಕೆಲವು ಭಾಗಗಳನ್ನು ಮಾತ್ರ ಆಯ್ದುಕೊಂಡಿದ್ದಾರೆ. ಯಕ್ಷಗಾನದ ರಂಗಪದ್ಧತಿಯನ್ನಾದರೂ ಅದರ ಸಾಂಪ್ರದಾಯಿಕ ಹಿರಿತನದಲ್ಲಿ ಸ್ವೀಕರಿಸಿಕೊಂಡಿಲ್ಲ. ಇದಕ್ಕೆ ಕಾರಣ ನಿರ್ಮಿಸುವ ರಂಗಕೃತಿ ಆತ್ಯಂತಿಕವಾಗಿ ಕೇವಲ ಕೆ.ವಿ.ಸುಬ್ಬಣ್ಣನವರ ಅನುಭವಕ್ಕೇ ಜವಾಬ್ದಾರವಾಗಿರತಕ್ಕದ್ದು. ಕಾಳಿದಾಸನನ್ನೋ ಯಕ್ಷಗಾನವನ್ನೋ ಪ್ರಚುರಗೊಳಿಸುವುದು ಸರ್ವಥಾ ಲೇಖಕರ ಉದ್ದೇಶವಲ್ಲ ಎಂದಿದ್ದಾರೆ. ರಂಗಕೃತಿಯಲ್ಲಿ ಲೇಖಕರ ಅನುಭವವಗಳೇ ಮುಖ್ಯವಾಗಿವೆ. ಪ್ರಸ್ತುತದಲ್ಲಿ ವರ್ತಮಾನಕ್ಕೆ ತಕ್ಕಂತೆ ಅನುಭವಗಳನ್ನು ಹಂಚಿಕೊಂಡಿದ್ದಾರೆ.

ಕಾಳಿದಾಸನು ಚಿತ್ರಿಸಿರುವ ದೂರ್ವಾಸನ ಶಾಪದಿಂದಲೇ ಅಭಿಜ್ಞಾನ ಶಾಕುಂತಲಾ ನಾಟಕ ಪ್ರಸಿದ್ಧಿ ಪಡೆದಿದೆ. ಎಂದು ಕಾಳಿದಾಸನನ್ನು ಅನೇಕರು ಹೊಗಳಿದರೆ, ಕೆ.ವಿ.ಸುಬ್ಬಣ್ಣನವರು ಅದೇನು ಅಂತಹ ಮಹತ್ವ ಅಲ್ಲ ಎಂದಿದ್ದಾರೆ. ಇವೆಲ್ಲಾ ಕವಿಯಲ್ಲಿ ಕಾಣುವ ಕುಶಲತೆ ಎಂದಿದ್ದಾರೆ.

ಈ ಕೆಳಗಿನಂತೆ ಶಾಪ ಪ್ರಸಂಗದ ಬಗ್ಗೆ ವಿವರಿಸಿದ್ದಾರೆ. ಕೃತಿಯ ಜೀವಕೇಂದ್ರ ಅದೇ ಎನ್ನುವುದಾದರೆ, ದುಷ್ಯಂತನ ವಿಸ್ಮೃತಿಗೆ ಅದೇ ಏಕೈಕ ಕಾರಣ ಎನ್ನಬೇಕು. ಬಹುಜನ ವಿಮರ್ಶಕರ ಗ್ರಹಿಕೆ ಹಾಗೇಯೆ ಇದೆ. ಆದರೆ ತನ್ನ ಹಿಂದಿನ ಪ್ರೀತಿಯ ಹೆಣ್ಣುಗಳ ಬಗ್ಗೆ ಕೂಡ ಆತ ಅವಜ್ಞೆ ತೋರಿದ್ದನೆನ್ನುವುದನ್ನು ನಾಟಕವೇ ಸ್ಪಷ್ಟಗೊಳಿಸುತ್ತದಲ್ಲ. ಪ್ರಾಸಂಗಿಕವಾಗಿ ಅಲ್ಲ, ಬೇಕೆಂತಲೇ ಆ ಸಂಗತಿಯನ್ನು ಎತ್ತಿ ಹೇಳುತ್ತದೆ. ಅಂಶಾಂಶಗಳಲ್ಲಿನ ಬದಲಾವಣೆಗಳನ್ನೇ ಮುಟ್ಟಿನೋಡಿ ಮೂಸಿನೋಡಿ ಮೈಮರೆತು ಬಿಟ್ಟರೆ ಒಟ್ಟು ವಸ್ತುವಿನ ಅನನ್ಯತೆ ಯಾವುದು ಎನ್ನುವುದು ಹೇಗೆ ತಿಳಿದಿತು? ಕಾಳಿದಾಸನ ವಿಮರ್ಶಕರು ವ್ಯಾಸನ ಶಕುಂತಲೋಪಾಖ್ಯಾನಕ್ಕೂ ಕಾಳಿದಾಸನ ನಾಟಕ ಕೃತಿಗೂ ಇರುವ ಒಟ್ಟಂದದ ಭಿನ್ನತೆಯನ್ನು ಪರಿಗಣಿಸದೇ ಹೋಗಿದ್ದಾರೆ. ಆ–ಈ ವಸ್ತುಗಳ ನಡುವಣ ಭಿನ್ನತೆ ಲೇಖಕರಿಗೆ ಕಂಡ ರೀತಿ ಬೇರೆಯೇ. ವ್ಯಾಸನಲ್ಲಿ ಬರುವ ಶಕುಂತಲೋಪಾಖ್ಯಾನ ಮುಖ್ಯವಾಗಿ, ರಾಜ ಪರಂಪರೆಯೊಂದನ್ನು ದಾಖಲಿಸಿಕೊಡುವ ವಂಶಾವಳಿಯ ಭಾಗ, ಕ್ರಾನಿಕಲ್ ಎನ್ನಬಹುದಾದಂಥ ವಸ್ತು ಅದರದ್ದು. ಕಾಳಿದಾಸನ ನಾಟಕ ಅದಕ್ಕೆ ಭಿನ್ನವಾಗಿ, ರಾಜ್ಯ–ಸಾಮ್ರಾಜ್ಯದ ರಾಜಕೀಯ ವ್ಯವಸ್ಥೆಯಲ್ಲಿ ರೂಪುಗೊಂಡ ಜೀವನಕ್ರಮವೊಂದನ್ನು ಆ ಭಿತ್ತಿಯಲ್ಲಿ ವಿನ್ಯಾಸಗೊಂಡಿರುವ ಹೆಣ್ಣುಗಂಡಿನ ಸಂಬಂಧಗಳನ್ನು ಪಡಿಮೂಡಿಸಿಕೊಡುತ್ತದೆ.

ಕಾಳಿದಾಸ ಚಿತ್ರಿಸಿರುವ ಹಸ್ತಿನಾವತಿಯಂಥ ಪ್ರಬಲ ರಾಜ್ಯವ್ಯವಸ್ಥೆ ಸಾಧಿಕವಾಗುವುದು ಪ್ರಾಯಃ ಎರಡು ದಿಕ್ಕುಗಳಿಂದ. ಒಂದು–ಆಳುವವರ ಶಕ್ತಿ, ಸಾಮರ್ಥ್ಯ, ಪ್ರೀತಿ, ವಿಕ್ಷಣೆ ಮುಂತಾದವುಗಳಿಂದ, ಇನ್ನೊಂದು–ಇನ್ನೂ ಮುಖ್ಯವಾದದ್ದು, ಮೊದಲಿದ್ದ ಚಿಕ್ಕಪುಟ್ಟ ಬುಡಕಟ್ಟು ಆದಿಜನಾಂಗಗಳ ರಾಜ್ಯವ್ಯವಸ್ಥೆ. ವಾಣಿಜ್ಯ ಸಂಪರ್ಕಗಳಿಗೂ ಆ ಮೂಲಕ ಒಟ್ಟಿನ ಪ್ರಗತಿಗೂ ಆತಂಕವೆನ್ನಿಸಿ ಅದರ ಸ್ವಯಂ ನಾಶ ಅನಿವಾರ್ಯವಾಗಿರುವುದರಿಂದ ಅಥವಾ ಇತಿಹಾಸದ ಒಂದು ವಿಶಿಷ್ಟ ಹಂತದಲ್ಲಿ, ಒಟ್ಟು ಜನಪದದ ಆಕಾಂಕ್ಷೆ ಕೇಂದ್ರೀಕರಣ, ನಗರೀಕರಣ, ಹೆಚ್ಚು ಹೆಚ್ಚು ಸಮೃದ್ಧ ಜೀವನ ಇತ್ಯಾದಿಗಳ ಕಡೆ ಧಾವಿಸತೊಡಗಿರುವಾಗ ಇಂಥ ವ್ಯವಸ್ಥೆ ರೂಪುಗೊಳ್ಳುತ್ತದೆ ಎನ್ನಬಹುದು. ಈ ಬಗೆಯ ಬೃಹತ್ ರಾಜ್ಯ ಸಂಘಟನೆಗೆ ಅಸ್ತಿವಾರ ಸೋಪಾನಗಳಂತಿರುವ ಅಂಶಗಳೆಂದರೆ ವಿಶಿಷ್ಟ ವಿವಾಹಪದ್ಧತಿ, ಅದರ ಪರಿಣಾಮವಾದ ವಿಶಿಷ್ಟ ಕುಟುಂಬವ್ಯವಸ್ಥೆ, ವೈಯಕ್ತಿಕ ಹಕ್ಕುಗಳ ಕಲ್ಪನೆ, ವೈಯಕ್ತಿಕ ಆಸ್ತಿಯ ಹಾಗೂ ಅದರ ವಂಶಪಾರಂಪರ್ಯ ಅನುಭೋಗದ ಹಕ್ಕಿನಲ್ಲಿ ನಂಬಿಕೆ. ಆಸ್ತಿ ವೃತ್ತಿ ಆಸಕ್ತಿ ಮುಂತಾದವುಗಳ ವ್ಯವಸ್ಥೆಯ ಸಂಗೋಪನಕ್ಕಾಗಿ ನಿಯಮ, ನೀತಿ, ಕಾನೂನು, ರಕ್ಷಣೆ, ಶಿಕ್ಷೆ ಮುಂತಾದವು ರೂಪುಗೊಳ್ಳುತ್ತವೆ. ಇದರಿಂದ ಬದುಕು ಒಂದು ಸ್ತರದಲ್ಲಿ ಸಮೃದ್ಧಿ ಸಾಧಕವೂ ಭರವಸೆಯಿಂದ ಕೂಡಿದ್ದೂ ನಿಶ್ಚಿತ ವ್ಯವಸ್ಥೆಯಿಂದ ನೆಮ್ಮದಿ ಹುಟ್ಟಿಸುವಂಥದೂ ಆಗುತ್ತದೆ. ಈ ವ್ಯವಸ್ಥೆಯಿಂದ ಮಾನವನ ಸಾಧ್ಯತೆಗಳು ಹೆಚ್ಚು ಹೆಚ್ಚು ವಿಸ್ತಾರಗೊಳ್ಳುತ್ತ ಹೋಗುತ್ತವೆ. ಸಾಧ್ಯತೆ ಹೆಚ್ಚಾಗುತ್ತಾ ಹೊದ ಹಾಗೆಯೇ ಮಾನವನ ಆಸೆಗಳೂ ವಿಸ್ತರಿಸತೊಡಗುತ್ತವೆ. ಜೀವನವು ಹೆಚ್ಚು ಹೆಚ್ಚು ಸ್ಪರ್ಧಾತ್ಮಕವಾಗಿ ಬೆಳೆದುಕೊಳ್ಳುತ್ತದೆ. ಈ ವ್ಯವಸ್ಥೆ ಹಲವು ಸತ್ಫಲಗಳನ್ನು ಕೊಡುವ ಹಾಗೆಯೇ ಅನಿವಾರ್ಯವಾಗಿ ಹಲವು ದುಷ್ಫಲಗಳನ್ನು ಹುಟ್ಟಿಸಿಕೊಡುತ್ತದೆ. ದುರಾಸೆ, ಸ್ಪರ್ಧೆ, ಅಸೂಯೆ, ಹಿಂಸೆ, ಶೋಷಣೆ, ದಮನ ಮುಂತಾದ ಅಮಾನವೀಯ ಅಂಶಗಳು ಪ್ರಚೋದಿತಗೊಳ್ಳುತ್ತವೆ.

ನಾಟಕಕಾರ ನಾಟಕದಲ್ಲಿ ಉದ್ದಕ್ಕೂ ಉದ್ದೇಶಪೂರ್ವಕವಾಗಿ ಕೊಡುತ್ತ ಹೋಗುವ ವಿವರಗಳನ್ನು ಕಡೆಗಣಿಸದಿದ್ದಲ್ಲಿ, ಈ ಒಂದು ವಿಶಿಷ್ಟ ರಾಜ್ಯವ್ಯವಸ್ಥೆಯ ಮೇಲೆ ಹೇಳಿದ ಎಲ್ಲ ಅಂಶಗಳೂ ನಾಟಕದಲ್ಲೇ ಸ್ಪಷ್ಟವಾಗಿ ವ್ಯಕ್ತವಾಗುವುದನ್ನು ಕಾಣಬಹುದು. ಕಾಳಿದಾಸ ತಾನು ಕೇಳಿಕೊಂಡಿರಬಹುದಾದ ವರ್ತಮಾನವನ್ನು ಹಸ್ತಿನಾವತಿಯ ಚೌಕಟ್ಟಿನಲ್ಲಿ ಕಟ್ಟಿಕೊಳ್ಳುತ್ತಿದ್ದಾನೆ ಎನ್ನುವುದು ಸ್ಪಷ್ಟವೇ ಆಗಿದೆ.

ಹಸ್ತಿನಾವತಿಯ ರಾಜ್ಯವ್ಯವಸ್ಥೆಯನ್ನು ನಾಟಕ ಸೂಚಿಸಿರುವ ಹಾಗೆ, ಆಯಾ ನಾಗರಿಕ ಸಂಸ್ಕೃತಿ ಎಂದು ಗುರುತಿಸಿಕೊಳ್ಳಬಹುದು. ನಾಟಕದ ಮೊದಲಲ್ಲಿ ಬರುವ ಕಣ್ವಾಶ್ರಮದ ಪರಿಸರ, ಇನ್ನೊಂದು ಬಗೆಯ ವ್ಯವಸ್ಥೆಯನ್ನೇ ಸೂಚಿಸುತ್ತದೆ. ಇಲ್ಲಿನದು ಹಸ್ತಿನಾವತಿಗಿಂತ ಭಿನ್ನವಾದ, ಹೋಲಿಕೆಯಲ್ಲಿ ತುಂಬಾ ಸರಳವಾದ ಧಾರ್ಮಿಕ ಜೀವನಪದ್ಧತಿ. ಇಲ್ಲಿ ಮಿತವಾದ ಆಸೆ, ಅಷ್ಟಾಗಿ ಸ್ಪರ್ಧೆಯಿಲ್ಲ. ಒಟ್ಟಿನಲ್ಲಿ ಶಾಂತವೆಂದು ಕಾಣುವಂಥ ಭಾವಸಂಪನ್ನವಾದ ಬದುಕು ಆದಿಮ ಆರ್ಯರ ಪಶುಪಾಲಕ ಸಂಸ್ಕೃತಿಯ ಮುಂದಿನ ಹಂತ ಇದು ಎನ್ನಬಹುದೇನೋ. ಆದರೆ ಈ

ಬದುಕಾದರೂ ನಿಂತ ನೀರಿನ ಹಾಗಾಗಿ ಕ್ರಮೇಣ, ನಗರದ ಕಡೆ ಆಶ್ಚರ್ಯ, ಆಕರ್ಷಣೆ-ಆಸೆಗಳನ್ನು ಹುಟ್ಟಿಸುತ್ತಿರುವ ಸೂಚನೆ ಕಾಣುತ್ತದೆ.

ಸಾಮಾನ್ಯ ಬುಡಕಟ್ಟು ರಾಜ್ಯವ್ಯವಸ್ಥೆಗಿಂತಲೂ ತುಂಬಾ ಭಿನ್ನವಾದ ಧಾರ್ಮಿಕ ವ್ಯವಸ್ಥೆ ಇದು. ವಿವಾಹ-ಕುಟುಂಬ ಪದ್ಧತಿಗಳಲ್ಲೂ ವೈಯಕ್ತಿಕ ಆಸ್ತಿಗೆ ಸಂಬಂಧಿಸಿಯೂ ಇಲ್ಲಿರುವ ಧಾರ್ಮಿಕತೆ ಸರಳತೆ ಹಾಗೂ ಭಿನ್ನತೆಗಳಿಂದಾಗಿ ಇದು. ಬುಡಕಟ್ಟು ರಾಜ್ಯಗಳ ಹಾಗೆ ಸುಲಭವಾಗಿ ಸಾಮ್ರಾಜ್ಯ ವ್ಯವಸ್ಥೆಗೆ ಬಲಿಯಾಗುವಂಥದಲ್ಲ. ಆದ್ದರಿಂದ ಚಾಣಾಕ್ಷವಾದ ರಾಜತ್ವ ವ್ಯವಸ್ಥೆ ಇದರೊಡನೆ ವ್ಯವರಿಸುವ ರೀತಿಯೇ ಬೇರೆ. ಅಲ್ಲಿನ ಧಾರ್ಮಿಕ ಜೀವನದ ಬಗ್ಗೆ ಗೌರವ ತೋರಿಸಿ, ಅದಕ್ಕಾಗಿ ಅವರಿಗೆ ತೆರಿಗೆಯನ್ನು ಮಾಫಿ ಮಾಡಿ ಜೊತೆಗೆ ಕೆಲಮಟ್ಟಿನ ಸ್ವಾತಂತ್ರ್ಯವನ್ನು ನೀಡಿರುವುದು ಅವರ ಧಾರ್ಮಿಕ ಕ್ರಿಯಾಚರಣೆಗಳಿಗೆ ವನ್ಯ ಅಸುರೀ ಜನಪದಗಳಿಂದ ವಿಘ್ನ ಉಂಟಾಗದ ಹಾಗೆ ರಕ್ಷಣೆ ನೀಡುವುದು, ತನ್ನ ವ್ಯವಸ್ಥೆಯನ್ನು ಭದ್ರಗೊಳಿಸಿಕೊಳ್ಳಲು ಉಪಾಯದಿಂದ ಪರೋಕ್ಷವಾಗಿ ಇಲ್ಲಿನ ಧಾರ್ಮಿಕತೆಯ ಪ್ರಯೋಜನ ಪಡೆದುಕೊಳ್ಳವುದು ಮುಂತಾಗಿ ಕಾಣುತ್ತೇವೆ.

ಗೌರವಕ್ಕೆ ಪರಸ್ಪರ ವಿಶ್ವಾಸ ಮಾತ್ರವಲ್ಲದೆ ಭಯವೂ ಕಾರಣವಿರಬೇಕು. ನಗರಕ್ಕೆ ಅರಣ್ಯದ ಕಡೆ ಅರಣ್ಯಕ್ಕೆ ನಗರದ ಕಡೆ ದೂರದ ಆಕರ್ಷಣೆಯುಂಟು. ಹಾಗೆಯೇ ಸಮೀಪಗೊಂಡಾಗ ವಿಕರ್ಷಣೆಯೂ ಉಂಟು. ಹತ್ತಿರವಾದಾಗ ನಗರಕ್ಕೆ ಅರಣ್ಯ ಬೇಸರ ಹುಟ್ಟಿಸುತ್ತದೆ. ಅರಣ್ಯಕ್ಕೆ ನಗರ ಅಸಹ್ಯವೆನಿಸುತ್ತದೆ.

ಇವಲ್ಲದೆ ಇನ್ನೆರಡು ಬೇರೆ ಬೇರೆಯಾದ ಸಂಸ್ಕೃತಿ ಪರಿಸರಗಳೂ ನಾಟಕದಲ್ಲಿ ಸೂಚಿತವಾಗಿವೆ. ಒಂದು ವರ್ಗ ಸಂಸ್ಕೃತಿ. ವಿವಾಹ-ಕುಟುಂಬ-ವೈಯಕ್ತಿಕ ಆಸ್ತಿ-ಜೀವನ ಸಾಧನೆ ಮುಂತಾದವುಗಳಲ್ಲಿ ಈ ಸಂಸ್ಕೃತಿಗೆ ತನ್ನದೇ ಪ್ರತ್ಯೇಕ ವೈಶಿಷ್ಟ್ಯವಿದೆ. ಪ್ರಾಯಶಃ ಇದು ವಿದೇಶಿಯವೂ ಹೆಚ್ಚು ಸಮೃದ್ಧವೂ ಬಲಶಾಲಿಯೂ ಆಗಿರುವುದರಿಂದ ಹಸ್ತಿನಾವತಿ ಕೂಡ ಅದಕ್ಕೆ ವಿಧೇಯವಾಗಿ ಆರಾಧಕವಾಗಿ ನಡೆದುಕೊಳ್ಳುತ್ತದೆ. ಸ್ವರ್ಗಸಂಸ್ಕೃತಿ ಹಲವು ವಿಷಯಗಳಲ್ಲಿ ಹಸ್ತಿನಾವತಿಯ ರಾಜತ್ವದ ನೆರವನ್ನು ಅಪೇಕ್ಷಿಸುವುದರಿಂದ ಇದರ ಬಗ್ಗೆ, ಅದು ವಾತ್ಸಲ್ಯವನ್ನೇ ಬೆಳೆಸಿಕೊಂಡಿದೆ. ವಾತ್ಸಲ್ಯದ ಮೂಲಕ ಬೇಕಾದಾಗ ಇದನ್ನು ತನ್ನ ಅನಗತ್ಯಕ್ಕೆ ದುಡಿಸಿಕೊಳ್ಳುತ್ತದೆ. ಇನ್ನೊಂದು ಸ್ವರ್ಗ ಮರ್ತ್ಯಗಳೆರಡರ ನಡುವಣ ಹಂತದಲ್ಲಿರುವ ಹೇಮಕೂಟ ನಾಟಕದಲ್ಲಿ ಬರುವ ವರ್ಣನೆಗಳ ಪ್ರಕಾರ ಇದು ಆರ್ಯ ಸಂಸ್ಕೃತಿಗಿಂತ ಅತ್ಯಂತ ಭಿನ್ನವಾದ ಜೀವನಕ್ರಮವನ್ನು ರೂಢಿಸಿಕೊಂಡು ಶ್ರವಣಸಂಸ್ಕೃತಿ, ಪ್ರಾಯಶಃ ಆರ್ಯ ಸಂಸ್ಕೃತಿಯ ಜಾಯಮಾನಕ್ಕೆ ಬಂದಂಥ, ಸುಲಭವಾಗಿ ಅರ್ಥವಾಗದಂಥ, ಆಶ್ಚರ್ಯ ಹುಟ್ಟಿಸುವಂತಹ ವಿಲಕ್ಷಣ ಜೀವನಪದ್ಧತಿಯಾಗಿದೆ.

ಯಾವುದೇ ರಾಜಕೀಯ ವ್ಯವಸ್ಥೆಯಾದರೂ ಅದು ಅಲ್ಲಿನ ಜೀವನ ಪರಿಸರ ಮತ್ತು ಸಂಸ್ಕೃತಿಗಳ ಪ್ರತಿಬಿಂಬವಾಗಿರುತ್ತದೆಯಷ್ಟೇ? ಪ್ರಬಲವಾದ ಸಾಮ್ರಾಜ್ಯಶಾಹಿ ಬೆಳೆದುಕೊಳ್ಳುತ್ತಿರುವ ಸಂದರ್ಭದಲ್ಲಂತೂ ಈ ಮಾತು ಹೆಚ್ಚು ಸತ್ಯ. ಕಾಳಿದಾಸ ತನ್ನ ನಾಟಕದಲ್ಲಿ ರಾಜಕೀಯ

ವ್ಯವಸ್ಥೆಯ ಚಿತ್ರವನ್ನು ಸ್ಫುಟಗೊಳಿಸಿ ಆ ಮೂಲಕ ಇಡೀ ಪರಿಸರದ ಕಲ್ಪನೆಯನ್ನು ಮೂಡಿಸಿಕೊಟ್ಟಿದ್ದಾನೆ. ಅನುಭವವೆನ್ನುವುದು ವ್ಯಕ್ತಿಯದೇ ಎನ್ನಿಸಿದರೂ ಅದು ರೂಪುಗೊಳ್ಳುವುದು ಆಯಾ ವಿಶಿಷ್ಟ ಪರಿಸರ ಹಾಗೂ ವಿಶಿಷ್ಟ ವ್ಯಕ್ತಿತ್ವಗಳ ಪರಸ್ಪರ ಸಂಘರ್ಷ ಸಮ್ಮೇಳಗಳಿಂದ ಅಲ್ಲವೆ? ಕಾಳಿದಾಸನ ನಾಟಕದ ನಕ್ಷೆ ಅದನ್ನೇ ಸೂಚಿಸುತ್ತದೆ. ಭಿನ್ನ ಸಂಸ್ಕೃತಿಗಳ ಮಧ್ಯೆ ತನ್ನದನ್ನು ಸಂಗೋಪಿಸಿಕೊಂಡು ಬಾಳಲು ಸ್ಪರ್ಧಿಸಿ ನಿಂತಿರುವ ಹಸ್ತಿನಾವತಿಯ ರಾಜತ್ವ, ಈ ರಾಜತ್ವದ ಆರ್ಯ ನಾಗರಿಕ(ಹೆಣ್ಣು–ಗಂಡಿನ) ಪ್ರೀತಿಯ ಕಥೆ ಇದು ನಕ್ಷೆಯಾಗಿದೆ.

ದುಷ್ಯಂತ ಹಸ್ತಿನಾವತಿಯ ಪ್ರತಿಷ್ಠಿತ ರಾಜ, ರಾಜತ್ವ–ಸಾಮ್ರಾಜ್ಯ ವ್ಯವಸ್ಥೆಯಲ್ಲಿ ರಾಜನಾದವನಿಗೆ ಅನನ್ಯವಾದ ಗಣ್ಯತೆಯೂ ಅಪಾರವಾದ ಅಧಿಕಾರ ಐಶ್ವರ್ಯಗಳೂ ಲಭಿಸಿ ಬಿಡುತ್ತವೆ.

ಉದಾಹರಣೆಗೆ ರಾಜಪ್ರಭುತ್ವದಲ್ಲಿ ಜನ ತಮಗೆ ಸಂತಾನವಿಲ್ಲದಿದ್ದರೆ ಒಪ್ಪುವುದಿಲ್ಲ. ರಾಜನಿಗೆ ಸಂತಾನವಿಲ್ಲದಿದ್ದರೆ ಹೆಚ್ಚು ಚಿಂತಾಕ್ರಾಂತರಾಗುತ್ತಾರೆ. ಸಂತಾನವಿಲ್ಲದವರ ಕುಟುಂಬಗಳನ್ನು ಆಸ್ತಿಯನ್ನು ರಕ್ಷಿಸಲು ರಾಜ ಇರುತ್ತಾನೆ. ಆದರೆ ರಾಜನೇ ನಿಸ್ಸಂತಾನನಾದಾಗ ರಾಜ್ಯವೂ ಎಲ್ಲ ಕುಟುಂಬಗಳೂ ಅನಾಥವಾಗಿ ಬಿಡುತ್ತವಲ್ಲ. ಅಪಾರವಾದ ಅಧಿಕಾರವನ್ನು ವ್ಯವಸ್ಥೆ ಸಂಗೋಪನೆಯ ವ್ಯಾಪಕವಾದ ಆವಿಶ್ರಮ ಕರ್ತವ್ಯವನ್ನು ಪಡೆದುಕೊಂಡಿರುವ ರಾಜ ಅದರಿಂದಾಗಿ ತನ್ನ ಸಹಜ ಮಾನವೀಯ ವ್ಯಕ್ತಿತ್ವವನ್ನು ಬಲಿ ಕೊಟ್ಟು ಅಧಿಕಾರಕ್ಕೆ ಮಾತ್ರವಾಗಿ ಬದುಕಬೇಕಾಗುತ್ತದೆ. ಮನುಷ್ಯ ವ್ಯಕ್ತಿತ್ವದ ಮಿತಿಯನ್ನು ಮೀರಿಕೊಳ್ಳಲು ಹೋಗಿ ಮನುಷ್ಯತ್ವಕ್ಕೇ ಎರವಾಗಬೇಕಾಗುತ್ತದೆ. ತಮ್ಮನ್ನು ಆಳಲು ಒಬ್ಬ ನಾಯಕನನ್ನು ಸೃಷ್ಟಿ ಮಾಡುವಾಗ, ಜನತೆ ಆತ ಮನುಷ್ಯತ್ವ ಮಿತಿಗಳನ್ನು ಮೀರಿಕೊಳ್ಳಲು ಪ್ರಯತ್ನಿಸುವಾತ, ಮತ್ತೊಂದು ದಿಕ್ಕಿನಿಂದ ತನ್ನ ಮನುಷ್ಯತ್ವವನ್ನೇ ಬಲಿ ಕೊಟ್ಟುಕೊಳ್ಳಬೇಕಾಗುತ್ತದೆ. ಇದು ನಾಯಕ ಸೃಷ್ಟಿಯ ಕ್ರೂರವ್ಯಂಗ್ಯ. ಬಹುಶಃ ಇದಕ್ಕಾಗಿಯೇ ರಾಜತ್ವವಿರುವಲ್ಲೆಲ್ಲ ಅನಿವಾರ್ಯವೆನ್ನುವ ಹಾಗೇ ವಿದೂಷಕನೊಬ್ಬ ಇರುವುದನ್ನು ಕಾಣುತ್ತೇವೆ. ಜನವರ್ಗದಿಂದ ತುಂಬ ದೂರವಾಗಿ ನಿಲ್ಲುವ ರಾಜ, ಕ್ವಚಿತ್ತಾಗಿಯಾದರೂ ತನ್ನ ಮಾನವೀಯತೆಯನ್ನೂ ನೆನಪಿಸಿಕೊಳ್ಳಲು ಅಪ್ಪಟ ಮನುಷ್ಯತ್ವದ ಅಸಂಗತ ವ್ಯಕ್ತಿತ್ವದ ಈ ಆಪ್ತನನ್ನು ಅವಲಂಬಿಸುತ್ತಾನೆ.

ರಾಜತ್ವ ವ್ಯವಸ್ಥೆ, ಸುಶಿಕ್ಷಿತ ಸಿದ್ಧ ನಾಯಕನೊಬ್ಬನ ಅನುಭವೀ ಆಡಳಿತದಿಂದ ಜನವರ್ಗಕ್ಕೆ ಭರವಸೆ ನೆಮ್ಮದಿಗಳ ಸುರಳೀತ ಜೀವನವನ್ನು ಒದಗಿಸಿಕೊಡುತ್ತದೆ. ಹಾಗೆಯೇ, ಕ್ರಮೇಣ ರಾಜನನ್ನೂ ರಾಜನ ಅಧಿಕಾರವಲಯದೊಳಕ್ಕೆ ನುಸುಳಿಕೊಳ್ಳುವ ಅಧಿಕಾರಿಗಳನ್ನೂ ಅಮಾನುಷರನ್ನಾಗಿ ಮಾಡುತ್ತ ಹೋಗುತ್ತದೆ. ಆನ್ಯವರ್ಗವನ್ನು ಹೆಚ್ಚು ದೀನ ದುರ್ಬಲರನ್ನು ಗುಲಾಮರನ್ನಾಗಿಸುತ್ತ ಹೋಗುತ್ತದೆ.

ಕಾಳಿದಾಸ ರಾಜತ್ವದ ಪರವಾಗಿ ನಿಂತು ಅದನ್ನು ವೈಭವೀಕರಿಸಿದವನು ಎನ್ನುವ ತಪ್ಪುಭಾವನೆ ಸಾಕಷ್ಟು ಪ್ರಚಲಿತವಿದೆ. ನಿಜವಾಗಿ ತನ್ನ ಕಾಲದ ಸಂಸ್ಕೃತಿಯ ವಿಶಿಷ್ಟ ಘಟ್ಟದಲ್ಲಿ ಸಹಜವಾಗಿ ಅರಳಿಕೊಂಡ ರಾಜತ್ವ ಪದ್ಧತಿಯನ್ನು ಪ್ರೀತಿಯಿಂದ ಸ್ವೀಕರಿಸಿ ಅದಕ್ಕೆ ಆತ್ಮೀಯನಾಗಿದ್ದುಕೊಂಡು

ಆತ ಹಾಗೇ ಆರ್ಯ ಸಂಸ್ಕೃತಿಯನ್ನು ಪ್ರೀತಿಯಿಂದ ಅನುಸರಿಸಿಕೊಂಡೂ ಆರ್ಯೇತರ ಸಂಸ್ಕೃತಿಗಳ ಸಾಧ್ಯತೆಗಳ ಬಗ್ಗೆ ಕುರುಡನಾಗಿದ್ದವನು. ಇದು ಆತನ ಕೃತಿಗಳಲ್ಲಿ ವ್ಯಕ್ತವಾಗಿದೆ.

ಉದಾಹರಣೆಗೆ ನಮ್ಮ ಪೂರ್ವಗ್ರಹಗಳಿಂದಾಗಿ ದುಷ್ಯಂತನನ್ನು ರಾಜಕುಲ ಪರಮಾದರ್ಶ, ರಾಜರ್ಷಿ ಮುಂತಾಗಿ ಭಾವಿಸಿಕೊಂಡರೂ ಕಾಳಿದಾಸ ಆತನಲ್ಲಿ ಸೂಚಿಸುವ ಸೂಕ್ಷ್ಮಗಳನ್ನೂ ಕಳೆದುಕೊಂಡು ಬಿಡುತ್ತವೆ. ಪತ್ನಿಯಾಗಿ ಸ್ವೀಕರಿಸಲು ಸವರ್ಣೀಯ ಕುಲೀನ ಪರಿಶುದ್ಧ ಪತಿವ್ರತಾ ಬಾಲಿಕೆಯೇ ಬೇಕೆನ್ನುವ ಆದರೆ ಪಕ್ಕದಲ್ಲಿ ಸದಾ ಓಲೈಸಲಿಕ್ಕೆ ಮಾತ್ರ ಬಿಳಿತೊಗಲಿನ ಯವನಕನ್ನಿಕೆಯರನ್ನೇ ನೇಮಿಸಿಕೊಳ್ಳುವ ಈ ರಾಜರ ಶೋಕಿ, ಅದಕ್ಕೆ ದುಷ್ಯಂತನೂ ಅಪವಾದವಾಗಿಲ್ಲದಿರುವುದು ನಮಗೆ ತಿಳಿಯದೆ ಹೋಗುತ್ತದೆ. ಹಾಗೆಯೇ ಋಷಿಮುನಿ ಮಹಾತ್ಮನೆಂದು ಮೊದಲಿಗೇ ಪಟ್ಟಿ ಹಚ್ಚಿಕೊಂಡುಬಿಟ್ಟರೆ ಕಣ್ವನಲ್ಲಿ ಕಾಳಿದಾಸ ಕಾಣಿಸುವ ಸರಳ ಬೋಳೆ ಪೆದ್ದುತನವನ್ನು ನೋಡಿ ಮೆಲುನಗಬಹುದಾದ ಸಾಧ್ಯತೆಯನ್ನು ಕಳೆದುಕೊಂಡುಬಿಡುತ್ತೇವೆ. ವಿವರ್ಶಕರೆಲ್ಲ ಓದುಗರನ್ನು ಹಾಗೆ ಹಾದಿ ಹಚ್ಚಿಬಿಟ್ಟಿದ್ದಾರೆಂಬುದು ಖೇದದ ಸಂಗತಿಯಾಗಿದೆ.

ರಾಜನಾದವನು ಸೂಕ್ಷ್ಮ ಸಂವೇದನೆಯುಳ್ಳವನಾಗಿದ್ದ ಪಕ್ಷದಲ್ಲಿ ಒಂದಲ್ಲ ಒಂದು ಸಂದರ್ಭದಲ್ಲಿ ತನ್ನ ವಿರುದ್ದ ತಾನೇ ಪ್ರತಿಭಟಿಸಿಕೊಳ್ಳಬೇಕಾಗುತ್ತದೆ. ಅವನ ಮನುಷ್ಯ ವ್ಯಕ್ತಿತ್ವ ಅವನ ರಾಜ ವ್ಯಕ್ತಿತ್ವವನ್ನು ಪ್ರತಿಭಟಿಸಿ ಧಿಕ್ಕರಿಸಿ ನಿಲ್ಲುತ್ತದೆ. ಇಂಥ ಸ್ಥಿತಿಯ ಅಸಾದಾರಣ ಸಂಘರ್ಷ ದುರಂತಗಳೇ ಶೇಕ್‌ಸ್ಪಿಯರ್‌ನ ಮಹಾಕೃತಿಗಳ ವಸ್ತುವಲ್ಲವೆ? ದುಷ್ಯಂತ ಪ್ರಣಯೋತ್ಕರ್ಷದಲ್ಲಿರುವ ಹಸಿ ತರುಣನಲ್ಲ. ಹಾಗೆಯೇ ಸಾಂಪ್ರಾದಾಯಿಕ ಶೃಂಗಾರನಾಯಕನಲ್ಲ. ಪ್ರಾಯಶಃ ಮಧ್ಯವಯಸ್ಸಿನವ. ಪ್ರಣಯದಲ್ಲಿ ತೊಡಗಿಕೊಂಡರೂ ಜೊತೆ ಜೊತೆಯಲ್ಲಿ ತನ್ನ ಕ್ರಿಯೆಗಳನ್ನು ಬೌದ್ಧಿಕವಾಗಿ ವಿಮರ್ಶಿಸಿಕೊಳ್ಳುವಂಥ ಸಾಕ್ಷಿಪ್ರಜ್ಞೆಯನ್ನು ಎಚ್ಚರವಾಗಿಟ್ಟುಕೊಳ್ಳಬಲ್ಲಂಥವ, ಬೇಟೆಗೆ ಹೊರಟ ರಾಜ ದುಷ್ಯಂತ. ಅತ್ಯನಿರೀಕ್ಷಿತವಾಗಿ ತನ್ನ ರೂಢಜೀವನಕ್ಕೆ ಅಪರೂಪವೆನ್ನಿಸುವ ಆಶ್ರಮ ಪರಿಸರದಲ್ಲಿ ಮಾಯಕವೋ ಎನ್ನುವ ಹಾಗೆ ಹೊಕ್ಕು ನಿಂತಾಗ, ಪ್ರತ್ಯಕ್ಷಳಾದ ಶಕುಂತಲೆಯಂಥ ಮುಗ್ಧ ಬಾಲಿಕೆಯನ್ನು ಕಂಡು ತಟ್ಟನೆ ಮನುಷ್ಯತ್ವಕ್ಕೆ ಮುಗುಚಿಕೊಂಡು ಬಿಡುತ್ತಾನೆ. ರಾಜ ಆರೋಪಿತ ಆಲಂಕಾರ ಕಳೆದುಹೋಗಿ ಅಪ್ಪಟ ಮನುಷ್ಯತ್ವದ ಹಚ್ಚ ಹಸುಳೆಯಾಗಿ ಬಿಡುತ್ತಾನೆ.

ದುಷ್ಯಂತನ ದ್ವಂದ್ವ ವ್ಯಕ್ತಿತ್ವದ ಪರಸ್ಪರ ಘರ್ಷಣೆಯ ಪ್ರಕ್ರಿಯಾಪರಂಪರೆಯೇ ಮುಂದಿನ ಇಡೀ ನಾಟಕ. ಈಗ ಆತನಿಗೆ ತನ್ನ ರಾಜವ್ಯಕ್ತಿತ್ವದ ಜಡತ್ವ ನಿಚ್ಚಳವಾಗಿ ಕಾಣತೊಡಗುತ್ತದೆ. ಇದಕ್ಕೆ ಮುಂದೆ ದುಷ್ಯಂತ ಒಮ್ಮೆಯಾದರೂ ತನ್ನ ರಾಜಕರ್ತವ್ಯಗಳನ್ನು ಕಡೆಗಣಿಸಿ ನಿಲ್ಲಲು ಕಲಿಯುತ್ತಾನೆ. ರಾಗದ ನವಿರು ಎಳೆಯೊಂದರಿಂಲೇ ತನ್ನ ಹಿಂದಣ ಸ್ತ್ರೀ ಅವಜ್ಞೆಯ ತಪ್ಪಿತವನ್ನು ಪಟ್ಟನೆ ಭಾವಿಸಿಕೊಳ್ಳುವ ಶಕ್ತಿ ಈಗ ಅವನಿಗೆ ಲಭಿಸುತ್ತದೆ. ಹಗಲುರಾತ್ರಿಗಳಲ್ಲಿ ಸ್ಮರಣೆ-ವಿಸ್ಮರಣೆಗಳ ದ್ವಂದ್ವದಲ್ಲಿ ಮುಗುಮುಗುಚಿ ಬೇಯುವ ಮಾನಸಿಕ ಯಾತನೆಯನ್ನು ಈಗ ಅನುಭವಿಸಬಲ್ಲವನಾಗುತ್ತಾನೆ.

ದುಷ್ಯಂತ ಶಕುಂತಲೆಯನ್ನು ಪ್ರೀತಿಸಿ ಮದುವೆಯಾಗಿ, ಆಮೇಲೆ ಮತ್ತೆ ಕೂರಿಸಿಕೊಂಡು ಯಾತನೆ ಪಡತೊಡಗಿದ. ಇದಕ್ಕೆ ತಾರ್ಕಿಕವಾಗಿ ನಾವು ಊಹಿಸಬಹುದಾದ ಕಾರಣ ಏನಿದ್ದಿತು. ಈ ವಿಸ್ಮರಣೆ ಪುನರ್ ಸ್ಮರಣೆಗಳಿಗೆ ಆತನ ರಾಜತ್ವದ ಉಪಾಧಿಯೇ ಕಾರಣವಿರಬಹುದೆ? ವಿಸ್ಮರಣೆಗೆ ಅದು ಕಾರಣ ಎಂದು ನಂಬಬಹುದು. ಆದರೆ ಪುನಃಸ್ಮರಣೆಗೆ? ಅವನ ಮನುಷ್ಯತ್ವವೇ ಕಾರಣ ಎನ್ನಬೇಕು.

ಮನುಷ್ಯ ಅಲ್ಲಿ ಆ ಕಾಲಕ್ಕೆ ರೂಢಿಸಿಕೊಂಡು ಬಂದಿದ್ದ ವಿಶಿಷ್ಟವಾದ ವಿವಾಹ-ಕುಟುಂಬ-ಆಸ್ತಿ-ರಾಜ್ಯ ವ್ಯವಸ್ಥೆಗಳ ಪರಿಸರವೇ ಅದಕ್ಕೆ ಕಾರಣವೇ? ಇದ್ದರೂ ಇದ್ದೀತು ಕೆಲಮಟ್ಟಿಗೆ. ಏಕೆಂದರೆ ಈ ರೂಢಿ ವ್ಯವಸ್ಥೆಗಳಿಂದ ಭಿನ್ನವಾದ ಪರಿಸರದಲ್ಲಿ ಬದುಕುತ್ತಿರುವ ಮೇನಕೆಯೂ ನಾಟಕದಲ್ಲಿ ಸೂಚಿತಳಾಗಿದ್ದಾಳೆ. ಹೆಣ್ಣು ಗಂಡಿನ ಸಂಬಂಧದಲ್ಲಿ ಈ ಬಗೆಯ ಸ್ಮೃತಿ-ವಿಸ್ಮೃತಿಗಳು ಆಕೆಯನ್ನು ಕಾಡಿದ ಹಾಗೆ ಕಾಣುವುದಿಲ್ಲ. ವಿಶ್ವಾಮಿತ್ರನನ್ನು ಒಲಿಸಿಕೊಂಡು ಕೂಡ ಶಕುಂತಲೆಗೆ ಜನ್ಮ ಕೊಟ್ಟಾದ ಮೇಲೆ ಈ ಸಂಬಂಧದ ಬಗ್ಗೆ ಆಕೆ ಚಿಂತೆ ಹಚ್ಚಿಕೊಂಡಂತೆ ಕಾಣುವುದಿಲ್ಲ. ಆಸ್ತಿಯ ಕಲ್ಪನೆ, ಆದರಿಂದ ವಸ್ತುವನ್ನು ಸ್ವಂತಗೊಳಿಸಿಕೊಂಡು ಅನುಭೋಗಿಸುವ ಆಕಾಂಕ್ಷೆ-ಇವೇ ಇಂಥ ಸಮಾಜದ ಮನುಷ್ಯರಲ್ಲಿ ಸ್ಮೃತಿ-ವಿಸ್ಮೃತಿಗಳ ದ್ವಂದ್ವವನ್ನು ಹುಟ್ಟಿಸುತ್ತದೆಯೆ.?

ಆದರೆ, ಮೇನಕೆ ಕೂಡ ಗಂಡನ ಸಂಬಂಧದಲ್ಲಿ ನಿಶ್ಚಿಂತೆಯಿಂದಿದ್ದರೂ ಮಗಳು ಕಷ್ಟಕ್ಕೆ ಸಿಕ್ಕಿಕೊಂಡಾಗ ಆತಂಕಗೊಳ್ಳುತ್ತಾಳಲ್ಲ? ಮೇಲಾಗಿ ಅವಳು ಮನುಷ್ಯವರ್ಗದವಳಲ್ಲ. ದೇವ ದ್ರವ್ಯದವಳು. ಇನ್ನೂ ಒಂದು ಸಂಗತಿಯೆಂದರೆ ಕಣ್ವ ಗೌತಮಿಯರು ರೂಪುಗೊಂಡ ಪರಿಸರಕ್ಕೂ ದೂರ್ವಾಸ ರೂಪುಗೊಂಡ ಪರಿಸರಕ್ಕೂ ಹೆಚ್ಚು ಅಂತರವಿಲ್ಲ. ಆದರೆ ಆ ವ್ಯಕ್ತಿಗಳು ತಮ್ಮಿಂದ ಪರ್ಯಾಯವಾಗಿ ಸೃಜಿಸಿರುವ ಪರಿಸರ ತೀರ ಭಿನ್ನವಾಗಿವೆ(ವ್ಯಕ್ತಿ ವ್ಯಕ್ತಿಗಳಲ್ಲಿ ಭಿನ್ನತೆಯಿರುತ್ತದೆ). ಭಾವಸ್ಥಿರಾಣಿ ಜನನಾಂತರ ಸಹುದಾನಿ ಎಂದು ದುಷ್ಯಂತ ಸಂದೇಹಿಸುವ ಹಾಗೆ ಈ ಸ್ಮೃತಿ-ವಿಸ್ಮೃತಿಗಳ ದ್ವಂದ್ವ ಪರಿಸರಕ್ಕಿಂತ ಹೆಚ್ಚಾಗಿ ಮೂಲ ಮನುಷ್ಯದ್ರವ್ಯದಲ್ಲೇ ಅಂತರ್ಗತವಾಗಿದ್ದು ಮನುಷ್ಯನನ್ನು ದುರಂತನಾಯಕನಾಗಲಿಕ್ಕೆ ಯೋಗ್ಯವಾಗಿಸಿ ಬಿಟ್ಟಿದೆಯೆ? ವಿಶ್ಲೇಷಿಸಿ ಅದೃಷ್ಟದಿಂದಲೇ ಗುರುತಿಸಿಕೊಳ್ಳಬೇಕೋ ಏನೋ? ಮಾನವ ಜ್ಞಾನಕ್ಕೆ ಇಲ್ಲಿ ಎಲ್ಲೆ ಎದುರಾಗಿಬಿಡುತ್ತದೋ ಏನೋ? ಶಕುಂತಲೆ ಸ್ವರ್ಗ-ಮರ್ತ್ಯಗಳ ಕೂಸಾಗಿ ಹುಟ್ಟಿದಳು. ಕಣ್ವಾಶ್ರಮದಲ್ಲಿ ತಾಪಸಿಯರ ಜೊತೆ ಬೆಳೆದರೂ ಆಶ್ರಮ ಸಂಸ್ಕೃತಿಯಲ್ಲಿ ಅರಗಿ ಎರಕವಾಗದೆ ಉಳಿದಳು. ಹಸ್ತಿನಾವತಿಯ ನಾಗರಿಕ ವ್ಯವಸ್ಥೆ ಕೂಡ ಆಕೆಯನ್ನು ಹಿಡಿದಿಡಲಾರದೇ ಹೋಯಿತು. ರಾಜಪುರೋಹಿತ ಆಕೆಯನ್ನು ಗೌರವದಿಂದ ಮಗಳೆಂಬ ವಾತ್ಸಲ್ಯದಿಂದ ಆಹ್ವಾನಿಸಿದರೂ ಆಕೆ ಅದನ್ನು ಒಪ್ಪಿಕೊಳ್ಳಲಿಲ್ಲ. ಕೊನೆಯಲ್ಲಿ ಹೇಮಕೂಟದ ಆಶ್ರಮ ಸೇರಿ ಮಗುವಿಗೆ ಜನ್ಮವಿತ್ತಳು. ಸಂಸ್ಕೃತಿ-ಸಂಸ್ಕೃತಿಗಳ ಭಿನ್ನಭಿನ್ನ ವ್ಯವಸ್ಥೆಗಳ ಆತಂಕಗಳನ್ನು ಪ್ರತಿಭಟಿಸಿ ಧಿಕ್ಕರಿಸಿ ಒಂದರಿಂದ ಇನ್ನೊಂದಕ್ಕೆ ನಿರಾತಂಕವಾಗಿ ಹೊಕ್ಕು ಬಳಸಿ ಗಂಡು ನಿರ್ಮಿಸುತ್ತ ಹೋಗುವ ವ್ಯವಸ್ಥೆಯ ಜಡತ್ವಕ್ಕೆ ಆಘಾತ ಕೊಟ್ಟು ಸಹಜ ಬದುಕಿನ

ಜೀವಂತಲಹರಿಗೆ ಮುಕ್ತ ಮಾರ್ಗ ತೆರೆದುಕೊಡುವ ಸ್ತ್ರೀತ್ವದ ಪ್ರತಿಮೆಯನ್ನಿಸುತ್ತಾಳೆ. ಆಕೆ ಹೀಗೆ ಇಡೀ ನಾಟಕವನ್ನು ವ್ಯಾಪಿಸಿ ಮೀರಿನಾಟಕಕ್ಕೆ ತನ್ನದೇ ಹೆಸರು ಹಚ್ಚುತ್ತಾಳೆ ಆಕೆ. ಇದಾದ ಮೇಲೆ ನಾಟಕದ ಕೊನೆಯನ್ನು ನೋಡಿ, ಅಕೆ ಜನ್ಮ ಕೊಟ್ಟ ಶಿಶು ಬಾಲಕನಾಗಿ, ಸರ್ವದಮನನಾಗಿ ಬೆಳೆದು ನಿಂತಿದ್ದಾನೆ. ಪುನಃ ಇನ್ನೊಂದು ಹಸ್ತಿನಾವತಿಯ ವ್ಯವಸ್ಥೆಯನ್ನು ನಿರ್ಮಿಸಲು ದೃಢಗೊಳಿಸಲು ಇನ್ನೊಬ್ಬ ತಯಾರಾಗಿದ್ದಾನೆ. ವ್ಯವಸ್ಥೆ ಕಟ್ಟುವುದು, ಛಿದ್ರಗೊಳಿಸುವುದು, ಮತ್ತೆ ಕಟ್ಟುವುದು ಹೀಗೆ ಸಾಗುತ್ತ ಕ್ರಮೇಣ ಇದೆಲ್ಲವನ್ನೂ ಅರಿವುಗೊಳಿಸಿಕೊಳ್ಳುತ್ತಾ ಅಂತಿಮವಾಗಿ ಎಲ್ಲ ವ್ಯವಸ್ಥೆಗಳಿಂದ ಮುಕ್ತವಾಗಿ ಬಾಳಬಲ್ಲ ಆದರ್ಶದ ಕಡೆ ಮಾಡುವ ಸಂಸ್ಕೃತಿ ಹೆಜ್ಜೆಯಿಡುತ್ತ ನಡೆದಿದೆಯೆ? ಕಟ್ಟುವ ಕೆಡುಹುವ ನಿರುದ್ದಿಶ್ಯವಾದ ಅಸಂಗತ ವ್ಯರ್ಥ ಕ್ರೀಡೆಯೇ? ಯಾವುದೇ ಕಲಾಕೃತಿಯನ್ನು ಕೆ.ವಿ.ಸುಬ್ಬಣ್ಣನವರು ಹೇಳುವಂತೆ 'ಅರ್ಥರಾಶಿ' ಎಂದು ಭಾವಿಸುವುದಿಲ್ಲ. ಅದೊಂದು ಜೀವಂತವಸ್ತು. ಅಸಂಖ್ಯ ಅರ್ಥಗಳನ್ನು ಹೊಳೆಯಿಸುವ ಶಕ್ತಿಯುಳ್ಳ ಪ್ರಾಣವಂತ ಅಸ್ತಿತ್ವ. ಅದು ತನ್ನ ಅಕ್ಷಯ ಚೀಲದಿಂದ ಅರ್ಥಗಳನ್ನು ತೆಗೆ ತೆಗೆದು ಹಂಚುತ್ತಾ ಹೋಗುವುದಿಲ್ಲ. ಸಹೃದಯನಲ್ಲಿ ಇರಬಹುದಾದ ಅರ್ಥಗಳನ್ನಷ್ಟೇ ಅಲ್ಲದೆ ತನ್ನ ಅರ್ಥಗಳಲ್ಲ ಅದು ಉದ್ಬೋಧಿಸಿಕೊಡುತ್ತದೆ. ಇತಿಹಾಸ ಪಾಠ ಸಾಹಿತ್ಯ ಪಾಠಗಳ ಜೊತೆಯಲ್ಲಿಯೇ ಕೆ.ವಿ.ಸುಬ್ಬಣ್ಣನವರ ನಾಟಕ ಮುಂದುವರಿದಿದೆ.

ಹಸ್ತಿನಾವತಿಯ ಪುರಾಣ ಸಂಸ್ಕೃತಿಯ ಹೆಸರಿನಲ್ಲಿ ಅದನ್ನು ಸೂಚಿಸುವುದೇ ಜೊತೆಗೆ ಅದಕ್ಕಿಂತ ಮುಖ್ಯವಾಗಿ, ಮಾನವನ ಸಂಸ್ಕೃತಿಯ ಸ್ವರ್ಣಯುಗವೆಂದು ಭಾವನೆ ಹಟ್ಟಿಸಿದ ಗುಪ್ತ ಯುಗವನ್ನು, ಅದರ ಹಿನ್ನೆಲೆಯಲ್ಲಿ ಗಂಡು ಹೆಣ್ಣಿನ ಆಕರ್ಷಣೆ ಸ್ಮರಣೆ–ವಿಸ್ಮರಣೆಗಳನ್ನೂ ಶೋಧಿಸಿನೋಡುವ ಕಾಳಿದಾಸ ನನಗೆ ಹತ್ತಿರದವನಾದ್ದಕ್ಕೆ ಕಾರಣ ಇದು: ನಮ್ಮ ಇವತ್ತಿನ ಬದುಕಿನಲ್ಲಿ ಕೂಡ ಸಂಸ್ಕೃತಿಗೆ ಅಗತ್ಯವಾಗಿ ನಾಯಕ ನಿರ್ಮಾಣ, ಅಧಿಕಾರ ಕೇಂದ್ರಿಕರಣ ಭೌತಿಕ ಸಮೃದ್ಧಿಗಳನ್ನು ಸಾಧಿಸಿಕೊಳ್ಳಲಿಕ್ಕೆ ಹೆಣಗುತ್ತಿದ್ದೇವೆ. ಅದರ ಸತ್ಫಲಗಳ ಜೊತೆಗೇ ಸ್ವಾತಂತ್ರ್ಯಹರಣ, ಸರ್ವಾಧಿಕಾರ, ಹಿಂಸೆ, ಶೋಷಣೆ, ದಮನ ಮುಂತಾದ ದುಷ್ಫಲಗಳೂ ಹುಟ್ಟಿಕೊಂಡು ಬಿಡುತ್ತವೆಯಲ್ಲ. ಮಾನವೀಯತೆಯನ್ನೇ ಮೂಲತಃ ನಾಶಗೊಳಿಸಿಬಿಡುವ ಕಾಲಕೂಟವೂ ಹೇಗೋ ಬೆರೆತುಕೊಂಡಂತೆ. ಹೆಣ್ಣುಗಂಡುಗಳ ಸಂಬಂಧದಲ್ಲಿ, ಮಾತ್ರವಲ್ಲ. ಮನುಷ್ಯ ಸಂಬಂಧಗಳಲ್ಲೇ ಇವತ್ತಿಗೂ ಅದೇ ಸ್ಮೃತಿ–ವಿಸ್ಮೃತಿಗಳ ದ್ವಂದ್ವ ಕಾಡುತದೆ. ಸ್ಮೃತಿ–ವಿಸ್ಮೃತಿಗಳ ದ್ವಂದ್ವದ ದುರಂತದಿಂದಾಗಿ ಮನುಷ್ಯ ಪಶುವಿನ ಹಾಗೆಯೇ ಭೂತವನ್ನು ಮರೆತು ನಿರುಮ್ಮಳದಿಂದ ಬದುಕಲಿಕ್ಕೂ ಆಗದೆ, ಎಲ್ಲ ನೆನಪಿಟ್ಟುಕೊಂಡು ತಪ್ಪು ಮರುಕಳಿಸದೆ ಪ್ರಜ್ಞಾವಂತನಾಗಿ ಬದುಕಲಿಕ್ಕೂ ಅಗದೆ ಬದುಕುತ್ತಿದ್ದಾನೆ.

ಈ ಹಿನ್ನೆಲೆಯಲ್ಲಿ ವ್ಯಾಸಯುಗ, ಗುಪ್ತಯುಗ ಕಾಲದ ಆಳವನ್ನು ಕಲ್ಪಿಸಿಕೊಡುತ್ತಿರುವಾಗ, ಅದರ ಪ್ರತ್ಯಂತರದಲ್ಲಿ ಇವತ್ತಿನ ನಮ್ಮ ಸಮೂಹ ವ್ಯವಸ್ಥೆಗಳನ್ನೂ ವ್ಯಕ್ತಿ ವಿಕೃತಿಗಳನ್ನೂ ಅವುಗಳಿಂದ ಹುಟ್ಟುವ ಸ್ವಾತಂತ್ರ್ಯ–ಸಮಾನತೆ, ವ್ಯಕ್ತಿ ಸಮಾಜ ಕೇಂದ್ರೀಕರಣ, ವಿಕೇಂದ್ರಿಕರಣ, ನಾಯಕತ್ವ–ವಿನಾಯಕತ್ವ, ಗ್ರಾಮ–ನಗರ, ಯಂತ್ರ ಬಾಹುಳ್ಯ, ಯಂತ್ರ ಸಂಯಮ, ರಾಷ್ಟ್ರಪ್ರೇಮ–ಲೋಕೈಕವಾದ,

ಸಮೃದ್ಧಿ–ಸರಳತೆ, ಭೋಗ–ತ್ಯಾಗ, ಹಿಂಸೆ–ಅಹಿಂಸೆ, ಸ್ಮರಣೆ–ವಿಸ್ಮರಣೆ ಮುಂತಾದ ಸ್ಥೂಲ ಸೂಕ್ಷ್ಮ ಅನಂತ ದ್ವಂದ್ವಗಳನ್ನೂ ಬಗೆದುಕೊಳ್ಳಲು ನೆರವಾಗಿ ಶಾಕುಂತಲ ನನಗೆ ಒದಗಿಕೊಂಡಿತು ಎಂದಿದ್ದಾರೆ. ವಿದ್ಯಾರ್ಥಿಗಳಿಗೆ ಅನುಕೂಲವಾಗುವಂತೆ ಯಕ್ಷಗಾನದ ಅಂಶಗಳನ್ನು ಅಳವಡಿಸಿಕೊಂಡಿದ್ದಾರೆ. ಕಳೆದ ಸುಮಾರು ನಾಲ್ಕೈದು ಶತಮಾನಗಳಿಂದ ಬಾಳಿಕೊಂಡು ಬಂದಿರುವ ಯಕ್ಷಗಾನ ತಮ್ಮ ಸುತ್ತಣ ಪರಿಸರದಲ್ಲಿ ಇವತ್ತಿಗೂ ಜನರ ಬದುಕಿನಲ್ಲಿ ಬೆರೆತು ಜೀವಂತವಾಗಿ ಉಳಿದುಕೊಂಡಿದೆ. ಈ ರಂಗಪದ್ಧತಿಯ ಕೆ.ವಿ.ಸುಬ್ಬಣ್ಣನವರನ್ನು ಆಕರ್ಷಿಸುವುದಕ್ಕೆ ಈ ಕೆಳಗಿನ ಕಾರಣಗಳನ್ನು ವಿವರಿಸಿದ್ದಾರೆ.

೧. ರಂಗಭೂಮಿಯೆಂದರೆ ಭ್ರಮಾಸೃಷ್ಟಿ ಎಂಬ ಕಲ್ಪನೆ ಹುಟ್ಟಿಸಿಬಿಟ್ಟಿದ್ದ ಆಧುನಿಕ ಪರಿಕಲ್ಪನೆ ಪದ್ಧತಿಯನ್ನು ವಿರೋಧಿಸಿ ಈ ಶತಮಾನದ ಅನೇಕ ಪಾಶ್ಚಾತ್ಯ ಗಣ್ಯರಂಗ ನಿರ್ಮಾಪಕರು ವಿಧವಾದ ಹೊಸ ಪ್ರಯೋಗದಲ್ಲಿ ಕಾಣುವ ರಂಗಭೂಮಿಗಳಲ್ಲಿ ಕಾಣುವ 'ರಂಗಕಲ್ಪನೆ' ತುಂಬ ಮಹತ್ವದ್ದೆನಿಸಿತು. ನಾಟ್ಯಶಾಸ್ತ್ರದಿಂದ ಮೊದಲಾಗಿ ಭಾರತದಲ್ಲಿ ಬೆಳೆದುಕೊಂಡು ಬಂದಿರುವ ಇಂಥ ಸೃಷ್ಟಿ ರಂಗ ಕಲ್ಪನೆ ಯಕ್ಷಗಾನದಲ್ಲಿ ಸಮಗ್ರವಾಗಿ ಕಾಣಸಿಗುತ್ತವೆ. ಒಂದು ಕವಿತಾ ಪ್ರಬಂಧವನ್ನು ಕಥೆಯ ಆಧಾರಕ್ಕಿಟ್ಟುಕೊಂಡು ಆ ಚೌಕಟ್ಟಿನಲ್ಲಿ ಕೃತಿಕಾರನಾದ ಭಾಗವತ ತನ್ನ ನಟವರ್ಗದ ಮೂಲಕ ರಂಗದಲ್ಲಿ ಪ್ರೇಕ್ಷಕರ ಎದುರಲ್ಲೇ ಆಶು ಸಂಭಾಷಣೆ ಹಾಗೂ ನೃತ್ಯ ಖಂಡಗಳನ್ನು ಬಳಸಿ ನವೋನವವಾಗಿ ಒಂದು ಕೃತಿಯನ್ನು ಅಲ್ಲೇ ನಿರ್ಮಾಣ ಮಾಡುತ್ತ ಹೋಗುವ ಯಕ್ಷಗಾನದ ತಂತ್ರ ಸಾಧಾರಣವಾದದ್ದು.

೨. ಭ್ರಮೆ ಹುಟ್ಟಿಸಬೇಕು, ಅದನ್ನು ಕಾಪಾಡಿಕೊಳ್ಳಬೇಕು ಎನ್ನುವ ತರಹಕ್ಕಾಗಿಯೇ ವಿಧವಿಧವಾದ ಉಪಯೋಗಗಳನ್ನು ಪರಿಕರಗಳನ್ನು ದುಂದು ಮಾಡಿಕೊಳ್ಳುವುದು ರಂಗಭೂಮಿಯಲ್ಲಿ ತೀರ ರೂಢಿ. ಅತ್ಯಂತ ಸ್ಪಷ್ಟವಾದ ರಂಗಕಲ್ಪನೆಯನ್ನು ಮೂಲದಲ್ಲೇ ದೃಢಗೊಳಿಸಿಕೊಂಡುಬಿಟ್ಟಿರುವ ಯಕ್ಷಗಾನ ಇಂಥ ದುಂದುಗಳಿಗೆ ಅವಕಾಶ ಕೊಡುವುದಿಲ್ಲ. ಅತ್ಯಗತ್ಯಕ್ಕೆ ಮಾತ್ರವೇ ಸಮಸ್ತವನ್ನು ಯಕ್ಷಗಾನ ರಂಗ ದೃಶ್ಯ ಪರಿಕರಗಳು ಪ್ರಕಾಶ ಇತ್ಯಾದಿ ಸಂಬಂಧವಾಗಿ ಗರಿಷ್ಠ ಸರಳತೆಯನ್ನು ಸಾಧಿಸಿಕೊಂಡಿದೆ.

೩. ಇದರಲ್ಲಿ ಹಾಡು ಕುಣಿತವೇ ಮುಂತಾದ ಎಲ್ಲ ಅಂಗಗಳೂ ತಂತಮ್ಮ ಸ್ವಂತ ಶಾಸ್ತ್ರದ ಬಲದ ಮೇಲೆ ಸ್ವತಂತ್ರ ಅಭಿವ್ಯಕ್ತಿ ಮಾಧ್ಯಮಗಳಾಗಿ ಸೆಡ್ಡು ಹೊಡೆದು ನಿಲ್ಲುವುದಿಲ್ಲ. ಬೇರೊಂದು ಮೇಳ ಮಾಧ್ಯಮದ ರಂಗ ಭಾಷೆಯ ಅಂಗಗಳಾಗಿ ತಮ್ಮನ್ನು ಅರ್ಪಿಸಿಕೊಳ್ಳುತ್ತವೆ. ಅದಕ್ಕಾಗಿಯೇ ಯಕ್ಷಗಾನ ನೃತ್ಯಗಳಲ್ಲಿ ಖಚಿತವಾದ ಪಾದ–ಹಸ್ತಮುದ್ರೆಗಳೇ ಮುಂತಾದುವನ್ನು ಕಾಣಲಾರೆವು, ಸಂಗೀತದಲ್ಲಿ ರೂಢ ಸಂಗೀತದ ಅಲಂಕಾರಗಳನ್ನು ಕಾಣಲಾರೆವು ಮತ್ತು ಈ ಕಾರಣದಿಂದಲೇ ಇಲ್ಲಿನ ಹಾಡು ಕುಣಿತಗಳು 'ಮಾರ್ಗವಲ್ಲ', 'ದೇಸಿ' ಎನ್ನಿಸಿಬಿಡುತ್ತವೆ. ಹೆಚ್ಚು ಶಾಸ್ತ್ರೀಯವಾಗಿರುವ

ಕಥಕ್ಕಳಿಯನ್ನು ನೋಡಿದರೆ ಅದು 'ನಾಟ್ಯ'(ನಾಟಕ) ಎನ್ನುವುದಕ್ಕಿಂತ ಹೆಚ್ಚಾಗಿ 'ನೃತ್ಯ' ಎನ್ನಿಸಿ ಬಿಡುತ್ತದೆ.

೪. ಯಕ್ಷಗಾನದ ವೇಷ ವರ್ಣಿಕೆಗಳು ಅದ್ಭುತವೆನ್ನಿಸುವಂಥದ್ದು. ಆದರೆ ಈ ವಿಶೇಷ ವೇಷವರ್ಣಿಕೆಗಳಲ್ಲಿ ಅತಿಮಾನವ ಹಾಗೂ ರಾಜವರ್ಗದವರಿಗೆ ಅಲ್ಲಿ ತೀರ ಸಹಜ ಸಾಮಾನ್ಯ ಸರಳ ವೇಷಭೂಷಣಗಳೇ ಬಳಕೆಯಾಗುತ್ತವೆ. ಅತ್ಯಂತ ಶೈಲೀಕೃತವಾದ ವೇಷವರ್ಣಿಕೆಗಳಿಂದ ಮೊದಲಾಗಿ ಅತ್ಯಂತ ಸಹಜ ಸರಳ ವಾಸ್ತವಿಕಗಳ ತನಕ ಯಕ್ಷಗಾನದ ವೇಷವರ್ಣಿಕೆಗಳ ವ್ಯಾಪ್ತಿ ಬೆಳೆದುಕೊಂಡಿದೆ. ಈ ಅಂಶವನ್ನು ಸಾಮಾನ್ಯವಾಗಿ ಯಾರೂ ಪರಿಗಣಿಸುವುದಿಲ್ಲ.

೫. ಯಕ್ಷಗಾನದಲ್ಲಿ ಆಶುಭಾಷಣಗಳೇ ರೂಢಿ. ಇದರ ಶೈಲಿ ಬಹುಮಟ್ಟಿಗೆ ಹರಿಕಥೆಯ ಶೈಲಿಯನ್ನು ಹೋಲುವಂಥದ್ದು. ಅದರ ಹಾಗೇ ಅತ್ಯಂತ ಬೌದ್ಧಿಕ ಕಾವ್ಯಯುಗಗಳಿಂದ ಅತ್ಯಂತ ಸಾಮಾನ್ಯ ಬೀದಿ ಮಾತುಗಳ ತನಕದ ವಿಶಾಲ ವ್ಯಾಪ್ತಿ ಇದಕ್ಕೆ ದಕ್ಕಿದೆ. ರಂಗದ ಮೇಲೆ ಕೊಂಚ ಉದ್ಧವಾದ ಮಾತನ್ನೋ ಅದಕ್ಕಿಂತ ಹೆಚ್ಚಾಗಿ ದೀರ್ಘಸ್ವಗತವನ್ನೋ ಆಸಕ್ತಿ ಸೋಲದ ಹಾಗೆ ನಿರ್ವಹಿಸುವುದು ಎಷ್ಟು ಕಷ್ಟ ಎನ್ನುವುದನ್ನು ನಟರೂ ಬಲ್ಲರು ಪ್ರೇಕ್ಷಕರೂ ಬಲ್ಲರು. ಆದರೆ ಯಕ್ಷಗಾನದ ಆಕರ್ಷಕ ಜೀವಂತ ಸಂಭಾಷಣೆ ಶೈಲಿಗೆ ಈ ಕಷ್ಟ ಅಷ್ಟಾಗಿ ಗಣನೆಗೇ ಬರುವುದಿಲ್ಲ.

ಯಕ್ಷಗಾನದ ವಾಚಿಕದಲ್ಲಿ ಒಬ್ಬ ನಟ ಮಾತಾಡುತ್ತ ಆಡುತ್ತ ಒಂದೇ ಮಾತಿನಲ್ಲಿ ನಿರಾತಂಕವಾಗಿ ಸ್ತರಸ್ತರಗಳನ್ನು ಬದಲಿಸಿಕೊಳ್ಳುತ್ತ ಹೋಗುತ್ತಿರುತ್ತಾನೆ. ಒಮ್ಮೆ ಪಾತ್ರವಾಗಿ ಒಮ್ಮೆ ನಟನಾಗಿ, ಒಮ್ಮೆ ಪ್ರೇಕ್ಷಕನಾಗಿ ಅಂತರ್‌ಪ್ರಜ್ಞೆಯೇ ಆಗಿ ತನ್ನ ಮಾತಿನ ನೆಲೆಯನ್ನು ಪಲ್ಲಟಿಸಿಕೊಳ್ಳುತ್ತಾನೆ. ಇದರಿಂದ ವಾಚಕರಿಗೆ ದೊರಕುವ ಅನೇಕ ಸ್ತರಗಳ ಸಮೃದ್ಧಿ ವಿಶೇಷವಾದದ್ದು. ಶಾಕುಂತಲದಲ್ಲೂ ಯಕ್ಷಗಾನದಲ್ಲೂ ಮಾಡಿಕೊಂಡ ಬದಲಾವಣೆಗಳು. ಶಾಕುಂತಲದ ಹೊಸ ಪಾಠ ತಯಾರಿಸಿಕೊಳ್ಳುವಾಗ ಎರಡು ಭಾಗವಾಗಿ ವಿಭಾಗಿಸಿಕೊಂಡಿದ್ದಾರೆ. ನಾಲ್ಕನೇ ಅಂಕದ ಕೊನೆಯತನಕ ಬರುವ ಕಣ್ವಾಶ್ರಮದ ಪ್ರಸಂಗ ಮೊದಲನೇ ಭಾಗ, ಅನಂತರದ್ದು ಪೂರ್ತಿ ಎರಡನೇ ಭಾಗವಾಗಿ ವಿಂಗಡಿಸಿದ್ದಾರೆ.

ಮೊದಲ ಭಾಗದಲ್ಲಿ ತುಂಬ ಕಿರಿದಾದವುಗಳಿಂದ ಮೊದಲಾಗಿ ಕ್ರಮೇಣ ಬೆಳೆದುಕೊಳ್ಳುವತ್ತ ಹೋಗುವ ಹತ್ತು ದೃಶ್ಯಗಳು. ಎರಡನೇ ಭಾಗದಲ್ಲಿ ಹಸ್ತಿನಾವತಿಯ ಏಳು ದೃಶ್ಯಗಳು ಹಾಗೂ ಹೇಮಕೂಟದ ಎಂಟನೇ ದೃಶ್ಯ. ಇವತ್ತಿನ ನೆಲೆಯಲ್ಲಿ ನಿಂತು ಇಲ್ಲಿಂದ ಶಾಕುಂತಲವನ್ನು ನೋಡುತ್ತಿರುವುದು ಹಾಗೂ ಈಗಾಗಲೇ ಹೇಳಿರುವ ಅಂಶಗಳು ಕಾರಣವಾಗಿ, ಮೂಲ ನಾಟಕದಲ್ಲಿ ಕಿರುಪಾತ್ರಗಳಾಗಿ ಬರುವ ಸಾಮಾನ್ಯರ ಬಗ್ಗೆ ಹೆಚ್ಚಿನ ಗಮನ ಕೊಡಬೇಕಾದ್ದು ಅಗತ್ಯವಾಗಿದೆ ಎಂಬ ಅಂಶ ಗಮನಕ್ಕೆ ಬರುತ್ತದೆ.

**ಮೊದಲ ಭಾಗದಲ್ಲಿ**

**ಸೂತ:** ವಿದೂಷಕರ ಹಾಗೂ ಆಶ್ರಮವಟುಗಳ ಪಾತ್ರಗಳನ್ನು ಬೆಳೆಸಿಕೊಂಡು ಮೂಲ ನಾಟಕದಲ್ಲಿ ಹೆಸರಿನಲ್ಲಷ್ಟೇ ಒಮ್ಮೆ ಸೂಚಿತವಾಗುವ ಬೇಡರ ಪಡೆಯನ್ನೂ ಅದರ ಜೊತೆಗೆ ಶಬರನಾಯಕನನ್ನೂ ಹೊಸದಾಗಿ ಸೇರಿಸಿಕೊಂಡಿದ್ದಾರೆ.

ದುಷ್ಯಂತ-ಶಕುಂತಲೆಯರ ಪ್ರೇಮಪ್ರಸಂಗದ ಭಾಗಗಳನ್ನು ಸಾಕಷ್ಟು ಕತ್ತರಿಸಿ ಹಾಕಿ ಅದರ ಪ್ರಧಾನ ರೇಖೆಯನ್ನು ಮಾತ್ರ ಉಳಿಸಿದ್ದಾರೆ. ಸನ್ನಿವೇಶಗಳ ಅನುಕ್ರಮಣಿಕೆಯಲ್ಲಿ ಕೂಡ ಬದಲಾವಣೆಗಳಾಗಿವೆ. ಕಣ್ವರ ಪಾತ್ರವನ್ನು ಹಿನ್ನೆಲೆಯಲ್ಲಿ ಹೆಸರಷ್ಟೇ ಆಗಿ ಉಳಿದಿದೆ.

**ಎರಡನೇ ಭಾಗದಲ್ಲಿ**

ಪುನಃ ನಗರಕ್ಕೆ ಬರುವ ತಾಪಸಕರು ವಿದೂಷಕ, ಕಂಚಕಿ, ಚೇಟಿಯರು, ಮುಂತಾದ ಪಾತ್ರಗಳನ್ನು ಬೆಳೆಸಿಕೊಂಡಿದ್ದಾರೆ. ಈ ಹಿನ್ನೆಲೆಯಲ್ಲಿ ಧೀವರ(ಮೀನುಗಾರ) ಮತ್ತು ಅಧಿಕಾರಿಗಳ ದೃಶ್ಯಕ್ಕೆ ತಂತಾನೆ ಹೆಚ್ಚಿನ ಪ್ರಾಮುಖ್ಯ ಒದಗಿಸಿಕೊಂಡಿತು. ವರ್ತಕನ ಧನಮಿತ್ರನ ಅತಿಯಾದ ಪ್ರಸಂಗವನ್ನು ಕೊಂಚ ವಿಸ್ತರಿಸಿದೆ. ಬೇಡರ ಹುಡುಗಿಯೊಬ್ಬಳ ಜತೆ ದುಷ್ಯಂತನ ಪ್ರಣಯ ಮತ್ತು ದುಷ್ಯಂತನಿಗೆ ಸಂತಾನವಾಗಲೆಂದು ಪೌರರು ನಡೆಸಿದ ಯಜ್ಞ-ಈ ವಾಚಿಕವೆನ್ನುವುದು ಯಕ್ಷಗಾನದಲ್ಲಿ ಸಾಮಾನ್ಯವಾಗಿ, ಈಗಿನ ನಮ್ಮ ರಂಗನಾಟಕಗಳಲ್ಲಿರುವ ಹಾಗೆ ಭಾವದ ಎರಕವಾಗುತ್ತ ಪೂರ್ಣ ಅಭಿನೀತವಾಗುತ್ತ ಹೋಗುವುದಿಲ್ಲ. ಬದಲು, 'ತಟಸ್ಥ'ವೆನ್ನುವ ಹಾಗೆ ವಾಚಿತವಾಗುತ್ತದೆ. ಇಲ್ಲಿ ಒಂದು ರೀತಿಯಲ್ಲಿ ನಟ ಪ್ರೇಕ್ಷಕರಿಗೆ ಸಾಲುಗಳನ್ನು ಸರಬರಾಜು ಮಾಡುತ್ತ ಹೋಗುತ್ತಾನೆ. ಸಂದರ್ಭ ಅದರ ಲಯ ಮುಂತಾದವುಗಳ ಹಿನ್ನೆಲೆಯಲ್ಲಿ ಪ್ರೇಕ್ಷಕರು ಅದನ್ನು ಗ್ರಹಿಸಿ ತಮ್ಮಲ್ಲಿ ತಾವೇ ಅದನ್ನು ಸೂಕ್ತವಾಗಿ ಪುನಃ ಸೃಷ್ಟಿಸಿಕೊಳ್ಳಬೇಕಾಗುತ್ತದೆ. ಪ್ರೇಕ್ಷಕನನ್ನು ಹೀಗೆ ನೇರ ಸೃಜನಕಾರ್ಯಕ್ಕೆ ತಳ್ಳುವ ಈ ತಂತ್ರ ಕೂಡ ಅಸಾಧಾರಣವಾದದ್ದು.

ಕೆ.ವಿ.ಸುಬ್ಬಣ್ಣನವರೇ ಹೇಳುವಂತೆ ನಿಶ್ಚಿತ ಪೌರಾಣಿಕ ಪ್ರಸಂಗಗಳನ್ನೇ ಪರಂಪರಾಗತವಾಗಿ ಪ್ರಯೋಗಿಸುತ್ತಾ ಬಂದದ್ದರಿಂದ, ಈ ಪ್ರಯೋಗಗಳೇ ಯಕ್ಷಗಾನ ಮಾಧ್ಯಮಕ್ಕೆ ಒಂದು ಮಿತಿಯನ್ನು ವಿಧಿಸಿಬಿಟ್ಟಿವೆ. ಪುರಾಣ ಕಥೆಗಳಿವೆ. ಅದರಲ್ಲೂ ವೀರ್ಯ ಶೌರ್ಯಗಳಿಗಿರುವ ಕಾಳಗಗಳಿಗೆ, ನೆಲಸಲು ಕಾಣದ ಧನಭಾವಗಳಿಗೆ ಮುಂತಾಗಿ ಕೆಲವಕ್ಕೆ ಈ ಮಾಧ್ಯಮ ಮೀಸಲು ಎಂಬ ನಂಬಿಕೆ ಈಗ ದೃಢವಾಗಿಬಿಟ್ಟಿದೆ. ಯಕ್ಷಗಾನದ ಅಂಶಗಳಿಗೆ ಮೂಲತಃ ಇರುವ ವಿಸ್ತಾರವಾದ ವ್ಯಾಪ್ತಿಯನ್ನು ಯಾರು ಗಮನಿಸಿಯೇ ಇಲ್ಲ. ಇನ್ನು ಯಾವುದೋ ಕಾರಣಗಳಿಗಾಗಿ ಪ್ರಸ್ತುತ ಪ್ರಯೋಗಗಳ ಮಿತಿಯನ್ನು ಮೀರಲಿಕ್ಕೇ ಹೊರಟವರು ಅಸಂಬದ್ಧವೂ ಬಾಲಿಶವೂ ಆದ ಭೂತ-ಪವಾಡ-ಮಹಿಮಾ ಕಥೆಗಳಿಂದ ಅಸಹ್ಯ ಹುಟ್ಟಿಸುತ್ತಿದ್ದಾರೆ.

ಇಂಥ ಅನಿಸಿಕೆಗಳು ಕಾರಣವಾಗಿ, ಯಕ್ಷಗಾನದ ಅಂಶಗಳನ್ನು ರಂಗಭೂಮಿಗೆ ಅಳವಡಿಸಿಕೊಳ್ಳುವ ದಿಕ್ಕಿನಲ್ಲಿ ಮಕ್ಕಳ ನಾಟಕಗಳಿಂದ ಹಿಡಿದು ಹಲವು ಪ್ರಯೋಗ ಮಾಡಿದ್ದಾರೆ. ಯಕ್ಷಗಾನವನ್ನು ಪುನರುಜ್ಜೀವನಗೊಳಿಸಿ ಕೊಟ್ಟ ಡಾ.ಶಿವರಾಮ ಕಾರಂತರ ಪ್ರಯೋಗಗಳು ಮೊದಲು ಇವರಿಗೆ ಧೈರ್ಯ ಕೊಟ್ಟಿವೆ ಎಂದಿದ್ದಾರೆ. ಈಚಿನ ಬಿ.ವಿ.ಕಾರಂತರ ಪ್ರಯೋಗವನ್ನು ಮೆಚ್ಚಿಕೊಂಡಿದ್ದಾರೆ. ಯಕ್ಷಗಾನದ ಬಳಕೆಯ ಅಂಶಗಳನ್ನು ಬಳಕೆಯಾಗದೆ ಉಳಿದಿರುವ ಸಾಧ್ಯತೆಗಳನ್ನು ಹೊಸ ರಂಗಭೂಮಿಯಲ್ಲಿ ಪ್ರಯೋಗಿಸಿ ನೋಡುವ ಆಸಕ್ತಿಯಿದ್ದ ಸಂದರ್ಭದಲ್ಲಿ ಶಾಕುಂತಲ ನಾಟಕದಿಂದ

ದೊರೆತ ಅನೇಕ ಸ್ತರಗಳ ಸಂಕೀರ್ಣ ಅನುಭವವನ್ನು ರಂಗದಲ್ಲಿ ಪಡಿಮೂಡಿಸಿಕೊಳ್ಳಲಿಕ್ಕೆ ಮಾರ್ಗ ದೇಸಿ ನಾಟ್ಯಧರ್ಮಿ–ಲೋಕಧರ್ಮಿ, ಆಲಂಕಾರಿಕ–ಸಹಜ ಮುಂತಾದ ದ್ವಂದ್ವಗಳಿಗೆ ನೆಲೆ ಕೊಟ್ಟುಕೊಂಡ ಯಕ್ಷಗಾನದ ಮಾಧ್ಯಮ ಅತ್ಯಂತ ಸೂಕ್ತವೆಂದು ಹೊಳೆದದ್ದು ಸಹಜವೆಂದಿದ್ದಾರೆ. ವಾಸ್ತಕಕ್ಕೆ ತಕ್ಕಂತೆ ಹಂಚಿಕೊಳ್ಳಲು ಮುಂದಾಗಿದ್ದಾರೆ.

ಎರಡರ ಪ್ರಸ್ತಾಪ ಹೊಸದಾಗಿ ಸೇರಿಸಿಕೊಂಡೆ, ಒಂದು ದೃಶ್ಯದ ಮೂಲಕ ಹಂಸಪದಿಕೆಯ ಪಾತ್ರವನ್ನು ಪ್ರವೇಶ ಮಾಡಿಸಿದೆ. ಮಾತಲಿ ಸತ್ತ್ವದ ರೂಪ ತಾಳುವುದನ್ನು 'ರಾಕ್ಷಸ ರೂಪ' ಎಂದು ಮಾರ್ಪಾಟು ಮಾಡಿದೆ(ಇದು ಮುಖ್ಯವಾಗಿ ಯಕ್ಷಗಾನ ವರ್ಣಿಕೆಯ ಚಂದವನ್ನು ಕಾಣಲಿಕ್ಕೆ ಮಾತ್ರ ಬಳಿಸಿದ್ದಾರೆ). ಎರಡನೇ ಭಾಗದಲ್ಲೂ ಮುಖ್ಯವಾಗಿ ದುಷ್ಯಂತನಿಗೆ ಸಂಬಂಧಿಸಿದ ಕೆಲವು ಭಾಗಗಳನ್ನು ಕತ್ತರಿಸುವುದು ಅಗತ್ಯವಾಯ್ತು. ಶಕುಂತಲೆಯನ್ನು ಅರಮನೆಗೆ ಕರೆತರುವ ಮತ್ತು ಆಕೆ ರಾಜನಿಂದ ತಿರಸ್ಕೃತಳಾಗುವ ದೃಶ್ಯದಲ್ಲಿ ಅಲ್ಲಲ್ಲಿ ಕತ್ತರಿಸಿ ಈ ದೃಶ್ಯ ರಾಜಾಸ್ಥಾನದ ನಿತ್ಯದ ನಿರ್ವ್ಯೆಯಕ್ತಿಕ ವಿಚಾರಣಾ ವ್ಯವಹಾರವೆನ್ನುವ ಹಾಗೆ ಹ್ರಸ್ವದಲ್ಲಿ ನಡೆದು ಹೋಗುವ ಹಾಗೆ ಮಾಡಿಕೊಂಡಿದ್ದಾರೆ.

ಹೀಗೆ ಕೂಡಿ ಕಳೆದು ತಯಾರಾದ ಹೊಸ ಪಠ್ಯ ಅಂತಿಮವಾಗಿ ಸುಮಾರಾಗಿ ಮೂಲದಷ್ಟೇ ಒಟ್ಟಿನ ಗಾತ್ರವುಳ್ಳದಾಗಿದೆ(ಪ್ರದರ್ಶನಗೊಂಡ ಅವಧಿ: ಸು. ೧೩೫ ನಿಮಿಷಗಳು).

ಕೆ.ವಿ.ಸುಬ್ಬಣ್ಣನವರು ಮೊದಲಿಗೆ ಕನ್ನಡದಲ್ಲಿ ಪಠ್ಯವನ್ನು ಸಿದ್ಧಗೊಳಿಸಿಕೊಂಡು, ಅದಕ್ಕೆ ಸಾಮಾನ್ಯವಾಗಿ ಕಾಳಿದಾಸನ ಮಾತುಗಳನ್ನೇ ಸರಳವಾಗಿ ಅನುವಾದಿಸಿಕೊಂಡಿದ್ದಾರೆ. ಆಶ್ರಮದ ದೃಶ್ಯದಲ್ಲಿ ಅಲ್ಲಲ್ಲಿ ಆವರಣ ಸೃಷ್ಟಿಗೆ ನೆರವಾದೀತೆಂದು ಸಂಭಾಷಣೆಗಳ ಮಧ್ಯೆ ಚಿಕ್ಕ ಚಿಕ್ಕ ಸರಳ ಸಂಸ್ಕೃತ ವಾಕ್ಯಗಳನ್ನು ಬಳಸಿಕೊಂಡಿದ್ದಾರೆ. ಅರಮನೆಯಲ್ಲಿ ಶಕುಂತಲೆ ತಿರಸ್ಕೃತಳಾಗುವ ವಿಚಾರಣ ದೃಶ್ಯವನ್ನು ಪೂರ್ತಿ ಸರಳ ಸಂಸ್ಕೃತ ಸಂಭಾಷಣೆಯಲ್ಲಿ ನಡೆಸಿದ್ದಾರೆ. ನಾಲ್ಕೆಂಟು ಕಡೆಗಳಲ್ಲಿ ಯಕ್ಷಗಾನಕ್ಕೆ ಸಹಜವಾದ ದೀರ್ಘ ಭಾಷಣಗಳನ್ನು ಸೇರಿಸಿ ಆ ಮೂಲಕ ಪ್ರೇಕ್ಷಕರಿಗೆ, ನಾಟಕವನ್ನು ನೋಡಲಿಕ್ಕೆ ಅನುಕೂಲವಾದ ನೆಲೆ–ನಿಲುವುಗಳನ್ನು ಕಲ್ಪಿಸಿಕೊಡಲು ಯತ್ನಿಸಿದ್ದಾರೆ(ಗೆ. ಬಾಲೂರಾವ್. ಅತುಲ್ ತಿವಾರಿ ಮತ್ತು ಅಕ್ಷರ ನಾಟಕವನ್ನು ಹಿಂದಿಗೆ ಪರಿವರ್ತಿಸಿದ್ದಾರೆ).

ಪುನರ್‌ರಚಿತ ನಾಟಕಕ್ಕೆ 'ಲೋಕ ಶಾಕುಂತಲ' ಎಂಬ ಹೆಸರು ಕೊಟ್ಟಿದ್ದಾರೆ. ಇದು ಶಾಕುಂತಲದ ಪರಿಸರ ಪ್ರಪಂಚವನ್ನು ಖಚಿತಗೊಳಿಸಲು ಯತ್ನಿಸುವಂಥದು. ಶಾಕುಂತಲದ ಒನ್ನೆಲೆಯ ಜನವರ್ಗಗಳ ನೆಲೆಯಿಂದ ಮುಖ್ಯವಾಗಿ ಒಟ್ಟಿನ ಅರ್ಥವಂತಿಕೆಯನ್ನು ಹುಡುಕುವಂಥದ್ದು, ಜಾನಪದ ಶೈಲಿ ಬಳಸಿಕೊಂಡು, ಜಾನಪದ ಮುಖ್ಯವಾದದ್ದು ಇತ್ಯಾದಿ ಅಂಶಗಳನ್ನು ವಿಜ್ಞಾಪಿಸಿಕೊಡಲಿ ಎಂಬ ಆಶಯವನ್ನು ಕೆ.ವಿ. ಸುಬ್ಬಣ್ಣನವರು ಅಭಿಪ್ರಾಯ ಪಟ್ಟಿದ್ದಾರೆ.

ಕೆ.ವಿ. ಸುಬ್ಬಣ್ಣನವರು ಯಕ್ಷಗಾನದ ಬಳಕೆಯ ಬಗ್ಗೆ ಈ ಕೆಳಗಿನಂತೆ ಹೇಳಿದ್ದಾರೆ.

ಯಕ್ಷಗಾನದಲ್ಲಿ ಪದ್ಯ ಪ್ರಬಂಧವನ್ನೇ ಮೂಲಾಧಾರವಾಗಿ ಇಟ್ಟುಕೊಂಡಿರುವುದರಿಂದ ಮೊದಲಿನಿಂದ ಕೊನೆಯತನಕ ಹಾಡುಗಳು ಕಂಡುಬರುತ್ತವೆ. ಹಾಗೆ ಇರುವುದರಿಂದಲೇ ಆಸು

ಸಂಭಾಷಣೆ ಸಾಧ್ಯವಾಗುತ್ತದೆ. ಇಲ್ಲಿ ಆಶು ಸಂಭಾಷಣೆ ಇಲ್ಲದ್ದರಿಂದ ಆ ತೀವ್ರತೆ ಬೇಕೆನಿಸಿದ ನಾಲ್ಕಾರು ಕಡೆಗಳಲ್ಲಿ ಮಾತ್ರವೇ ಸರಳವಾದ ಕಿರುಗೀತೆಗಳನ್ನು ಹಾಕಿಕೊಂಡಿದ್ದಾರೆ. ಎಲ್ಲ ಯಕ್ಷಗಾನದ ಧಾಟಿ-ಶೈಲಿಗಳಲೇ ಹೆಚ್ಚು ಭಾಗಗಳಲ್ಲಿ ಯಕ್ಷಗಾನ ಶೈಲಿಯ ಆಲಾಪಗಳನ್ನು ಮೃದಂಗದ ಬಿಡತಿಗೆ(ಬೋಲ್)ಗಳನ್ನು ಆಶ್ರಮ ಸನ್ನಿವೇಶಗಳಲ್ಲಿ ಮಂತ್ರ ಸ್ವರಗಳನ್ನು ಉಪಯೋಗಿಸಿಕೊಂಡವು.

ಯಕ್ಷಗಾನದ ಹಲವು ಪರಿಣಾಮಕಾರಿ ನೃತ್ಯಖಂಡಗಳನ್ನು(ರಥಕುಣಿತ, ಒಡ್ಡೋಲಗ, ಸುತ್ತಕುಣಿತ, ಬೇಟೆ ಇತ್ಯಾದಿ) ಆಯ್ದು ಅವನ್ನು ಹೊಸ ಚಲನರೇಖೆಗಳಲ್ಲಿ ಯೋಜಿಸಿ ಬಳಸಿಕೊಂಡಿದ್ದಾರೆ. ನೃತ್ಯಗಳಿಲ್ಲದಲ್ಲಿ ಯಕ್ಷಗಾನ ಶೈಲಿಗೆ ಹೊಂದುವ ಚಲನೆಗಳನ್ನು ರೂಪಿಸಿಕೊಂಡು ಇಡೀ ನಾಟಕದಲ್ಲಿ ಲಯಬದ್ಧತೆಯನ್ನು ಕಲ್ಪಿಸಿದ್ದಾರೆ.

ರಾಜ, ಶಬರನಾಯಕ ರಾಣಿ, ಮಾತಲಿ, ರಾಕ್ಷಸ, ಸರ್ವದಮನ ಇವರುಗಳಿಗೆ ಯಕ್ಷಗಾನದ ಶೈಲೀಕೃತ ವೇಷವರ್ಣಿಕೆಗಳನ್ನೇ ಇಟ್ಟುಕೊಂಡಿದ್ದಾರೆ. ಈ ಒಂದೊಂದಕ್ಕೂ ವಿಶಿಷ್ಟ ಒಂದೊಂದು ವೇಷವರ್ಣಿಕೆಗಳ ಮಾದರಿ ಇರುವುದರಿಂದ, ಒಟ್ಟಿನಲ್ಲಿ ಯಕ್ಷಗಾನದ ವೇಷವೈವಿಧ್ಯವನ್ನು ಸಂಪೂರ್ಣವಾಗಿ ತಂದುಕೊಳ್ಳಲು ಸಾಧ್ಯವಾಯಿತು(ಯುದ್ಧದಲ್ಲಿ ಉದ್ಯುಕ್ತಳಾದ ವೀರಸ್ತ್ರಿಗೆ ಯಕ್ಷಗಾನದಲ್ಲಿ ಕಸೆಸೀರೆಯ ವಿಶಿಷ್ಟ ವೇಷವಿದೆ. ಸರ್ವಸ್ವತಂತ್ರ ಜೀವನಕ್ರಮವಿರುವ ಪರ್ವತಪ್ರಾಂತದಿಂದ ಬಂದವಳು ಎಂದು ಕಲ್ಪಿಸಲಾದ ರಾಣಿ ಹಂಸಪದಿಕೆಗೆ ಈ ವೇಷ ಬಳಸಿದ್ದಾರೆ). ಕಸೆ ಸೀರೆಯುಟ್ಟ ಹುಡುಗಿ, ಕೊಡುಗಳನ್ನು ಸೂಚಿಸುವ ಶಿರೋಭೂಷಣ ತೊಟ್ಟು ಸಾಂಕೇತಿಕ ಜಿಂಕೆಯಾದಳು. ಇನ್ನುಳಿದ ಪಾತ್ರಗಳಿಗೆ ಪಾತ್ರಸಹಜವೆನ್ನಿಸುವ ವಾಸ್ತವಿಕ ವೇಷ ವರ್ಣಿಕೆಗಳನ್ನು ಬಳಸಿದ್ದಾರೆ(ಯಕ್ಷಗಾನದಲ್ಲಿ ಇದೇ ಕ್ರಮವಿದೆ). ಒಟ್ಟಿನಲ್ಲಿ ಆರು ಪಾತ್ರಗಳಿಗೆ ಶೈಲೀಕೃತ ವೇಷಗಳನ್ನು ಉಳಿದ ಸುಮಾರು ಇಪ್ಪತ್ತು ಪಾತ್ರಗಳಿಗೆ ವಾಸ್ತವಿಕ ವೇಷಗಳನ್ನು ಯೋಜಿಸಿಕೊಂಡಿದ್ದರಿಂದ ನಾಟಕದ ಆಶಯ ನಕ್ಷೆಗೆ ಇದು ಹೊಂದಿಕೆಯುಳ್ಳದ್ದಾಗಿತ್ತು ಎಂದಿದ್ದಾರೆ.

ಬಿಲ್ಲುಬಾಣಗಳಿಂದ ಮೊದಲಾಗಿ ಪಾತ್ರ-ವಸ್ತು, ರಂಗ-ವಸ್ತುಗಳನ್ನು ಕನಿಷ್ಠಕ್ಕಿಳಿಸಿಕೊಂಡು ಅವನ್ನೆಲ್ಲ ಯಕ್ಷಗಾನದ ಕ್ರಮದಲ್ಲೇ ಸೂಚ್ಯ-ಸಾಂಕೇತಿಕವಾಗಿಸಿದ್ದಾರೆ. ಪ್ರವೇಶಕ್ಕೆ ಉಪಯೋಗಿಸುವ ಯಕ್ಷಗಾನದ ಕಿರು-ತೆರೆಗಳನ್ನು ಕೊಂಚ ಬದಲಾವಣೆಯೊಡನೆ ಮೂರು-ನಾಲ್ಕು ಕಡೆ ಬಳಸಿದ್ದಾರೆ ಹಾಗೂ ನಾಟಕಕ್ಕೆ ಸಹಕರಿಸಿದ ಎಲ್ಲರನ್ನೂ ಸ್ಮರಿಸಿದ್ದಾರೆ.

ನಾಟಕ ಎನ್ನುವುದು ಸಮೂಹ ಕೃತಿ ಎಂಬ ಸವಕಲು ಮಾತನ್ನು ಯಾವಾಗಲೂ ಹೇಳುತ್ತಿರುತ್ತೇವೆ. ಆದರೆ, ಪ್ರಯೋಗದಲ್ಲೇ ಅದರ ನಿಜವನ್ನು ಕಾಣುವುದು ನಿಜವಾಗಿ ಒಂದು ರೋಮಾಂಚನಕಾರಿ ಅನುಭವವೆಂದು ಲೇಖಕರು ನಾಟಕದ ಕೊನೆಗೆ ಹೇಳಿದ್ದಾರೆ.

**ಡಿ.ವಿ.ಜಿ.ಯವರ ಗೀತಶಾಕುಂತಲ**

ಕಾಳಿದಾಸ ಕವಿಯ ಪ್ರಸಿದ್ಧ ಸಂಸ್ಕೃತ ನಾಟಕದ ಕೆಲವು ಸರಸ ಸಂದರ್ಭಗಳ ಸಂಗೀತಾನುವಾದ(೧೯೬೯). ಡಿವಿಜಿಯವರು ಬರೆದಿರುವ ಗೀತಶಾಕುಂತಲದಲ್ಲಿ ಕಾಳಿದಾಸ ಕವಿಯ

ಶಾಕುಂತಲ ನಾಟಕದಲ್ಲಿಯ ಕೆಲವು ಸರಸ ಸಂದರ್ಭಗಳು, ಸಂಸ್ಕೃತ ಪದ್ಯವೋ ವಚನವೋ ಅಗಿರುವುದು ಇಲ್ಲಿ ಕನ್ನಡ ಹಾಡಾಗಿದೆ. ಸಾಮಾನ್ಯ ಜನರು ತಮ್ಮ ಆತ್ಮ ಆನಂದಕ್ಕಾಗಿ ತಮ್ಮ ತಮ್ಮಲ್ಲಿ ಹಾಡಿಕೊಳ್ಳುವಂತೆ ಸಂತೋಷಪಡುತ್ತಾರೆ. ರಾಗಶುದ್ಧಿ ಬಲ್ಲವರಲ್ಲ. ಶ್ರುತಿ ತಾಳ ತಿಳಿದವರಲ್ಲ, ಆದರೂ ಸಂತೋಷಪಡುತ್ತಾರೆ. ಮಕ್ಕಳು, ಸ್ತ್ರೀಯರು ಪೂಜೆ ಕಾರ್ಯಗಳಲ್ಲಿ ಹಾಡುತ್ತಾರೆ. ಹೀಗೆ ಮನುಷ್ಯ ಸಹಜವಾದ ಹೃದಯ ವಿಕಾಸವೇ ಸಂಗೀತದ ಮೂಲ, ಹಾಡಿನ ಮೂಲ, ಪದ್ಯದ ಮೂಲ, ಅಂಗಭಂಗಿಯ ಮೂಲ, ಶಿಲ್ಪ ಚಿತ್ರಣಗಳ ಮೂಲ, ಎಲ್ಲ ಕಲಾವ್ಯಾಪಾರಕ್ಕೂ ಮೂಲ, ಹೃದಯಭಾವವು ತುಟಿಯ ಮೂಲಕವೋ ಕೊರಲ ಮೂಲಕವೋ ಕಣ್ಣು ಕೈಗಳ ಮೂಲಕವೋ ಹೊರಕ್ಕೆ ಹರಿದು ಬಾರದೆ, ಒಳಗಡೆಯೇ ನಿಂತರೆ, ಗಡ್ಡೆ ಕಟ್ಟಿ ಭಾರವಾಗುತ್ತದೆ. ಅದು ಹರಿದು ಹೊರಕ್ಕೆ ಬಂದಾಗ ಎದೆ ಕೊಂಚ ಹಗುರವಾಗುತ್ತದೆ. ಈ ಕಾರಣದಿಂದ ಭಾವಾಭಿವ್ಯಕ್ತಿಯು ಹೃದಯ ಜೀವನದಿ ಒಂದು ಅನಿವಾರ್ಯವಾದ ಅವಶ್ಯಕತೆ. ಇದು ಎಲ್ಲ ನೈಜವಾದ ಕಲಾಕೃತಿಗೂ ಅನ್ವಯಿಸುವ ಮಾತು. ಅಂತರಂಗದಲ್ಲಾಗುವ ಅನುಭವಗಳನ್ನು ಲಕ್ಷಿಸದಾತನು ಯೋಗಿ, ಹೇಳಿಕೊಳ್ಳದಾತನು ಮಾಗಿ, ಮಿಕ್ಕೆಲ್ಲ ಮನುಷ್ಯರೂ ಬಾಯಿಬಿಟ್ಟು ವಿವರಿಸಿ ಹೇಳಿಕೊಂಡ ಹೊರತು ಅವರ ಎದೆಯೊತ್ತಡ ಇಳಿಯದು. ಅರಳಿದ ಹೊರತು ಹೂಮೊಗ್ಗಿನ ಬಾಳು ಸಾರ್ಥಕವಾಗದು. ಭಾವ ಪ್ರಕಟವಾದ ಹೊರತು ಹೃದಯ ಜೀವನ ಸಾಂಗವಾಗದು ಎಂದು ತಮ್ಮ ಕೃತಿಯಲ್ಲಿ ಡಿ.ವಿ.ಜಿ.ಯವರು ಹೇಳಿದ್ದಾರೆ.

ಶಾಸ್ತ್ರಜ್ಞಾನವೂ ಕಲಾನುಭವವೂ ಒಂದೇ ಪದಾರ್ಥವಲ್ಲ. ಅವುಗಳೆರಡರಲ್ಲಿ ಒಂದಿದ್ದ ಕಡೆ ಇನ್ನೊಂದು ಇದ್ದೇ ಇರುತ್ತದೆಂಬ ನಿಶ್ಚಯವೂ ಇಲ್ಲ. ಶಾಸ್ತ್ರಕ್ಕೆ ಬೇಕಾದದ್ದು ಸ್ವಪ್ರಯೋಗಾವಕಾಶ. ಮರದ ತುಂಡಿಲ್ಲದ ಕಡೆ ಬಡಗಿಗೆ ಕೆಲಸವಿಲ್ಲ. ವಜ್ರ ಮಾಣಿಕ್ಯಗಳಿಲ್ಲದ ಕಡೆ ರತ್ನ ಪರೀಕ್ಷಕನಿಗೆ ಕೆಲಸವಿಲ್ಲ. ಗ್ರಂಥವಿಲ್ಲದ ಕಡೆ ವೈಯಾಣಿಕರಣಿಗೆ ಕೆಲಸವಿಲ್ಲ. ಹಾಗೆಯೇ ಗೀತವಿಲ್ಲದ ಕಡೆ ಸಂಗೀತಶಾಸ್ತ್ರಿಗೆ ಕೆಲಸವಿಲ್ಲ. ಕಾವ್ಯವೋ ಗೀತೆಯೋ ಶಿಲ್ಪವೋ ಸಿದ್ಧವಾದಾಗ ಆ ಕಲೆಗೆ ಸಂಬಂಧಪಟ್ಟ ಶಾಸ್ತ್ರಪಂಡಿತನು ಅಲ್ಲಿ ಕೆಲಸ ಕಾಣುತ್ತಾನೆ. ಗುಣದೋಷ ಪರೀಕ್ಷೆ ಆ ಕೆಲಸ. ಕಲಾಕೃತಿ ಈ ವಿಮರ್ಶಕನ ಬಾಯಿಗೆ ತುತ್ತು.

ಮನುಷ್ಯಸ್ವಭಾವದ ಉಲ್ಲಾಸವು ಕತೆಗೆ ಮೂಲದ್ರವ್ಯವಾದರೆ ಕಲೆಯನ್ನು ಪರಿಷ್ಕಾರಪಡಿಸಿ ಮತ್ತಷ್ಟು ಸೊಗಸುಗೊಳಿಸುವ ಶಾಸ್ತ್ರವು ಮನುಷ್ಯಸ್ವಭಾವದ ಅಂತರಂಶವಾದ ಬುದ್ಧಿಯ ಪ್ರಭಾವ. ಮನುಷ್ಯನು ತನ್ನ ಕಲಾನುಭವಗಳನ್ನು ಆಗಾಗ ಪರೀಕ್ಷೆ ಮಾಡಿಕೊಳ್ಳುತ್ತ ಸುಖಕರ ಕ್ರಿಯೆಗಳನ್ನು ಕಂಡುಕೊಳ್ಳುತ್ತ ಮನಸ್ಸೊಪ್ಪಿದ ಲಕ್ಷಣಗಳನ್ನು ಪರೀಕ್ಷಿಸಿ ಗುರುತು ಮಾಡಿಕೊಳ್ಳುತ್ತಾ ಹೋಗುತ್ತಾನೆ. ಹೀಗೆ ಪ್ರಕೃತಿಸಿದ್ಧವಾದ ನಾದ ಸಾಮಗ್ರಿಯು ಬುದ್ಧಿಶಕ್ತಿಯಿಂದ ಸಂಸ್ಕೃತಿ ಪಡೆದು ಸಂಗೀತವಾಗುತ್ತದೆ. ಆ ಸಂಸ್ಕಾರ ವಿಧಾನವೇ ಶಾಸ್ತ್ರ. ಶಾಸ್ತ್ರ ಕ್ರಿಯೆಯಿಂದ ಕಲೆಯ ಉತ್ಕೃಷ್ಟತೆಯಾಗಿದೆ.

ನಮ್ಮ ದೃಷ್ಟಿಯು ಕಲಾಕೃತಿಯ ಒಟ್ಟರ್ಥದ ಕಡೆಗೆ ಇರಬೇಕಾದ್ದೋ ಹೊರತು ಅಕ್ಷರಕ್ಷರದ ಮೇಲೆ, ಗೆರೆಗೆರೆಯ ಮೇಲೆ ಇರಬೇಕಾದದ್ದಲ್ಲ. ಕವಿಯೂ ಚಿತ್ರಗಾರನೂ ತಮ್ಮ ಆವೇಶದ

ರಭಸದಲ್ಲಿ, ಒಂದು ಪ್ರೌಢಿಮೆಯಿಂದ ವಾಗ್ವಿಜೃಂಭಣೆ ಮಾಡಿಯಾರು; ಒಂದು ಪ್ರಭುಶೀಲಿಯಿಂದ ರೇಖಾವಿನ್ಯಾಸ ಮಾಡಿಯಾರು; ರಾಶಿರಾಶಿಯಾಗಿ ಅಲಂಕಾರಗಳನ್ನೂ ಲಾಂಛನಗಳನ್ನೂ ತುಂಬಿಯಾರು, ನಮಗೆ ಹೆಚ್ಚು ಪರಿಗ್ರಾಹ್ಯವಾದ್ದು ಆ ಧೋರಣೆಯಿಂದ ಧ್ವನಿತವಾದ ಭಾವಾವೇಶ. ಅಕ್ಷರವನ್ನೂ ಹಿಡಿದು ಸೆಳೆದಾಡಿದರೆ, ವಾಕ್ಯಾಲಂಕಾರವನ್ನು ಅತಿಯಾಗಿ ಹಿಸುಕಿ ಹಿಂಡಿದರೆ, ಕೆಲವೆಡೆಯೇನೋ ಹೆಚ್ಚಿನ ಸ್ವಾರಸ್ಯ ತೋರಬಹುದು. ಆದರೆ ಇನ್ನೂ ಕೆಲವೆಡೆ ರುಚಿಗಿಂತ ಒಗರು ಅಧಿಕವಾಗಬಹುದು. ಕವಿಕರ್ಮದಲ್ಲಿ, ಕಲಾಕರ್ಮದಲ್ಲಿ ಕರ್ತೃವಿನ ಕೈ ಸೋಲುವುದುಂಟು, ಮನಸ್ಸು ಅಲಸುವುದುಂಟು, ಉದ್ರೇಕದಿಂದ ವೇಗ ವಿಪರೀತವಾಗುವುದೂ ಉಂಟು, ಚಮತ್ಕಾರ ಅತಿಯಾಗಿ ಹೆಜ್ಜೆ ತೊಡರುವುದೂ ಉಂಟು. ಹೀಗೆ ಎಷ್ಟೋ ಕಾರಣಗಳಿಂದ ಕಲಾಕೃತಿಯ ಕೆಲವು ಭಾಗಗಳಲ್ಲಿ ಹೆಚ್ಚು ಕಡಿಮೆಗಳು ಕಾಣಬಹುದು. ಆದರೆ ನಾವು ನೋಡಬೇಕಾದದ್ದು ಒಟ್ಟನ್ನು, ಸಮಗ್ರ ದೋರಣೆಯನ್ನು, ಸಮವಾಯದ ತಾತ್ಪರ್ಯವನ್ನು, ಆಗ ನಮಗೆ ಪ್ರಯೋಜನ ಹೆಚ್ಚು.

ಕಲಾಕೃತಿಯ ಪ್ರಥಮ ಪ್ರಯೋಜನ ತತ್ಕರ್ತೃವಿಗೆ ಎಂದು ಮೇಲೆ ಹೇಳಿದೆ. ಅದಷ್ಟೇ ತತ್ವದ ಮಾತು. ವಿಷಯ ಯಾವುದೇ ಆಗಿರಲಿ, 'ಆತ್ಮನಸ್ತು ಕಾಮಾಯ ಸರ್ವಂ ಪ್ರಿಯಂ ಭವತಿ', ಡಿವಿಜಿಯವರೇ ಹೇಳುವಂತೆ ಕಾಳಿದಾಸ ಕವಿಯ ಜಗತ್ಪ್ರಸಿದ್ಧವಾದ ಶಾಕುಂತಲ ನಾಟಕವನ್ನು ಬೆಂಗಳೂರು ಗೋಖಲೆ ಸಾರ್ವಜನಿಕ ವಿಚಾರ ಸಂಸ್ಥೆಯ ಗ್ರಂಥ ವ್ಯಾಸಂಗ ಗೋಷ್ಠಿಯ ಸದಸ್ಯ ಮಿತ್ರರೊಂದಿಗೆ ಎರಡು ಸಾರಿ ವ್ಯಾಸಂಗ ಮಾಡುವ ಭಾಗ್ಯ ನನಗೆ ದೊರಕಿತು. ಆಗ ನಮಗೆ ಸ್ವಾರಸ್ಯ ಭೂಮಿ ಎಂದು ತೋರಿದ ಕಡೆ ಆದ ಭಾವವಿಕಾಸವನ್ನು ಪುನಃ ಪುನಃ ನೆನೆದು ಸವಿದುಕೊಳ್ಳಲಾಗುವಂತೆ ಹಾಡಿನ ರೂಪದಲ್ಲಿ ಗುರುತು ಮಾಡಿಡಬೇಕೆಂದು ನನಗನ್ನಿಸಿತು. ಹಾಗೆ ಹುಟ್ಟಿದವು ಈ ಗೀತೆಗಳು.

ಕಾಳಿದಾಸನ ಸ್ವಾರಸ್ಯಗಳು ನೂರಾರು ಅವು ಹತ್ತಾರುಬಗೆ. ಅವುಗಳಲ್ಲಿ ಹೆಚ್ಚಿನ ಭಾಗ ಶಾಕುಂತಲದವು. ಅಂಥ ಪ್ರಕರಣಗಳಲ್ಲಿ ತೀವ್ರಸ್ಪರ್ಶಿಯೆನ್ನಿಸಿದ ಕೆಲವನ್ನು ಇಲ್ಲಿ ರೂಪಗೊಳಿಸಿದೆ. ಚಿತ್ತವಿಸ್ತಾರ ಇಲ್ಲಿಯ ಮುಖ್ಯಾಶಯವಾಗಿದೆ.

ಈ ಗೀತೆಗಳು ಕಾಳಿದಾಸನ ಮನೋಗತವನ್ನು ಯಥಾವತ್ತಾಗಿ ಪ್ರತಿಧ್ವನಿಸುತ್ತವೆ ಎಂದು ಹೇಳಿಕೊಳ್ಳಲು ಡಿವಿಜಿಯವರಿಗೆ ಆಸೆಯಾಗುತ್ತದೆ ಎಂದು ಹೇಳಿಕೊಂಡಿದ್ದಾರೆ.

೧. ಕಾಳಿದಾಸನ ಪದಶಯ್ಯೆಗೆ ಸಮನಾದದ್ದು ತನ್ನದು ಎಂದು ಹೇಳಿಕೊಳ್ಳಬಲ್ಲವನು ಯಾರಾದರೂ ಎಲ್ಲಿಯಾದರೂ ಇದ್ದರೆ ಅಂಥವನು ನಾನಲ್ಲವೆಂದಿದ್ದಾರೆ.

೨. ಕಾಳಿದಾಸನು ಒಂದೆರಡು ಮಾತುಗಳಿಂದ ಧ್ವನಿತ ಮಾಡಿರುವುದಕ್ಕೆ ನಾನು ಕೆಲವು ಕಡೆ ಮೂರು ನಾಲ್ಕು ಮಾತುಗಳನ್ನು ಉಪಯೋಗಿಸಿರಬಹುದು. ಅಲ್ಲಿಯ ವ್ಯಂಗ್ಯ ಇಲ್ಲಿ ವಾಚ್ಯವಾಗಿರುತ್ತದೆ. ಅದು ಕವನ ಚತುರತೆಯಲ್ಲವೆಂದು ವಿಮರ್ಶಕರು ಹೇಳಿದ್ದಾರೆ.

೩. ಕಾಳಿದಾಸನ ಅಂತರ್ಭಾವಕ್ಕಿಂತ ಕೊಂಚ ಹೆಚ್ಚಾದದ್ದೋ ಕೊಂಚ ಕಡಿಮೆಯಾದದ್ದೋ ಇಲ್ಲಿ ಬಂದಿಲ್ಲವೆಂದು ಡಿವಿಜಿಯವರು ಹೇಳಲಾರೆ ಎಂದಿದ್ದಾರೆ. ಸ್ವತಃ ತಮಗೆ ಸೂಚಿದಂತೆ ಈ ಕೃತಿಯನ್ನು ಬರೆದಿದ್ದೇನೆ ಎಂದಿದ್ದಾರೆ.

ಹೀಗೆ ನ್ಯೂನತೆಗಳೂ ಅತಿರೇಕಗಳೂ ಡಿವಿಜಿಯವರ ರಚನೆಯಲ್ಲಿ ಕಾಣಬರುವುವುದು ಅಸಂಭವವಲ್ಲ. ಕವಿಯ ಮೂಲಕಾವ್ಯದಲ್ಲಿ ಸ್ಪಷ್ಟವಾಗದೆ ಗೂಢವಾಗಿದೆಯೆಂದು ತನಗೆ ತೋರುವ ಧ್ವನಿಭಾವವನ್ನು ಅಂತರ್ಭಾವವನ್ನು ಸ್ಫುಟಪಡಿಸುವುದು ವ್ಯಾಖ್ಯಾನಕಾರನಿಗೆ ಸಂಪ್ರದಾಯದಿಂದ ಬಂದಿರುವ ಒಂದು ಅಧಿಕಾರ. ಹಾಗೆ ಇದು ಗೀತ ವ್ಯಾಖ್ಯಾನ. ಇದನ್ನು ಕಾಳಿದಾಸನ ಹೃದಯದ ಪ್ರತಿಬಿಂಬವೆಂದು ಹೇಳುವುದಕ್ಕಿಂತ, ಅನುವಾದಕನ ಹೃದಯದರ್ಪಣದಲ್ಲಿ ಪ್ರತಿಫಲಿಸಿದ ಕಾಳಿದಾಸನ ಪ್ರತಿಬಿಂಬದ ಪ್ರತಿಬಿಂಬವೆಂದು ಹೇಳುವುದು ಸರಿಯಾದೀತು. ಆತನ ದೃಷ್ಟಿಯಲ್ಲಿದ್ದ ವಾಚಕ ಪ್ರೇಕ್ಷಕ ಸಮಾಜ ಆತನದು. ನನ್ನ ಸಮಾಜ ನನ್ನದು,. ಎರಡರ ಮನಃಪರಿಪಾಕವೂ ಬುದ್ಧಿ ಸಂಸ್ಕಾರವೂ ಒಂದೇ ಮಟ್ಟದವೆಂದು ನಾನು ಹೇಳಲಾರೆ ಎಂದಿದ್ದಾರೆ. ಕಾಳಿದಾಸನ ಮನೋಭಾವ ಇಂದಿನ ನನ್ನ ಜನಕ್ಕೆ ಅಷ್ಟಿಷ್ಟಾದರೂ ತೋರಿಬರಬೇಕೆಂದು ಡಿವಿಜಿಯವರ ಯೋಚನೆಯಾಗಿತ್ತು.

ಕಾಳಿದಾಸನು ರಚಿಸಿದ ಸನ್ನಿವೇಶಗಳೂ ಅಲ್ಲಿ ವ್ಯಕ್ತಪಟ್ಟ ಭಾವಗಳನ್ನು ರಾಗವಿನ್ಯಾಸಕ್ಕೆ ಅಳವಡಿಸಿಕೊಂಡರೆ ಅದರಿಂದ ಧ್ಯಾನ ಮತ್ತಷ್ಟು ರುಚಿಸೀತೆಂದು ಡಿವಿಜಿಯವರ ನಂಬಿಕೆಯಾಗಿತ್ತು. ಕವಿತ್ವದ ರುಚಿ ಸಂಗೀತದ ಸಾಹಚರ್ಯದಿಂದ ದ್ವಿಗುಣಿತವಾಗುತ್ತದೆ ಎಂದು ವಾಲ್ಮೀಕಿ, ಕಾಳಿದಾಸರು ಸಾರಿದ್ದಾರೆ. 'ಕಾವ್ಯಮೇತದಗಾಯತಾಮ್' ಎಂದು ರಾಮಾಯಣದಲ್ಲಿಯೇ ಇದೆ. ಶಾಕುಂತಲವಾದರೋ ನಾಟಕ "ನೋಟಕ್ಕಾಗಿ" ಕಣ್ಣಿನ ಅನುಭವಕ್ಕಾಗಿ–ಹುಟ್ಟಿದ ಪ್ರಬಂಧ. ಆದರೆ ಕಣ್ಣಿಗೆ ಕಿವಿಯ ಸಹಾಯವಿಲ್ಲದೆ ಆಗದು. ಶಾಕುಂತಲದ ಪ್ರಸ್ತಾವನೆಯಲ್ಲಿ ಸೂತ್ರಧಾರನು ನಟಿಗೆ ತನ್ನ ಉದ್ದೇಶವನ್ನು ಸೂಚಿಸಿ ಮೊದಲು ಹಾಡಿನಿಂದ ಸಭಿಕರನ್ನೊಲಿಸಿಕೊಳ್ಳಬೇಕೆನ್ನುತ್ತಾನೆ. 'ಶ್ರುತಿಪ್ರಸಾಧನ'ದಿಂದ ಪ್ರೇಕ್ಷಕರ ಮನಃಪ್ರಚೋದನ, ಗಾನದಿಂದ ಅರಳಿ ಕಿವಿ ಮನಸ್ಸನ್ನು ಕೆರಳಿಸುತ್ತದೆ. ಹಾಗೆ ಕಾವೇರಿದ ಮನಸ್ಸು ಕಣ್ಣು ತೋರಿಸುವ ನಟನಾಭಿನಯಗಳನ್ನು ಚೆನ್ನಾಗಿ ಗ್ರಹಿಸಲು ಸಮರ್ಥವಾಗುತ್ತದೆ. ಹೀಗೆ ಸಂಗೀತವು ನಾಟಕಕ್ಕೆ ಅವಶ್ಯವಾದ ಪೂರ್ವಪೀಠಿಕೆ. ಈ ಕಾರಣದಿಂದಲೇ ಸಂಸ್ಕೃತ ನಾಟಕಕಾರರು ಸಾಮಾನ್ಯವಾಗಿ ಪ್ರಾರಂಭದಲ್ಲಿ ಋತುಸೌಭಾಗ್ಯವನ್ನೋ ಸನ್ನಿವೇಶ ಸ್ವಾರಸ್ಯವನ್ನೋ ಕುರಿತು ಗಾಯನ ಮಾಡಿಸುತ್ತಾರೆ. ಅದು ಸಭಾಂಗಣದಲ್ಲಿ ಕುತೂಹಲದ ವಾತಾವರಣವನ್ನು ತುಂಬಿ ಜನರ ಅಂತರಿಂದ್ರಿಯಗಳಿಗೆ ಒಂದು ಲವಲವಿಕೆಯನ್ನೂ ಮೊನಚನ್ನೂ ತಂದುಕೊಡುತ್ತದೆ. ಸಾಹಿತ್ಯಕ್ಕೆ ಸಂಗೀತದಿಂದ ಆಗಬಹುದಾದ ಉಪಕಾರ ಇಂಥಾದ್ದು. ಅದು ಅಂತರಂಗದ ಭಾವಗ್ರಹಣಶಕ್ತಿಯನ್ನು ಸಿದ್ಧಗೊಳಿಸುತ್ತದೆ. ಅದರ ಸಹಕಾರದಿಂದ ಕಾಳಿದಾಸನ ನವಿರಾದ ಆಶಯಗಳು ಸಾಮಾನ್ಯ ಜನಕ್ಕೆ ಹೆಚ್ಚು ಗ್ರಾಹ್ಯವಾದಾವೆಂಬ ಪ್ರತ್ಯಾಶೆಯಿಂದ ಆದವು ಈ ಗೀತಾನುವಾದಗಳು.

ಶಾಕುಂತಲದ ಕಥೆಯನ್ನು ತಿಳಿದುಕೊಂಡಿರುವುದು ಈ ಸಂಗೀತ ವ್ಯಾಖ್ಯಾನದ ವಾಚಕರು ಮಾಡಿಕೊಂಡಿರಬೇಕಾದ ಮೊದಲನೆಯ ಸಿದ್ಧತೆ. ಕಥಾ ಸಂದರ್ಭವನ್ನರಿಯದವರಿಗೆ ಈ ಹಾಡುಗಳ ಭಾವ ದೊರೆಯುವುದು ಅಷ್ಟು ಸುಲಭವಲ್ಲ. ಸಂಸ್ಕೃತ ಮೂಲವನ್ನೋದದವರು ಬಸವಪ್ಪಶಾಸ್ತ್ರಿಗಳ ಕರ್ನಾಟಕ ಶಾಕುಂತಲವನ್ನಾದರೂ ಓದಿರುವುದಾವಶ್ಯಕ. ಬಸವಪ್ಪಶಾಸ್ತ್ರಿಗಳವರ ಅನುವಾದವು ಪ್ರಮಾಣವತ್ತಾಗಿರುವುದು ಮಾತ್ರವಲ್ಲದೆ ಕನ್ನಡ ಕವಿತೆಗೊಪ್ಪುವ ಲಾಲಿತ್ಯದಿಂದ ತುಂಬಿದೆ. ಈ ಭಾಷಾಂತರ ಕೃತಿಯನ್ನು ಮೂಲದೊಡನೆ ಹೋಲಿಸಿ ನೋಡಿದವರಿಗೆ ಬಸವಪ್ಪಶಾಸ್ತ್ರಿಗಳು ಎಂಥ ಪ್ರಾಮಾಣಿಕರು, ಹೇಗೆ ಚಾಚೂ ತಪ್ಪದಂತೆ ಕಾಳಿದಾಸನ ಸ್ವಾರಸ್ಯವನ್ನು ಕನ್ನಡಕ್ಕೆ ತಂದಿದ್ದಾರೆ ಮತ್ತು ಎಂಥ ಚತುರತೆಯಿಂದ ಪದಯೋಜನೆ ಮಾಡಿದ್ದಾರೆ ಎಂಬುದು ಕಾಣಬಹುದು. ದಿವಾನ್ ರಂಗಾಚಾರ್ಯರು ಶ್ರೀಮಾನ್ ಬಸವಪ್ಪಶಾಸ್ತ್ರಿಗಳನ್ನು ಕರ್ನಾಟಕ ಕಾಳಿದಾಸನೆಂದು ಕೊಂಡಾಡಿದ್ದನ್ನು ಅಂಥವರು ಅನುಮೋದಿಸದೆ ಇರರು.

ಡಿವಿಜಿಯವರ ಗೀತೆಗಳ ಮೂಲ ಸಂಸ್ಕೃತ ಪದ್ಯಗಳಿಗೆ ಸಮವಾಗಿ ಬಸವಪ್ಪಶಾಸ್ತ್ರಿಗಳವರು ರಚಿಸಿರುವ ಕನ್ನಡ ಪದ್ಯಗಳು ಕಣ್ಣೆದುರಿಗಿದ್ದರೆ ವಾಚಕರಿಗೆ ಅದು ದೊಡ್ಡ ಸೌಕರ್ಯವಾದೀತೆಂದು ನಾನು ಭಾವಿಸಿ, ಆ ಪದ್ಯಗಳನ್ನು ಕಡ ತೆಗೆದುಕೊಳ್ಳಲು ಅಪ್ಪಣೆಗಾಗಿ ಬಸವಪ್ಪಶಾಸ್ತ್ರಿಗಳವರ ಪುತ್ರರು. ವಿದ್ವಾನ್ ಶ್ರೀ ಎಂ.ಮಹಾದೇವಶಾಸ್ತ್ರಿಗಳನ್ನು ಬೇಡಲಾಗಿ ಆ ಮಿತ್ರರು ದಯಮಾಡಿ ಕೂಡಲೆ ಒಪ್ಪಿಗೆ ಕೊಟ್ಟರು. ಅವರ ದೊಡ್ಡ ಮನಸ್ಸಿಗಾಗಿ ಶ್ರೀ ಮಹಾದೇವಶಾಸ್ತ್ರಿಗಳವರಿಗೆ ನನ್ನ ಅಭಿನಂದನೆಗಳೊಡನೆ ಸಹಸ್ರ ವಂದನೆಗಳನ್ನು ಸಮರ್ಪಿಸಿದ್ದಾರೆ. ಡಿವಿಜಿಯವರು ಹರಿಣಲೀಲೆ ಸರಳಕೋಮಲೆ ಶಕುಂತಲೆಯ ರೂಪಭಾವಗಳು ನಮ್ಮ ಮನೋನಯನದ ಮುಂದೆ ಮೈಯ್ದೋರುವಂತೆ ರೇಖಾಚಿತ್ರವನ್ನಳವಡಿಸಿಕೊಟ್ಟವರು. ನನ್ನ ಮಿತ್ರರು ಪ್ರತಿಭಾವಂತ ಕಲಾನಿಪುಣರು ಶ್ರೀಮಾನ್ ಮನೀಷಿದೇವ್ ಅವರು ಈಚೆಗೆ ಏಪ್ರಿಲ್ ೧೯೬೦ರಲ್ಲಿ ಮದ್ರಾಸಿನಲ್ಲಿ ಮಾಡಿಸಿದ್ದ ಚಿತ್ರಕಲಾ ಪ್ರದರ್ಶನದಿಂದ ಅವರ ಕೀರ್ತಿ ವಿಸ್ತರಿಸಿದೆ. ಅವರು ಮಾಡಿರುವ ಉಪಕಾರಕ್ಕಾಗಿ ಮನಸ್ಸಿನಿಂದ ಧನ್ಯವಾದಗಳನ್ನರ್ಪಿಸುತ್ತೇನೆ. ಕಾಳಿದಾಸನ ಪ್ರತಿ ಕೃತಿಯೊಂದಿದ್ದರೆ ಚೆನ್ನವೆಂದು ಬಹಳ ಹುಡುಕಿದೆ, ದೊರೆಯದಾಯಿತು. ನಮ್ಮ ಕಾವ್ಯೇತಿಹಾಸಗಳು ಪ್ರತಿಭಾಶಾಲಿಗಳಾದ ಚಿತ್ರಕುಶಲರ ಅನುಗ್ರಹದಿಂದ ಕಾದುಕೊಂಡಿವೆ.

(ಚಕ್ರವಾಕದಂಪತಿ ಚಿತ್ರವನ್ನು ಬರೆದವರು ಮದರಾಸಿನಲ್ಲಿರುವ ಶ್ರೀ ಎಂ.ಕೃಷ್ಣನ್ ಅವರು. ಇಲ್ಲಿ ಅವರ ಚಿತ್ರವು ಗೀತಭಾವವನ್ನು ಸ್ಫುಟಗೊಳಿಸುತ್ತದೆ.)

ಲೇಖಕನೂ ಚಿತ್ರಕಾರನೂ ಎಂಥ ಪ್ರತಿಭಾವಂತರೇ ಆಗಿರಲಿ, ಎಂಥ ಪ್ರವೀಣರೇ, ಎಂಥ ಜಾಗರೂಕರೇ ಆಗಿರಲಿ, ಕಲಾಕೃತಿ ಸಾರ್ಥಕವಾಗಬೇಕಾದರೆ ಕರ್ತೃವಿನ ಪ್ರತಿಭೆ ಸಾಮರ್ಥ್ಯಗಳ ಜೊತೆಗೆ ವಾಚಕ ಪ್ರೇಕ್ಷಕರು ತಂದು ಜೋಡಿಸಬೇಕಾದ ಗುಣಶಕ್ತಿಗಳು ಒಂದಷ್ಟು ಇರುತ್ತವೆ. ಅಪ್ರತ್ಯಕ್ಷದ ಊಹನ, ಸೂಕ್ಷ್ಮಾಂಶಪರಿಗ್ರಹಣ, ಸಂದರ್ಭ ಪರಿಸರದ ವಿಸ್ತರಣ ಇವು ವಾಚಕನ ಅಂತಃಶಕ್ತಿಯಿಂದ ಆಗಬೇಕಾದ ಸಹಕಾರ. ಪುಸ್ತಕವನ್ನೋದಬೇಕಾದರೆ ಬರಹ, ಕಣ್ಣು ಇವೆರಡು

ಮಾತ್ರ ಇದ್ದರೆ ಸಾಲದು, ಅಕ್ಷರಜ್ಞಾನವೂ ಬೇಕಲ್ಲವೆ? ಅಕ್ಷರಜ್ಞಾನದಂಥಾದ್ದು ಕಾವ್ಯಾಭ್ಯಾಸಿಯಲ್ಲಿರಬೇಕಾದ ಒಳಗಣ ಸಂಸ್ಕಾರ, ನಿರ್ಮಾಣಶಕ್ತಿ ಸಾರ್ಥಕವಾಗುವುದು ಅದಕ್ಕೆ ಗ್ರಾಹಕಶಕ್ತಿ ಒಡಗೂಡಿಬರುತ್ತದೆ.

ಬೇಟೆಗೆಂದು ಕಾಡಿನಲ್ಲಿ ಸುತ್ತಾಡುತ್ತಿದ್ದ ರಾಜ ದುಷ್ಯಂತನು ಒಂದು ಜಿಂಕೆಯನ್ನು ಹಿಂಬಾಲಿಸುತ್ತ ಕಣ್ವರ್ಷಿಯ ತಪೋವನಕ್ಕೆ ಬರಲು, ಅಲ್ಲಿ ಶಕುಂತಲೆ ಗಿಡಗಳಿಗೆ ನೀರೆರೆಯುತ್ತಿರುವುದು ಕಾಣಿಸುತ್ತದೆ. ಆ ಸೌಂದರ್ಯ ಅವನನ್ನು ಮೋಹಗೊಳಿಸುತ್ತದೆ. ಆಕೆ ಯಾರಿರಬಹುದು? ತನಗೆ ತಕ್ಕವಳೆ? ಎಂದು ಮೊದಲಾಗಿ ಚಿಂತಿಸುತ್ತಿರುತ್ತಾನೆ. ಆಗ ಒಂದು ದುಂಬಿ ಆಕೆಯ ಮುಖವೂ ಒಂದು ಪುಷ್ಪವಿರಬಹುದೆಂದು ಭ್ರಮಿಸಿ ಅದರ ಮೇಲೆ ಇಳಿಯುತ್ತದೆ. ಆಕೆ ಅದರ ಕಾಟವನ್ನು ತಪ್ಪಿಸಿಕೊಳ್ಳುವುದಕ್ಕಾಗಿ ಮುಖವನ್ನು ಮೈಯನ್ನು ಒದರಾಡುತ್ತಾಳೆ. ಅದು ದುಷ್ಯಂತನ ಕಣ್ಣಿಗೆ ರಮ್ಯವಾಗಿ ಕಾಣುತ್ತದೆ. ಆಗ ಅವನು ದುಂಬಿಯ ಯೋಗವನ್ನು ನೋಡಿ ಉತ್ತರಿಸುತ್ತಾನೆ.

**ದುಷ್ಯಂತ:**

"ಚಲಾಪಾಂಗಾ ದೃಷ್ಟಿಂ ಸ್ಪೃಶಸಿ ಬಹುಶೋ ವೇಪಥುಮತೀಂ ।
ರಹಸ್ಯಾಖ್ಯಾಯೀವ ಸ್ವನಸಿ ಮೃದು ಕರ್ಣಾನ್ತಿಕಚರಃ ।
ಕರಾ ವ್ಯಾಧುನ್ವತ್ಯಾಃ ಪಿಬಸಿ ರತಿಸರ್ವಮಧರಂ ।
ವರ್ಯ ತತ್ತ್ವಾನ್ವೇಷಾನ್ಮಧುಕರಹತಾಸ್ತ್ವಂ ಖಲು ಕೃತೀ ॥

ನಡುಕಂಬೆತ್ತಿರ್ಪಳಂ ಸೋಂಕುವೆಯಡಿಗಡಿಗಂ ಚೆಲ್ವವೆತ್ತೋರೆನೋಟ ।
ಕ್ಕೆಡೆಯಾಗೇ ಕಾಂತಮಂ ಪೇಳ್ವವೊಲೆ ಜಿನುಗುತಿರ್ದಪ್ಪೆ ಕರ್ಣಾಂತದೊಳ್ ಕೈ ॥
ಗೊಡಹುತ್ತಿರ್ಪಬ್ಜಪತ್ರಾಕ್ಷಿಯ ನವರತಿ ಸರ್ವಸ್ವ ಬಿಂಬೋಷ್ಠಮಂಮು ।
ದ್ದಿಡುವೈ ಕೋಲಂಬ ನೀನೇ ಕೃತಿ ನಿಜವರಸುತ್ತಾವಣಂ ಕೆಟ್ಟೆವಲ್ತೇ ॥
೫. ಧನು ನೀನಲೊ ಭೃಂಗಾ(ಪು.ಸಂ.೪೭)
ರಾಗ: ಕಾನಡಾ
ಧನ್ಯ ನೀನೆಲೊ ಭೃಂಗಾ–ರಸೋತ್ತುಂಗ ।
ಖಿನ್ನರು ನಾವು ತತ್ತ್ವಾನ್ವೇಷನಿರತರು ॥ಪ॥
ಬಳುಕು ಮೈ ಚೆಲುವೆಯನ್–ಅಲೆವ ಕಣ್ಮೊನೆಯಳ ।
ಬಲುಸೋಕಿ ಕಿವಿಯೊಳ್ ಗುಟ್ಟುಲಿವಂತೆ ಸೊನಿಪೆ ।
ತಡೆಯಲ್ಕೆಂದಾಕೆ ಕೈಕೊಡಹೆ ಮೊಗವನ್ನೇರಿ ।
ಕುಡಿವೆ ನೀ ನವಳಧರದೆ ರತಿಸಾರವ ॥"[೫೭]

**'ಗೆಳೆಯ ನೀನು, ಹಳೆಯ ನಾನು'–ಶ್ರೀರಂಗರು**

ಶ್ರೀರಂಗರು ತಮ್ಮ ನಾಟಕದ ಮುನ್ನುಡಿಯಲ್ಲಿ ಹೇಳಿರುವಂತೆ. 'ಗೆಳೆಯ ನೀನು, ಹಳೆಯ ನಾನು' ನಾಟಕದ ಶಕುಂತಲೆ ಅದೇ ಕಾಣಿಸಿಕೊಳ್ಳುವುದರಲ್ಲಿದ್ದಳು. ಆದರೆ ಅಂದಿನ ಯುವತಿಯರಿಗೆ

ಆಕೆಯನ್ನು ತಮ್ಮಲ್ಲಿ ಗುರುತಿಸಿಕೊಳ್ಳುವದಷ್ಟು ಚುರುಕುತನ ಇದ್ದಿರಲಿಲ್ಲ. ಸಾವಿರಾರು ವರ್ಷಗಳ ಮೂಢ ಸಂಪ್ರದಾಯದಿಂದ ನಮ್ಮ ಸಮಾಜವು ಸ್ತ್ರೀಯರ ಸ್ವತಂತ್ರ ವ್ಯಕ್ತಿತ್ವವನ್ನು ಮನ್ನಿಸಿರಲಿಲ್ಲ.

'ಗೆಳೆಯ ನೀನು, ಹಳೆಯ ನಾನು' ನಾಟಕಕ್ಕೆ ಕಾಳಿದಾಸನ ಶಾಕುಂತಲ ನಾಟಕದ ಪ್ರಭಾವ ಹಿನ್ನೆಲೆಯಾದುದಕ್ಕೆ ಸಂಸ್ಕೃತ ಸಾಹಿತ್ಯ ಮತ್ತು ನಾಟಕ ಇವುಗಳ ನನ್ನ ಅಭ್ಯಾಸ ಮತ್ತು ಮೆಚ್ಚುಗೆಯೇ ಕಾರಣ. 'ಹೆಣ್ಣಿನ ಸ್ಥಾನ ಗಂಡಿನ ಮನೆಯಲ್ಲಿಯೆ' ಎಂಬ ಸಂಸ್ಕೃತಿಯು ರೂಢವಾದ ಕಾಲದಲ್ಲಿ ಗಂಡನೂ ದುಷ್ಯಂತನಂತೆ ಹೊಣೆಗೇಡಿಯಾದಲ್ಲಿ ಹೆಣ್ಣು ಪ್ರತಿಭಟಿಸಬೇಕು ಎಂದಿದ್ದಾನೆ ಕಾಳಿದಾಸ(ಅಲ್ಲಿಯ ೫ನೆಯ ಅಂಕವನ್ನು ನೋಡಿರಿ). ಇದಲ್ಲದೆ ಗಂಡು ಹೆಣ್ಣಿನ ಸಂಬಂಧದ ಮುಖ್ಯ ಉದ್ದೇಶ ಗಂಡನ ಯಜಮಾನಿಕೆಯಲ್ಲಿ ಸೃಷ್ಟಿಯು ಸತತವಾಗಿ ಬೆಳೆಯುವುದು ಎಂದೂ ಸೂಚಿಸಿದ್ದಾರೆ. ನನ್ನ ಶಕುಂತಲೆ ತನ್ನ ಗಂಡನಿಗೂ ಪ್ರೇಕ್ಷಕರಿಗೂ ವಿವರಿಸಿರುವುದನ್ನು ನಾವು ಗ್ರಹಿಸಬಹುದು.

ಸಂಪ್ರದಾಯದಲ್ಲಿ ಪಾತಿವ್ರತ್ಯದ ಕಲ್ಪನೆಯು ಸ್ತ್ರೀಯಳ ಪರಾವಲಂಬಿತ್ವವನ್ನೂ ದಾಸ್ಯವನ್ನೂ ಸ್ಥಿರಪಡಿಸುವ ಸಂಕೇತವಾಗಿತ್ತಲ್ಲದೆ ಶೀಲದ ಪ್ರಶ್ನೆಗೆ ಸಂಬಂಧಿಸಿರಲಿಲ್ಲ. ಹಾಗಿದ್ದಲ್ಲಿ ಏಕ ಪತ್ನಿವ್ರತವನ್ನು ಪ್ರತಿಯೊಬ್ಬ ಗಂಡನೂ ಪಾಲಿಸಬೇಕಿತ್ತು. ತಾನು ಆರಿಸಿಕೊಂಡ ಗಂಡನನ್ನುಳಿದು ಇನ್ನೊಬ್ಬರನ್ನು ನೋಡತಕ್ಕದ್ದಲ್ಲ ಎನ್ನುವುದು ಹೆಂಗಸನ್ನು ಕಾರಾಗೃಹದಲ್ಲಿರಿಸಿದಂತೆ. ಕಾರಾಗೃಹದಲ್ಲಿದ್ದಾಗ ಯಾವಾಗಲೂ ಕಿಟಕಿಯಿಂದ ಹೊರಗೆ ನೋಡಬೇಕೆಂಬ ಹಂಬಲವೇ ಮನಸ್ಸನ್ನು ಒತ್ತಾಯಿಸುವುದು. ಅದರ ಬದಲು ಸ್ವಚ್ಛಂದದ ವೃತ್ತಿಯಲ್ಲಿದ್ದಾಗ ಹೊರಗಿನದೆಲ್ಲವೂ ಬೇಕೆನಿಸದೆ ಕೆಲವನ್ನೇ ಮನಸ್ಸು ಆಯ್ದುಕೊಳ್ಳುವುದು. ೧೯೫೪ರಲ್ಲಿ ಬರೆದ ಈ ನಾಟಕವನ್ನು ಬಾಗಿಲುಕೋಟೆಯ ವಾಸುದೇವ ವಿನೋದಿನ ಸಭೆಯವರು ಅನೇಕ ಸಲ ಬೇರೆ ಬೇರೆ ನಗರದಲ್ಲಿ ಯಶಸ್ವಿಯಾಗಿ ಆಡಿದರು.

'ಆಧುನಿಕ ನಾಟಕ ಸಾಹಿತ್ಯ ಬೆಳೆಯುತ್ತಿರುವ ಈ ಕಾಲದಲ್ಲಿ ಇದು ಹೀಗೆ ಇರತಕ್ಕದ್ದು ಎಂದು ಹೇಳಲು ಶಕ್ಯವಿಲ್ಲ. ಹೇಳುವುದು ಅಸಮಂಜಸವಾದ ಅನೇಕ ದೃಷ್ಟಾಂತಗಳನ್ನು ಪರೀಕ್ಷಿಸಿ ಹೋಲಿಸಿ ನೋಡಿದ ಮೇಲೆಯೇ ನಿಯಮಗಳು ಇಲ್ಲವೇ ಶಾಸ್ತ್ರರಚನೆ ಶಕ್ಯವಾಗುವುದು. ಆಧುನಿಕ ನಾಟಕಕಾರನು ಆಧುನಿಕ ಸಮಕಾಲೀನ ಅನುಭವ ಮತ್ತು ಸಾಮಗ್ರಿಗಳನ್ನು ಬಳಸಿಕೊಳ್ಳುವುದನ್ನು ಅವಲಂಬಿಸಿದೆ.

ನಿಜವಾದ ಕಾವ್ಯ, ನಾಟಕ ದೇಶ ಕಾಲಾತೀತವಾದದ್ದು. ಅದರಲ್ಲಿರುವ ಸಾರವತ್ತಾದ ಹೇಳಿಕೆಗಳು, ಭಾವಗಳು ಇಂದಿನವರಾದ ನಮಗೂ ಮುಂದಿನ ಪೀಳಿಗೆಗೂ ಸಹ ಆಸ್ವಾದ್ಯವಾಗಿಯೇ ಇರುತ್ತವೆ ಕಾಳಿದಾಸನ ಕೃತಿಗಳನ್ನು ಶ್ರದ್ಧಾಭಕ್ತಿಗಳಿಂದ ವ್ಯಾಸಂಗ ಮಾಡುತ್ತಿರುವವರು ದೇಶ ಭೇದವಿಲ್ಲದೆ ಇಡೀ ಪ್ರಪಂಚದಲ್ಲಿ ಹೆಚ್ಚುತ್ತಿರುವುದು ಹಾಗೂ ಪ್ರಪಂಚದ ಮುಖ್ಯ ಭಾಷೆಗಳಿಗಿಲ್ಲಿ ಭಾಷಾಂತರವಾಗಿರುವುದೂ ಭಾರತೀಯರಾದ ನಮ್ಮ ಹೆಮ್ಮೆ. ಭಾರತದ ನಾನಾ ಭಾಷೆಗಳಿಗೆ

ಭಾಷಾಂತರಗೊಂಡಿರುವುದನ್ನು ಸಹ ಗಮನಿಸಬಹುದು. ಕಾಳಿದಾಸನ ಶಾಕುಂತಲ ಕೃತಿಗೆ ಸಹೃದಯ ವಿದ್ವಾಂಸರ ಸಂಖ್ಯೆಯು ಹೆಚ್ಚುತ್ತಿರುವ ಕಾರಣ ಕಾಳಿದಾಸನ ಕೀರ್ತಿಶರೀರ ಕಾಂತಿಯು ಕ್ರಮವಾಗಿ ವೃದ್ಧಿ ಹೊಂದಿ ಹೆಚ್ಚು ಹೆಚ್ಚು ಆಹ್ಲಾದಕಾರವಾಗಿ ಪರಿಣಮಿಸುತ್ತಿದೆ. ಪಾಶ್ಚಾತ್ಯರ ಸಾಹಿತ್ಯ ವಿಮರ್ಶಾ ನಿಯಮಗಳು ಭಾರತೀಯ ಲಾಕ್ಷಣಿಕರ ವಿಮರ್ಶಾ ನಿಯಮಗಳಿಗಿಂತ ಬೇರೆಯಾಗಿದ್ದು ಕಾಳಿದಾಸನ ಕೃತಿಗಳು ಉಭಯತ್ತರ ಮೆಚ್ಚಿಕೆಗೂ ಪ್ರಶಂಸೆಗೂ ಪಾತ್ರವಾಗಿ ಅವು ಪ್ರಪಂಚದ ಸಮಸ್ತ ಜನಾಂಗಗಳ ಪ್ರೀತಿ ಗೌರವಗಳಿಗೆ ಅರ್ಹವಾಗಿವೆಯೆಂಬ ಭಾವನೆಯುಂಟಾಗಿರುವುದು ಗಮನಾರ್ಹ. "ಸತ್ಯಂ ಶಿವಂಸುಂದರಂ' ಎಂಬ ಸರ್ವಜನ ಹೃದಯಾರಂಭವಾದ ಮೂರು ಅಮೋಘ ತತ್ವಗಳನ್ನು ರಮ್ಯವಾಗಿಯೂ ಕಲಾಮಯವಾಗಿಯೂ ಇರುವಂತೆ ಹದವರಿತು ಸಾಮರಸ್ಯದಿಂದ ಅಳವಡಿಸಿ ಮೂಲ ಕಥಾಸಂಗತಿಗಳ ಮನೋಜ್ಞವಾದ ಮಾರ್ಪಾಟುಗಳಿಂದಲೂ ಮಹಾಪ್ರತಿಭಾಸಂಪನ್ನವಾದ ಕಥಾ ಸಂವಿಧಾನ ಕೌಶಲ್ಯದಿಂದಲೂ ಚಿತ್ತಾಕರ್ಷಕವಾದ ಪಾತ್ರರಚನಾಕೌಶಲ್ಯದಿಂದಲೂ ಕಾಳಿದಾಸನು ತನ್ನ ಕೃತಿಗಳನ್ನು ರಚಿಸಿರುವುದೇ, ದೇಶ ಭೇದ, ಕಾಲ ಭೇದ ಜನಾಂಗ ಭೇದಗಳಿಲ್ಲದೆ ಅವು ಇಡೀ ಪ್ರಪಂಚದ ಮೇಧಾವಿಗಳ ಮೆಚ್ಚಿಕೆಗೂ ಶ್ಲಾಘನೆಗೂ ಪಾತ್ರವಾಗಿರುವುದಕ್ಕೆ ಮುಖ್ಯಕಾರಣ. ಪ್ರಪಂಚದ ಶ್ರೇಷ್ಠ ಸಾಹಿತ್ಯದ ರಚನೆಯೇ ಹಾಗಿದೆ.

**ಕಡೆಂಗೋಡ್ಲು ಶಂಕರಭಟ್ಟರ – ಅಭಿನವ ಶಾಕುಂತಲ ನಾಟಕ**

ನಾಟ್ಯಕಲೋಪಾಸಕ ಸಂಘದ ಅಧ್ಯಕ್ಷ ಕಾರ್ಯದರ್ಶಿಯೇ ಮೊದಲಾದವರು, ಹೊಸ ರೀತಿಯ ನಾಟಕಕ್ಕಾಗಿ ಸಿದ್ಧತೆ ಮಾಡುತ್ತಾರೆ. ಅದು ಬರೆಯದ ನಾಟಕ, ಕಥಾಸರಣಿ ಮಾತ್ರ ತಿಳಿದಿರಬೇಕು. ಉಳಿದಂತೆ ಎಲ್ಲವೂ ಸಹಜವಾದ ಸಂಭಾಷಣೆಯಾಗಬೇಕು. ನಾಟಕ ನಡೆಯುವುದು ವನಿತಾನಿಕೇತನವೊಂದರ ಪರಿಸರದಲ್ಲಿ ಆನಿಕೇತನದ ಸೂಪರಿಂಟೆಂಡೆಂಟರೇ ಕಣ್ವರು. ನಾಟಕದ ಅಭ್ಯಾಸ ಮಾಡತೊಡಗಿದರು. ದುಷ್ಯಂತ ಪಾತ್ರಧಾರಿ, ಶಕುಂತಲೆಯ ಪಾತ್ರಧಾರಿ ಬಂದಿರುವುದಿಲ್ಲ. ಆಗ ಆ ಇಬ್ಬರು ಮದುವೆಯಾದರೆಂಬ ಸುದ್ದಿ ಬರುತ್ತದೆ. ಅವರಿಲ್ಲದೇ ನಾಟಕ ಕೊನೆಗೊಳ್ಳುತ್ತದೆ. ಕಡೆಂಗೋಡ್ಲು ಅವರ ಪ್ರಯೋಗಶೀಲ ದೃಷ್ಟಿಯನ್ನು ತೋರಿಸುವ ನಾಟಕವಿದು.

ಈ ನಾಟಕದಲ್ಲಿ ಬರುವ ಪಾತ್ರಧಾರಿಗಳೆಂದರೆ ಅಧ್ಯಕ್ಷರು, ಕಾರ್ಯದರ್ಶಿ, ಅಪರಿಚಿತ, ತರುಣಿ, ಅನಸೂಯೆ, ಪ್ರಿಯಂವದೆ, ಗೌತಮಿದೇವಿ, ಸಮಾಜದಲ್ಲಿನ ಚಿತ್ರಣವನ್ನು ಬಿಂಬಿಸುತ್ತದೆ.

ಮುಖ್ಯವಾಗಿ ನಾಟಕದಲ್ಲಿ ಬರುವ ಸನ್ನಿವೇಶಗಳನ್ನು ಈ ಕೆಳಗಿನಂತೆ ಗಮನಿಸಬಹುದು.

**ಅಧ್ಯಕ್ಷ:** "ಬಹಳ ಚೆನ್ನಾಗಿದ್ದಾನೆ. ಶಕುಂತಲೆಯ ಸ್ವರೂಪವನ್ನು ಕೇಳಬೇಕೆಂದಿಲ್ಲ... ಊಹಿಸಬಹುದು.

**ಕಾರ್ಯದರ್ಶಿ:** ಶಕುಂತಲೆಯೋ ಇಪ್ಪತ್ತನೆಯ ಶತಮಾನದ ಮೋಜುಗಾರ್ತಿಯವಳು. ಸ್ವಚ್ಛಂದ ಪ್ರಣಯಾರಾಧನೆಗೆ ಬೇಕಾದಷ್ಟು ಆಂಗ್ಲ ಸಾಹಿತ್ಯವನ್ನೋದಿದ್ದಾಳೆ. ಸರಸವಾಗಿ ನಗುವುದಕ್ಕೆ ಅಭ್ಯಾಸಿಸಿದ್ದಾಳೆ.

ಸ್ವರದ ಏರಿಳಿತಗಳನ್ನು ಡಿಕ್ಷನರಿಯಲ್ಲಿರುವಂತೆಯೇ ಏರಿಸುತ್ತಾಳೆ, ಇಳಿಸುತ್ತಾಳೆ. ನಯವಾಗಿ ಮಾತಾಡಬಲ್ಲಳು, ಅವಶ್ಯವಿರುವಷ್ಟೇ ಭೂಭಾಗದಲ್ಲಿ ದೃಷ್ಟಿಪ್ರಸಾರ ಮಾಡಬಲ್ಲಳು. ಸಂಘಜೀವನ, ಕ್ರೀಡಾವಿನೋದ, ಆಹಾರ-ವಿಹಾರ ಸರಸ ಸಮಾರಂಭಗಳಲ್ಲಿ ಆತ್ಯಾಸಕ್ತಿ...(ಪು.ಸಂ.೫೮).

**ಅಧ್ಯಕ್ಷ:** ಕಣ್ವಾಶ್ರಮವೊ?

**ಕಾರ್ಯದರ್ಶಿ:** ಋಷಿ ನಮ್ಮ ನಾಟಕದಲ್ಲಿಲ್ಲ. ಅದರ ಬದಲಾಗಿ ಒಂದು ವನಿತಾನಿಕೇತನದ ಸೂಪರಿಂಟೆಂಡರನ್ನು ಕಾಣುತ್ತೀರೆ...ಅನಸೂಯಾ ಪ್ರಿಯಂವದೆಯರೂ ಶಕುಂತಲೆಯರೂ ಇಲ್ಲಿಯೇ ಒಡನಾಡಿ ವಾಸಿಸುವವರು. ಟೆನ್ನಿಸ್ ಆಟದ ಬಯಲಲ್ಲಿ ಪ್ರಥಮ ಸಂದರ್ಶನ ಮುಂದಿನ ಸಂಗತಿಯನ್ನು ಅಭಿನಯದಲ್ಲಿ ನೋಡುತ್ತೀರಿ.

**ಅಧ್ಯಕ್ಷ:** ರಮ್ಯವಯ್ಯಾ ರಮ್ಯ!

**ಕಾರ್ಯದರ್ಶಿ:** ಈಗ ವನಿತಾಲಯದ ಹೂದೋಟದ ದೃಶ್ಯ. ಹೃದಯಾವೇಶವನ್ನು ಹಾವಭಾವಗಳಲ್ಲಿ ಪ್ರದರ್ಶಿಸದೆ, ಉದ್ದೇಶ ಸಿದ್ಧಿಯ ಸಂಕಲ್ಪ ಮಾಡಿದ ಮುಖಭಾವವುಳ್ಳ ದುಷ್ಯಂತನ ಪ್ರವೇಶವಾಗುವುದು. ಈಗ ಪರದೆ ಮೇಲೇರುವುದು... ಎಂದು ಭಾವಿಸಿಕೊಳ್ಳಿ. ದುಷ್ಯಂತ! ದುಷ್ಯಂತ! ಬಾ! ಬಾ!!"[೫೯]

ಈ ನಾಟಕದಲ್ಲಿ ಲೇಖಕರು ಆಧುನಿಕ ಸ್ತ್ರೀ ಪುರುಷರನ್ನು ಕಾಳಿದಾಸನ ಶಾಕುಂತಲೆ, ದುಷ್ಯಂತನಿಗೆ ಇರುವ ಭಾವನೆಯು ಪ್ರಸ್ತುತದಲ್ಲಿ ಸಮಾಜದಲ್ಲಿದೆ ಹೇಗಿದೆ ಎಂಬುದನ್ನು ಮೂಲಕ ವ್ಯಕ್ತಪಡಿಸಿದ್ದಾರೆ.

**ಮಂ.ಗಂ.ರೇಣುಕ ಪ್ರಸನ್ನರ "ಶಾಕುಂತಲಾವಲೋಕನ"**

ಈ ಕೃತಿಯನ್ನು ಕಾಳಿದಾಸನ 'ಶಾಕುಂತಲ' ನಾಟಕದ ಬಗ್ಗೆ ಶ್ರಿಸಾಮಾನ್ಯನಿಂದ ಹಿಡಿದು ಸಾಹಿತ್ಯಾಭ್ಯಾಸಿಗಳವರೆಗೆ ಅರ್ಥವಾಗುವಂತೆ ರಚಿಸಿದ್ದಾರೆ. ಶ್ರೀ ಮ.ಗಂ.ರೇಣುಕ ಪ್ರಸನ್ನರು ಸರಳವಾಗಿ ಪರಿಚಯಿಸಿದ್ದಾರೆ. ಕಾಮ ಹೇಗೆ ಪರಿಶುದ್ಧ ಪ್ರೇಮವಾಗಿ ಪರಿಣಮಿಸುತ್ತದೆ ಎಂಬುದರ ನಿರೂಪಣೆಯೇ ಶಾಕುಂತಲ ನಾಟಕ. ಅತ್ಯಂತ ಸಹಜವಾಗಿ, ವಾಸ್ತವವಾಗಿ, ಮಾನವ ಮನೋಲೋಕದ ವ್ಯಾಪಾರವೊಂದರ ಚಿತ್ರಣದ ಸಾಫಲ್ಯವನ್ನು ಕುರಿತು ಈ ಕೃತಿಯಲ್ಲಿ ವಿವರಿಸಿದ್ದಾರೆ. ಇದು ಸಹೃದಯರ ಮೆಚ್ಚುಗೆಗೆ ಪಾತ್ರವಾಗಬಹುದು. ೧೯೬೭-೬೮ ಮತ್ತು ೧೯೭೧-೭೨ ತರಗತಿಯಲ್ಲಿ ಬೋಧನೆ ಮಾಡಿದ ಅನುಭವಗಳಿಂದ ಬರೆದ ಕೃತಿಯಾಗಿದೆ. ಲೇಖಕರು, ವಿದ್ಯಾರ್ಥಿಗಳಿಗೆ ಅರ್ಥವಾಗಲು ಶಾಪ, ಉಂಗುರ, ಪಾತ್ರಚಿತ್ರಣ ಮುಂತಾದವುಗಳನ್ನು ವಿಮರ್ಶಾತ್ಮಕವಾಗಿ ತಿಳಿಸಲು ಪ್ರಯತ್ನಿಸಿದ್ದಾರೆ. ಕೇವಲ ದ್ವಿತೀಯ ಭಾಷೆಯನ್ನಾಗಿ ಕನ್ನಡವನ್ನು ಓದುವ ವಿದ್ಯಾರ್ಥಿಗಳಿಗೆ ಸಾಮಾನ್ಯ ಓದುಗನಲ್ಲಿ ಮೂಲ ಸಂಸ್ಕೃತ ನಾಟಕವನ್ನು ವಿಮರ್ಶಾತ್ಮಕವಾಗಿ ನೋಡುವ ಆಸಕ್ತಿ ಕುತೂಹಲಗಳನ್ನು ಈ ಶಾಕುಂತಲಾವಲೋಕನವು ಕೆರಳಿಸಬಹುದು ಎಂಬ ಮಾತು ಲೇಖಕರ ಅಭಿಪ್ರಾಯವಾಗಿದೆ.

ಈ ಅವಲೋಕನದಲ್ಲಿ ಎಲ್ಲ ಕಡೆಯಲ್ಲೂ ಕಾಳಿದಾಸನೆಂದೇ ಪ್ರಸ್ತಾಪಿಸಿದ್ದರೂ ಎಲ್ಲೂ ಸಂಸ್ಕೃತ ನಾಟಕ 'ಅಭಿಜ್ಞಾನ ಶಾಕುಂತಲ'ದ ಶ್ಲೋಕಗಳನ್ನು ಬಳಸಿಕೊಂಡಿಲ್ಲ. ಶ್ರೀ ಬಸವಪ್ಪಶಾಸ್ತ್ರಿಗಳ 'ಕರ್ನಾಟಕ ಶಾಕುಂತಲ'ದ ಕನ್ನಡ ಮಾತುಗಳನ್ನು ಪದ್ಯಗಳನ್ನು ಬಳಸಿಕೊಂಡಿದ್ದಾರೆ. ಏಕೆಂದರೆ ಲೇಖಕರು ಹೇಳುವ ಪ್ರಕಾರ ಕಾಳಿದಾಸನ ಈ ನಾಟಕದ ಅನುವಾದಗಳಲ್ಲೆಲ್ಲಾ ಈ ಕನ್ನಡಾನುವಾದವೇ ಅತ್ಯಂತ ಉತ್ತಮವಾದುದೆಂದು ಮನ್ನಣೆ ಗಳಿಸಿರುವುದು. ಕನ್ನಡಾನುವಾದದ ಮಾತುಗಳು ವಿದ್ಯಾರ್ಥಿಗಳಿಗೆ ಅರ್ಥವಾಗುವಂತೆ ಇದೆ ಎಂದಿದ್ದಾರೆ.

ಪ್ರಾಚೀನ ಭಾರತದ ಕವಿಗಳಿಗೆ ರಾಮಾಯಣ ಮಹಾಭಾರತದಂತಹ ಕೃತಿಗಳು ಪ್ರೇರಣೆಯಾಗಿವೆ. ಕಾಳಿದಾಸ ಆಯ್ದುಕೊಂಡ ಭಾಗವೆಂದರೆ ಮಹಾಭಾರತದ ಶಕುಂತಲೋಪಾಖ್ಯಾನದ ಒಂದು ಸಣ್ಣಕತೆ. ಆ ಕಥೆಯನ್ನೇ ಸ್ವಯಂ ಆಸಕ್ತಿಯಿಂದ ಅನೇಕ ಹೊಸ ಹೊಸ ಅಂಶಗಳನ್ನು, ಕಲ್ಪನೆಗಳನ್ನು ಬಳಸಿಕೊಂಡು ತಮ್ಮ ಸೃಜನಶೀಲತೆಯಿಂದ ಅಭಿಜ್ಞಾನ ಶಾಕುಂತಲ ನಾಟಕವನ್ನು ಬರೆದಿದ್ದಾರೆ.

**ಕಾಳಿದಾಸನು ಮಾಡಿಕೊಂಡಿರುವ ಬದಲಾವಣೆಗಳು**

ಕವಿ ಅಥವಾ ನಾಟಕಕಾರನಿಗೆ ಯಾವುದೇ ಕಥಾವಸ್ತುವನ್ನಾದರೂ ಬದಲಾವಣೆ ಮಾಡಿಕೊಳ್ಳಲು ಸ್ವಾತಂತ್ರ್ಯವಿರುತ್ತದೆ. ಆದರೆ ಅದು ಸ್ವೇಚ್ಛೆಯಾಗಬಾರದು. ಔಚಿತ್ಯಪೂರ್ಣವಾಗಿರಬೇಕು. ಮೂಲಕತೆಯಲ್ಲದ ಸೊಗಸನ್ನು ಉಂಟುಮಾಡುವಂತಿರಬೇಕು. ಪರಿಣಾಮ ರಮಣೀಯವಾಗಿರಬೇಕು. ಈ ಹಿನ್ನೆಲೆಯಲ್ಲಿ ಕಾಳಿದಾಸನು ಮಾಡಿಕೊಂಡಿರುವ ಬದಲಾವಣೆಗಳೆಂದರೆ ಮಹಾಭಾರತದ ಅರಣ್ಯದಲ್ಲಿ ಕುರುಚಲುಗಿಡದಂತಿದ್ದ ಶಕುಂತಲೋಪಾಖ್ಯಾನದ ಕಥಾವಸ್ತುವನ್ನೇ ಆಯ್ದುಕೊಂಡಿದ್ದರೂ ತನ್ನ ಪ್ರತಿಭೆಯ ಲೇಪನದಿಂದ ಅದಕ್ಕೆ ಹೊಸ ಮೆರುಗು ನೀಡಿ ಹಳೆಯದರ ಗುರುತು ಸಿಕ್ಕದಂತೆ ಹೂಗಳಿಂದ ಕಂಗೊಳಿಸುವ ಸುಂದರ ಬಳ್ಳಿಯಾಗಿ ನವನಿರ್ಮಾಣ ಮಾಡಿದ್ದಾನೆ. ಕಲ್ಪನಾ ವಿಲಾಸಕ್ಕೆ, ಭಾವ ವೈಭವಕ್ಕೆ, ನೂತನ, ಸುಮನೋಹರ ಸನ್ನಿವೇಶಗಳನ್ನು ನಿರ್ಮಾಣ ಮಾಡಿ ಒಟ್ಟಿನಲ್ಲಿ ಸಹೃದಯರ ಮನಸ್ಸನ್ನು ಗೆದಿದ್ದಾನೆ.

* ಮೂಲದಲ್ಲಿ ಶಕುಂತಳೆಯೇ ನೇರವಾಗಿ ದುಷ್ಯಂತನನ್ನು ಸ್ವಾಗತಿಸಿದರೆ ಕಾಳಿದಾಸನು ಅನುಸೂಯೆ ಪ್ರಿಯಂವದೆಯರಿಗೊಪ್ಪಿಸಿದ್ದಾನೆ.

* ಮಹಾಭಾರತದ ಶಕುಂತಲೆ ಹೆಚ್ಚು ಒತ್ತಾಯವಿಲ್ಲದೆ ವಿವಾಹಕ್ಕೆ ಒಪ್ಪಿದರೆ, ಕಾಳಿದಾಸನು ಉತ್ತಮವಾಗಿ ರಮಣೀಯವಾಗಿ ಈ ಭಾಗವನ್ನು ವರ್ಣಿಸಿದ್ದಾನೆ. ಶಕುಂತಲೆಗೆ ಲಜ್ಜೆ, ಸಂಕೋಚ, ಭಯ ಪ್ರೇಮಗಳ ಜೀವಂತ ಚಿತ್ರಣ ಕಂಡುಬರುತ್ತದೆ.

* ದುಷ್ಯಂತನು ಕಾರಣವಿಲ್ಲದೆ ಪ್ರವೇಶ ಮಾಡದಂತೆ ಕಾಳಿದಾಸ ಚಿತ್ರಿಸಿದ್ದಾರೆ.

ಮೂಲ ಕತೆಯಲ್ಲಿ ದುಷ್ಯಂತನು ಆಶ್ರಮಕ್ಕೆ ಆಗಮಿಸಿದಾಗ ಕಣ್ವರು ಹಣ್ಣು ತರಲು ಹೋಗಿರುತ್ತಾರೆ. ಆದರೆ ವಿಚಿತ್ರವೆಂದರೆ ಆಶ್ರಮದ ಬಳಿಯಲ್ಲಿರುವ ಗಿಡದಿಂದ ಹಣ್ಣು ತರಲು

ಹೋಗಿರುವ ಕಣ್ವರು ಹಿಂದಿರುಗುವುದರೊಳಗಾಗಿ ಶಕುಂತಳೆ–ದುಷ್ಯಂತ ವಿವಾಹವಾಗುವುದಷ್ಟೇ ಅಲ್ಲ, ಶಕುಂತಳೆ ಗರ್ಭಿಣಿಯೂ ಆಗಿರುತ್ತಾಳೆ. ಇಂತಹ ಆಭಾಸಕ್ಕೆಡೆಗೊಡದಂತೆ ಕಾಳಿದಾಸನು ಈ ಸಂದರ್ಭವನ್ನು ಮಾರ್ಪಡಿಸಿರುವ ರೀತಿ ಅರ್ಥಪೂರ್ಣವಾಗಿದೆ. ಕಾಳಿದಾಸನ ಪ್ರಕಾರ ಕಣ್ವಋಷಿಯು ಶಕುಂತಳೆಯ ದೈವಶಮನಾರ್ಥವಾಗಿ ಸೋಮತೀರ್ಥಕ್ಕೆ ಹೋಗಿರುತ್ತಾನೆ. ಹಿಂದಿರುಗಲು ಕೆಲವು ತಿಂಗಳುಗಳ ಅವಧಿಯೇ ಬೇಕಾಗುತ್ತದೆ. ಸೋಮತೀರ್ಥವು ಕಣ್ವಾಶ್ರಮದಿಂದ ದೂರದಲ್ಲಿರುವುದರಿಂದ ಕಣ್ವರು ಹಿಂದಿರುಗಲು ಸಾಕಷ್ಟು ಕಾಲ ಹಿಡಿಯಬಹುದೆಂಬ ಊಹೆಗೆ ಅವಕಾಶವಿದ್ದು ಇಂತಹ ಅವಕಾಶವನ್ನು ಕಾಳಿದಾಸನು ಸದುಪಯೋಗಪಡಿಸಿಕೊಂಡಿದ್ದಾನೆ. ಕುಲಪತಿ ಕಣ್ವರ ಆಶ್ರಮದಲ್ಲಿಲ್ಲದ ಕಾರಣ ರಾಕ್ಷಸರ ಹಾವಳಿಯನ್ನು ಹತ್ತಿಕ್ಕಲು ಆಶ್ರಮವಾಸಿಗಳು ದುಷ್ಯಂತನಿಗೆ ಮೊರೆಯಿಡುವ ಮಾತುಗಳಲ್ಲಿ ಕಣ್ವರು ಆಶ್ರಮದ ಸಮಿಪದಲ್ಲಿಲ್ಲ ಮತ್ತು ಹಿಂದಿರುಗುವುದು ವಿಳಂಬವಾಗಬಹುದೆಂಬ ಸೂಚನೆಯಿದೆ.

ನಾಲ್ಕನೆಯ ಅಂಕದವರೆಗೂ ಕಣ್ವರ ಪ್ರವೇಶವೇ ಇಲ್ಲದಿರುವುದರಿಂದ ಈ ಅವಧಿಯಲ್ಲಿ ಸಾಕಷ್ಟು ದಿನಗಳನ್ನು ಕಣ್ವರು ಆಶ್ರಮದಿಂದ ದೂರದಲ್ಲಿ ಸೋಮತೀರ್ಥದಲ್ಲಿ ಕಳೆದರೆಂದರೂ ಅಸಹಜವೆನ್ನಿಸದು. ಶಕುಂತಳೆಯ ವಿವಾಹ ನಡೆದು ಅವಳು ಗರ್ಭಿಣಿಯಾದಳೆಂದರೆ ಅತಿಶಯೋಕ್ತಿಯಾಗಲಾರದು.

ಕಣ್ವರ ಆಶ್ರಮಕ್ಕೆ ದುಷ್ಯಂತನು ಬಂದಿದ್ದು ನಿರಪರಾಧವಾಗುವಂತೆ ಸಹಜತೆಗೆ ಕುಂದುಂಟಾಗದಂತೆ ಕಾಳಿದಾಸನು ಪರಿವರ್ತಿಸಿಕೊಂಡು ನಾಟಕವನ್ನು ಬರೆದಿದ್ದಾನೆ.

ಮೂಲಕತೆಯಲ್ಲಿ ಶಕುಂತಳೆ, ದುಷ್ಯಂತನು ತನ್ನ ಮಗನನ್ನು ಯುವರಾಜನನ್ನಾಗಿ ಮಾಡಲು ಒಪ್ಪುವುದಾದರೆ ಮಾತ್ರ ಮದುವೆಗೆ ಒಪ್ಪವುದಾಗಿ ನಿಬಂಧನೆಯನ್ನೊಡ್ಡಿದ್ದರೆ 'ಅಭಿಜ್ಞಾನ ಶಾಕುಂತಲ'ದ ಶಕುಂತಳೆ ಅಂತಹ ವ್ಯಾಪಾರಿ ಮನೋಧರ್ಮವನ್ನು ಪ್ರಕಟಿಸುವುದಿಲ್ಲ. ಮೂಲದ ಶಕುಂತಳೆಯ ನಿಬಂಧನೆಯನ್ನು ನೋಡಿದರೆ ತಾಪಸಕನ್ಯೆಯರು ಮುಗ್ಧೆಯರಿರಲಿ, ಲೌಕಿಕ ವ್ಯವಹಾರದಲ್ಲಿ ಲೌಕಿಕರನ್ನೂ ಮೀರಿಸುವರೋ ಎನ್ನಿಸುವಂತಿದೆ.

ಮಹಾಭಾರತದ ಶಕುಂತಳೆ ಗರ್ಭಿಣಿಯಾದ ಮೂರು ವರ್ಷಗಳ ಬಳಿಕ ಮಗುವಿಗೆ ಜನ್ಮವೀಯುತ್ತಾಳೆ. ಆದರೆ ಈ ಗಜಗರ್ಭದ ಆಭಾಸ ಕಾಳಿದಾಸನಲ್ಲಿಲ್ಲ. ಅಲ್ಲದೆ ನಾಟಕದಲ್ಲಿ ಈ ಕಾಲದಲ್ಲಿ ಪ್ರಶ್ನೆಯೇ ಬರುವುದಿಲ್ಲ. ದುಷ್ಯಂತನಿಂದ ತಿರಸ್ಕೃತಳಾದ ಶಕುಂತಳೆ ಮಾರೀಚಾಶ್ರಮದಲ್ಲಿ ಆಶ್ರಯ ಪಡೆದು ಅಲ್ಲಿಯೇ ಜನ್ಮವೀಯುತ್ತಾಳೆ.

ಮಹಾಭಾರತದ ಶಕುಂತಳೆ ವಿವಾಹಾನಂತರವೂ ಒಂಬತ್ತು ವರ್ಷ ತವರಿನಲ್ಲಿದ್ದು ಗಂಡನ ಮನೆಗೆ ಹೋಗಲು ಕಣ್ವರು ಸೂಚಿಸಿದಾಗ ತಾಯಿ ಮಗ ಇಬ್ಬರೂ, ಕಣ್ವರ ಸೇವೆ ಮಾಡುವ ಅವಕಾಶದಿಂದ ವಂಚಿತರಾಗದಿರಲು ಆಶ್ರಮದಲ್ಲಿಯೇ ಉಳಿಯುವುದಾಗಿ ಹೇಳುತ್ತಾರೆ. ಅಷ್ಟೇ

ಅಲ್ಲದೆ ಶಕುಂತಳೆಯಂತೂ ತನ್ನ ಮಗನ ತುಂಟಾಟವನ್ನು ಸಹಿಸಿಕೊಳ್ಳಲಾಗದೆ ತಮ್ಮನ್ನು ಹೊರದೂಡಲು ಹೂಡಿರುವ ಉಪಾಯವೆಂದು ಆಪಾದಿಸುತ್ತಾಳೆ.

ಕಾಳಿದಾಸನ ಶಕುಂತಳೆ ಇಂತಹ ವಾದ ಮಾಡದೇ ಸುಸಂಸ್ಕೃತ ಮಹಿಳೆಯಾಗಿ ವರ್ತಿಸುತ್ತಾಳೆ ಹಾಗೂ ದೂರ್ವಾಸರ ಶಾಪಕ್ಕೆ ಒಳಗಾದ ದುಃಖಿತ ಶಕುಂತಲೆಯನ್ನು ಕಾಣಬಹುದು. ಒಂದೊಂದು ಗಿಡಬಳ್ಳಿಗೂ ಜಿಂಕೆಗೂ ಅವಳಿಗೂ ಇರುವ ಸಂಬಂಧ ಆತ್ಮೀಯ ಬಂಧುಗಳೊಡನಿರುವಂತೆ ನಾಲ್ಕನೆಯ ಅಂಕದ ಒಂದು ಭಾಗ ಕಣ್ವರು ಶಕುಂತಳೆಗೆ ನೀಡುವ ಉಪದೇಶದ ದೃಷ್ಟಿಯಿಂದ ಗಮನಾರ್ಹವಾದರೆ ಇನ್ನೊಂದು ಭಾಗ, ಪ್ರಕೃತಿಯೂ ಸಜೀವ ಪಾತ್ರವಾಗಿ ಶಕುಂತಳೆಯೊಡನೆ ಸಂಭಾಷಿಸುತ್ತದೆಯೋ ಎನ್ನುವಂತಿದ್ದು ಕೊನೆಗೆ 'ಕಾವ್ಯದಲ್ಲೆಲ್ಲಾ ನಾಟಕ ರಮ್ಯ ನಾಟಕದಲ್ಲೆಲ್ಲಾ ಶಾಕುಂತಲದಲ್ಲಿ ನಾಲ್ಕನೆಯ ಅಂಕ' ಎನ್ನುವಷ್ಟರ ಮಟ್ಟಿಗೆ ಮೆಚ್ಚುಗೆ ಪಡೆದಿದೆ. ಮಹಾಭಾರತದ ಕಣ್ವರು ಶಕುಂತಳೆಯನ್ನು ಕಳುಹಿಸುವಾಗ ಮೌನಿಯಾಗಿದ್ದಾರೆ. ಅಲ್ಲಿ ಕೇವಲ ಅವರ ಕಣ್ಣೀರೇ ಮಾತಾಗಿದೆ. ಆದರೆ ಈ ಸನ್ನಿವೇಶವು ಕಾಳಿದಾಸನ ನಾಟಕದಲ್ಲಿ ಅತ್ಯಂತ ಮಹತ್ವಪೂರ್ಣವಾಗಿ ಹೃದಯಸ್ಪರ್ಶಿಯಾಗಿ ಚಿತ್ರಿತವಾಗಿದೆ.

ಕಣ್ವ ಶಕುಂತಳೆಯರ ಆತ್ಮೀಯ ಸಂಬಂಧ, ಅನಸೂಯೆ ಪ್ರಿಯಂವದೆಯರೊಡನೆ ಶಕುಂತಳೆಗಿರುವ ಅಪೂರ್ವ ಸ್ನೇಹ, ಆಶ್ರಮದ ಗಿಡ ಮರ ಹುಲ್ಲೆಗಳೊಡನೆ ಉಸಿರಾಡುವ ಶಕುಂತಳೆಯ ಪ್ರಕೃತಿ ಪ್ರೇಮ, ಇವೆಲ್ಲಕ್ಕಿಂತ ಮಿಗಿಲಾಗಿ ಸಾರ್ವಕಾಲಿಕ ಶಾಶ್ವತ ಮೌಲ್ಯಗಳನ್ನೊಳಗೊಂಡಿರುವ ಕಣ್ವರ ಉಪದೇಶ, ಹೆಣ್ಣು ಹೆತ್ತವರ ಸಂಕಟ, ಸಂಕೋಚಗಳು, ಹೆಣ್ಣೊಪ್ಪಿಸಿದ ತೃಪ್ತಿ ಇವುಗಳಿಂದ ನಾಲ್ಕನೆಯ ಅಂಕ ಪರಿಣಾಮರಮಣೀಯವಾಗಿದೆ. ಮೂಲಕತೆಯಲ್ಲಿ ಋಷಿಗಳು ಪುರಪ್ರವೇಶ ಮಾಡಬಾರದು ಎಂಬ ಕಾರಣವನ್ನು ಮುಂದೊಡ್ಡಿ, ಶಕುಂತಳೆ ಸರ್ವದಮನರಿಬ್ಬರನ್ನೇ ದುಷ್ಯಂತನ ಬಳಿಗೆ ಕಳುಹಿಸಿ ಋಷಿಗಳು ಹಿಂದಿರುಗುತ್ತಾರೆ. ಆದರೆ ಕಾಳಿದಾಸನ ಶಾಕುಂತಲದಲ್ಲಿ ತವರಿನಿಂದ ಮಗಳನ್ನು ಮೊದಲ ಬಾರಿಗೆ ಗಂಡನ ಮನೆಗೆ ಏಕಾಕಿಯಾಗಿ ಕಳಿಸುವಷ್ಟು ಔಚಿತ್ಯರಹಿತನಲ್ಲ. ತಾಯಿಯ ಸ್ಥಾನದಲ್ಲಿರುವ ಗೌತಮಿ, ಒಡಹುಟ್ಟಿದವರಂತಿರುವ ಶಾರ್ಙ್ಗರವ ಶಾರದ್ವತರನ್ನು ಜೊತೆಗೂಡಿಸಿ ದುಷ್ಯಂತನ ಆ ಸ್ಥಾನಕ್ಕೆ ಕಳಿಸುತ್ತಾನೆ.

ಐದನೆಯ ಅಂಕದಲ್ಲಿ ಶಾರ್ಙ್ಗರವ ಮುಂತಾದವರು, ದುಷ್ಯಂತನು ಶಕುಂತಳೆಯನ್ನು ತಿರಸ್ಕರಿಸಿದಾಗ ಆಡುವ ಮಾತುಗಳು ಭಾರತೀಯ ಸಂಸ್ಕೃತಿಯ ನಾಡಿಯನ್ನು ಮಿಡಿಯುತ್ತವೆ. ಶಾರ್ಙ್ಗರವನು ಹೇಳುವ ಮಾತುಗಳು

"ಅರಸಾಡಿದಂತೆ ನೀನಾ
ಗಿರೆ ನಿನ್ನಂ ತಂದೆಯೆಂತು ಮನೆಯಂ ಪುಗಿಪಂ
ಪರಿಶುದ್ಧೆಯಾನೆನುತ್ತಿರ
ದಿರೆ ನೀಂ ಪತಿಗೃಹದೆ ದಾಸಿಯಪ್ಪುದುಮುಚಿತಂ"[೬]

ಈ ಮಾತು ಕೆಟ್ಟರೂ ಉದ್ಧಾರವಾದರೂ ವಿವಾಹಿತ ಸ್ತ್ರೀಗೆ ಗಂಡನ ಮನೆಯೇ ಗತಿ ಎಂಬ ಭಾರತೀಯ ನಂಬಿಕೆಗನುಗುಣವಾಗಿದೆ.

ಉಪಾಖ್ಯಾನದ ಶಕುಂತಳೆ ದುಷ್ಯಂತನ ಆ ಸ್ಥಾನಕ್ಕೆ ಬಂದಾಗ ಹಿಂದಿನ ಒಪ್ಪಂದ ಈಡೇರಿಸಲು ಒತ್ತಾಯಿಸುತ್ತಾಳೆ. ಇದಕ್ಕೆ ತದ್ವಿರುದ್ಧವಾಗಿ ಕಾಳಿದಾಸನ ಶಕುಂತಳೆ ತನ್ನ ಬಾಳ ಸೌಧವೇ ಕುಸಿದು ಬೀಳುತ್ತಿದ್ದರೂ ಒಂದೂ ನಿಂದನೆಯ ಮಾತನ್ನಾಡದೆ ದುಷ್ಯಂತನಿಗೆ ವಿಶ್ವಾಸ ಮೂಡಿಸಲು ತಮ್ಮಿಬ್ಬರ ಏಕಾಂತ ಪ್ರಸಂಗಗಳನ್ನು ತಂಬಿದ ಸಭೆಯಲ್ಲಿ ಹೇಳಬೇಕಾದ ಸಂದಿಗ್ಧ ಧರ್ಮಸಂಕಟದ ಪರಿಸ್ಥಿತಿಯಲ್ಲಿದ್ದು ನಮ್ಮ ಸಹಾನುಭೂತಿಗೆ ಪಾತ್ರಳಾಗುತ್ತಾಳೆ. ಸರ್ವದಮನನ ಜನನವೇ ಆಗಿರದ ಕಾರಣ ಅವನ ಪ್ರಸ್ತಾಪಕ್ಕೆಡೆಯೇ ಇಲ್ಲ. ಇಲ್ಲಿ ಒಂದು ಪಕ್ಷ ಜನನವಾಗಿದ್ದರೂ ಈ ಶಕುಂತಳೆಯ ವರ್ತನೆ ಮೂಲ ಶಕುಂತಳೆಯ ವರ್ತನೆಯ ರೀತಿಯಲ್ಲಂತೂ ಇರುತ್ತಿರಲಿಲ್ಲ.

ಮೂಲದಲ್ಲಿ ಶಕುಂತಳೆಯನ್ನು ದುಷ್ಯಂತ ಗುರುತಿಸಿದರೂ ಲೋಕಾಪವಾದದ ಭಯದಿಂದ ಸುಮ್ಮನಿದ್ದು, ಅಶರೀರವಾಣಿಯ ಮಾತಿನ ಪ್ರಕಾರ ಶಕುಂತಳೆ–ಸರ್ವದಮನರನ್ನು ಸ್ವೀಕರಿಸುತ್ತಾನೆ. ಆದರೆ ಕಾಳಿದಾಸನ ದುಷ್ಯಂತನ ವರ್ತನೆ ಇಂತಹುದಲ್ಲ. ಕಣ್ವಾಶ್ರಮದಿಂದ ಋಷಿಗಳು ಬಂದಿದ್ದಾರೆಂಬ ವರ್ತಮಾನ ತಿಳಿದೊಡನೆ ಅವರನ್ನು ಸ್ವಾಗತಿಸಲು ಸೂಕ್ತ ವ್ಯವಸ್ಥೆ ಮಾಡಿ ಯೋಗ್ಯವಾದ ಸ್ಥಳದಲ್ಲಿ ತಾನೇ ಸ್ವಾಗತಿಸುತ್ತಾನೆ. ಇಲ್ಲಿನ ದುಷ್ಯಂತ ಶಕುಂತಳೆಯನ್ನು ಗುರುತಿಸುವುದೇ ಇಲ್ಲ. ಕಾರಣ ದೂರ್ವಾಸನ ಶಾಪ. ಈ ಶಾಪದ ಹಿನ್ನೆಲೆಯಲ್ಲಿ ನೋಡಿದಾಗ ದುಷ್ಯಂತ ನಿರಪರಾಧಿಯಾಗುತ್ತಾನೆ.

ಮಹಾಭಾರತದ ಶಕುಂತಳೆ ದುಷ್ಯಂತನಿಗೆ ಹೆಂಡತಿ ಮತ್ತು ಮಗನ ಪ್ರಾಮುಖ್ಯತೆಯ ಬಗ್ಗೆ ದೊಡ್ಡ ಉಪನ್ಯಾಸವನ್ನೇ ಕೊಡುತ್ತಾಳೆ. ಆದರೆ ನಾಟಕದ ಶಕುಂತಳೆ ಇಂತಹ ವಾಚಾಳಿಯಲ್ಲ. ಇಲ್ಲಿನ ಶಕುಂತಳೆ ವಿಶ್ವಾಸ ಮೂಡಿಸಲು ತಮ್ಮಿಬ್ಬರ ಏಕಾಂತದ ಪ್ರಣಯ ಪ್ರಸಂಗಗಳನ್ನು ವಿವರಿಸಿದರೂ ಫಲಕಾರಿಯಾಗದ ಸಂದರ್ಭದಲ್ಲಿ ಅನಿವಾರ್ಯವಾಗಿ ಅಸಹಾಯಕಳಾಗಿ ಮಾತ್ರ "ಎಲೈ ಅನಾರ್ಯನೆ ನಿನ್ನ ಮನದ ಸಂದೇಹದಿಂದ ಎಲ್ಲವನ್ನು ಎಣಿಸಿ ಮಾತಾಡುವೆ. ಮೇಲೆ ಧರ್ಮಕಂಚುಕವನ್ನು ತೊಟ್ಟು ಹುಲ್ಲುಮುಸುಕಿದ ಬಾವಿಯಂತಿರುವ ನಿನಗೆ ಯಾವ ಮನುಷ್ಯನು ತಾನೆ ಸಾಟಿಯಾಗುವನು" ಎಂದರೂ ಈ ಮಾತು ದುಷ್ಯಂತನಿಗೆ ಅವಹೇಳನಕಾರಿ ಎನ್ನಿಸದೆ ಇವಳ ಈ ಕೋಪ ನಿಷ್ಕಪಟವಾದುದೆಂಬಂತೆ ತೋರುತ್ತದೆ ಎಂದಿದ್ದಾನೆ. ಶಕುಂತಲೋಪಾಖ್ಯಾನದ ಪ್ರಕಾರ ಅಶರೀರವಾಣಿಯ ಮಾತಿನ ಪ್ರಕಾರ ದುಷ್ಯಂತನು ಶಕುಂತಳೆ ಮತ್ತು ಸರ್ವದಮನರನ್ನು ಸ್ವೀಕರಿಸುವುದರ ಜೊತೆ ಜೊತೆಗೇ ದುಷ್ಯಂತನ ಆಸ್ಥಾನದಲ್ಲಿಯೇ ಕತೆ ಮುಕ್ತಾಯಗೊಳ್ಳುತ್ತದೆ. ಅಂದರೆ ನಾಟಕದ 'ಆರು' ಏಳನೆಯ ಅಂಕಗಳ ಕತೆಯ ಪ್ರಸ್ತಾಪ ಮೂಲದಲ್ಲಿಲ್ಲ. ಈ ಎರಡು ಅಂಕಗಳ ಕತೆ ಸಂಪೂರ್ಣವಾಗಿ ಕಾಳಿದಾಸನ ಕಲ್ಪನೆ. ಕಾಳಿದಾಸನ ಈ ಕಲ್ಪನೆಯ ಔಚಿತ್ಯ ಅರ್ಥವಾಗಬೇಕಾದರೆ ಸೂಕ್ಷ್ಮವಾಗಿಯಾದರೂ ಈ ಅಂಕಗಳ ಕತೆಯ ಅವಲೋಕನ ಅಗತ್ಯ. ನಾಟಕದ ಐದು ಆರನೆಯ ಅಂಕಗಳ ಮಧ್ಯೆ ಬರುವ ಪ್ರವೇಶದಲ್ಲಿ ಬೆಸ್ತರ ಮೂಲಕ ದುಷ್ಯಂತನಿಗೆ ಉಂಗುರ ದೊರೆತ ನಂತರ ಅವನಿಗುಂಟಾದ

ಪರಿತಾಪ, ಶಕುಂತಳೆಗೆ ತನ್ನಿಂದಾದ ಅನ್ಯಾಯಕ್ಕಾಗಿ ಪಶ್ಚಾತ್ತಾಪದಿಂದ ಮರುಗುವ ಅವನ ಮಾನಸಿಕ ತುಮಲ ಮೂಲಕತೆಯಲ್ಲಿಲ್ಲದೆ ದುಷ್ಯಂತನ ಪಾತ್ರ ಪರಿಪೂರ್ಣವಾಗದೆ ಹೋಗಿದೆ. ಮುಗ್ಧೆಯಾದ ತಾಪಸಕನ್ಯೆ ಶಕುಂತಳೆಯನ್ನು ಗಾಂಧರ್ವ ವಿಧಿಯಿಂದ ವಿವಾಹವಾಗಿ ನಡುನೀರಿನಲ್ಲಿ ಕೈಬಿಟ್ಟನೇನೋ ಎನ್ನಿಸುವ ದುಷ್ಯಂತನ ನಡವಳಿಕೆಯನ್ನು ಟೀಕಿಸಬೇಕು, ವಿಮರ್ಶೆಯ ಒರೆಗೆ ಹಚ್ಚಬೇಕೆನ್ನಿಸಿದರೂ, ಆರನೆಯ ಅಂಕವನ್ನು ಓದಿದ ಬಳಿಕ ನಮ್ಮ ಅಭಿಪ್ರಾಯವನ್ನು ಬದಲಿಸಲೇಬೇಕಾಗುತ್ತದೆ.

ಮೂಲದಲ್ಲಿಲ್ಲದ ದೂರ್ವಾಸರ ಶಾಪ, ಅಭಿಜ್ಞಾನ(ಉಂಗುರ)ಗಳ ಹಿನ್ನೆಲೆಯಲ್ಲಿ ಅವುಗಳಿಂದಾದ ಪರಿಣಾಮವನ್ನು ದೃಷ್ಟಿಯಲ್ಲಿಟ್ಟುಕೊಂಡು ಆರನೆಯ ಅಂಕದಲ್ಲಿ ದುಷ್ಯಂತನ ಪಾತ್ರಪರಿಶೀಲನೆ ಮಾಡಿದಾಗ, ದುಷ್ಯಂತನೊಬ್ಬ ಕಾಮುಕನಲ್ಲ, ಅವನೊಬ್ಬ ಮೋಸಗಾರನಲ್ಲ, ಪಶ್ಚಾತ್ತಾಪ ಪಟ್ಟ ಮುಗ್ಧ ಎನ್ನುವುದು ತಿಳಿಯುತ್ತದೆ. ಶಕುಂತಳೆಯ ನೆನಪು ಅಭಿಜ್ಞಾನದ ದರ್ಶನದಿಂದ ಮರುಕಳಿಸಿದ ಬಳಿಕ ಸಿಂಹಾಸನದ ಮೇಲೆ ಕುಳಿತುಕೊಳ್ಳಲಾರದಷ್ಟು ಅವಳ ಚಿಂತೆ ಮನವನ್ನಾಕ್ರಮಿಸಿದೆಯೆನ್ನುವ ದುಷ್ಯಂತನ ಮಾತು, ಈ ದುಃಖದ ಸನ್ನಿವೇಶದ ವಸಂತೋತ್ಸವವನ್ನು ರದ್ದುಪಡಿಸುವ ಅವನ ಔಚಿತ್ಯಪೂರ್ಣ ನಡವಳಿಕೆ ಶಕುಂತಳೆಯ ಬಗ್ಗೆ ಅವನಿಗಿರುವ ಕಳಕಳಿ ಮತ್ತು ಕರ್ತವ್ಯನಿಷ್ಠೆಗಳಿಗೆ ಸಾಕ್ಷಿಯಾಗಿದೆ.

ಅಷ್ಟೇ ಅಲ್ಲದೆ ವರ್ತಕನ ಆಸ್ತಿಯ ಬಗ್ಗೆ ದುಷ್ಯಂತನಾಡುವ ಮಾತುಗಳು ಮತ್ತು

"ಆನರಾವವ ಸುಖಾಂಧವ
ಆನಮನಗಲ್ದಿರ್ಪುದವರ್ಗೆ ಪಾಪಂ ಪೆರಗೆಂ
ದೆನಿಸಿರಲಾಯಾ ಬಾಂಧವ
ನೆನಿದಂ ದುಷ್ಯಂತನೆಂದು ಸಾರುಗೆ ಪುರದೊಳ್"[೬೦]

ಮಾತಿನಲ್ಲಿ ಪ್ರಜೆಗಳೊಡನೆ ಅವನಿಟ್ಟುಕೊಳ್ಳಬಯಸುವ ಪಾಪರಹಿತ ಸಂಬಂಧಗಳು ಅವನೊಬ್ಬ ಶ್ರೇಷ್ಠರಾಜನೆಂಬುದನ್ನು ರುಜುವಾತುಪಡಿಸುತ್ತವೆ.

ಇನ್ನು ಏಳನೆಯ ಅಂಕದಲ್ಲಿ ಕತೆ ವಿಸ್ತಾರಗೊಂಡಿರುವುದರ ಔಚಿತ್ಯವನ್ನು ಪರಿಶೀಲಿಸಬಹುದು. ಮೂಲದಲ್ಲಿ ಕತೆ ದುಷ್ಯಂತನ ಆಸ್ಥಾನದಲ್ಲಿಯೇ ಮುಕ್ತಾಯಗೊಂಡು, ಶಕುಂತಳೆ-ದುಷ್ಯಂತರ ಪಾತ್ರಗಳ ದೃಷ್ಟಿಯಿಂದಾಗಲೀ, ಸನ್ನಿವೇಶಗಳ ದೃಷ್ಟಿಯಿಂದಾಗಲೀ, ನಾಟಕ ಸಾರಬೇಕಾದ ಸಂದೇಶದ ದೃಷ್ಟಿಯಿಂದಾಗಲೀ ಮನಸ್ಸಿನ ಮೇಲೆ ಅಚ್ಚಳಿಯದ ಯಾವುದೇ ಪರಿಣಾಮವನ್ನು ಬೀರುವುದಿಲ್ಲ. ಆದರೆ ಕಾಳಿದಾಸ ನಾಟಕವನ್ನು ಮಾರೀಚಾನ ಆಶ್ರಮದವರೆಗೂ ವಿಸ್ತರಿಸಿ ಅಲ್ಲಿ ಶಕುಂತಲೆಗೆ ವಿರಹ ದೀಕ್ಷೆಯನ್ನು ಕೊಟ್ಟು ಅದನ್ನೇ ವ್ರತವನ್ನಾಗಿ ಸ್ವೀಕರಿಸುವಂತೆ ಮಾಡಿ ಅವಳ ಪಾತಿವ್ರತ್ಯದ ಹಿರಿಮೆಯನ್ನು ಪ್ರಕಟಗೊಳಿಸಿದ್ದಾನೆ. ಅಂತೆಯೇ ಅವಳಿಗೆ ನಾಟಕದಲ್ಲಿ ಹಿರಿಯ ಸ್ಥಾನವೂ ದೊರಕಿದೆ. ಮೂಲದ ಕತೆ ಮುಗಿದ ನಂತರ ಶಕುಂತಲೆ ಮಾರೀಚಾಶ್ರಮದಲ್ಲಿ ವಿರಹಿಣಿಯಾಗಿದ್ದು,

ದುಷ್ಯಂತನ ಆಗಮನದ ನಿರೀಕ್ಷೆಯಲ್ಲಿಯೇ ವರ್ಷಗಳನ್ನು ಕಳೆಯುವುದು ಅವಳ ತ್ಯಾಗ ಪ್ರೇಮಗಳ ದ್ಯೋತಕವಾಗಿ ಅವಳ ಪಾತ್ರ ಪರಿಪೋಷಣೆಗೆ ಪೂರಕವಾಗಿದೆ.

ಅಲ್ಲದೆ ಶುದ್ಧ ಸಾತ್ವಿಕ ಪ್ರೇಮಕ್ಕೆ ಎಂದೆಂದೂ ಜಯವಿದೆಯೆಂಬುದನ್ನು ಮಾರೀಚಾಶ್ರಮದಂತಹ ಪವಿತ್ರ ಅಲೌಕಿಕ ವಾತಾವರಣದಲ್ಲಿ ಸಂಸ್ಥಾಪಿಸಿದ್ದಾನೆ ಕಾಳಿದಾಸ. ದುಷ್ಯಂತನ ಪಾತ್ರದ ದೃಷ್ಟಿಯಿಂದಲೂ ಏಳನೆಯ ಅಂಕ ಗಮನಾರ್ಹ. ಅಲ್ಲದೆ ಶಕುಂತಳೆ ದುಷ್ಯಂತನ ಬಗ್ಗೆ ತಳೆದಿದ್ದ ತಪ್ಪುಕಲ್ಪನೆಯನ್ನು, ದುಷ್ಯಂತನ ಪಶ್ಚಾತ್ತಾಪದಗ್ಧ ಮನಸ್ಸಿನ ಕಳವಳವನ್ನು ಕಾಳಿದಾಸನು ಇಲ್ಲಿ ನಿವಾರಿಸಿ ಅವರಿಬ್ಬರೂ ನಿರಾಳವಾಗಿ ಉಸಿರಾಡುವಂತಹ ವಾತಾವರಣವನ್ನು ನಿರ್ಮಿಸಿದ್ದಾನೆ. ಮಾರೀಚನಾಡುವ ಈ ಮಾತುಗಳನ್ನು ನೋಡಿ: "ಅಪ್ಸರ ಸ್ತ್ರೀಯಾದ ಧಿಕ್ಕೃತಿಯಿಂದ ದುಃಖಿತೆಯಾದ ಶಕುಂತಳೆಯನ್ನು ಗ್ರಹಿಸಿಕೊಂಡು ಮೇನಕೆಯು ದಾಕ್ಷಾಯಣಿಯ ಸಮೀಪಕ್ಕೆ ಬಂದಾಗಲೇ ದೂರ್ವಾಸರ ಶಾಪದಿಂದ ಧರ್ಮಪತ್ನಿಯಾದ ಈ ತಪಸ್ವಿನಿಯನ್ನು ನೀನು ತಿರಸ್ಕರಿಸಿದೆಯೇ ಹೊರತು ಮತ್ತೆ ಬೇರೆ ಇಲ್ಲವೆಂದೂ, ಆ ಶಾಪವು ಉಂಗುರ ನೋಡಿದ ಮೇಲೆ ವಿಮೋಚನೆ ಹೊಂದುವುದೆಂದು ಧ್ಯಾನದಿಂದ ತಿಳಿದೆವು". ದುಷ್ಯಂತನಿಗೆ ಹೇಳುವ ಈ ಮಾತು ಉತ್ತಮವಾಗಿದೆ. ಮಾರೀಚರಂತಹ ಶ್ರೇಷ್ಠ ಮುನಿ ಪುಂಗವರಿಂದ ದುಷ್ಯಂತನಿಗೆ ಶ್ವೇತಪತ್ರವನ್ನು ಪ್ರದಾನಿಸಿ ಅವನ ಪಾತ್ರಕ್ಕೆ ಅಂಟಿಕೊಳ್ಳಬಹುದಾಗಿದ್ದ ಕಿಲುಬನ್ನು ತೊಳೆದಿದ್ದಾನೆ ಕಾಳಿದಾಸ. ಅಂತೆಯೇ ಮೂಲದ ವಾಚಾಳಿ, ದಿಟ್ಟೆ, ನಿರ್ಲಜ್ಜೆಯಾದ ಶಕುಂತಳೆಯ ಪಾತ್ರವನ್ನು "ತಪಸ್ವಿನಿ"ಯ ಮಟ್ಟಕ್ಕೇರಿಸಿದ್ದಾನೆ.

ಅಷ್ಟೇ ಅಲ್ಲದೆ ದುಷ್ಯಂತ ಶಕುಂತಳೆಯರ ಪುನಸ್ಸಮಾಗಮ, ಪರಸ್ಪರ ಅರ್ಥ ಮಾಡಿಕೊಳ್ಳುವ ಸನ್ನಿವೇಶಗಳು ರಮಣೀಯವಾಗಿವೆ. ಆದರೆ ಮೂಲಕತೆ ದುಷ್ಯಂತನ ಆಸ್ಥಾನದಲ್ಲಿಯೇ ಮುಕ್ತಾಯಗೊಂಡು, ಈ ಸುಂದರ ಸನ್ನಿವೇಶಗಳಾಗಲಿ, ಪಾತ್ರಗಳ ಪೂರ್ಣ ಬೆಳವಣಿಗೆಯಾಗಲೀ ಸಾಧ್ಯವಾಗದೆ, ಮಾರೀಚಾಶ್ರಮದ ಪವಿತ್ರ ಅಲೌಕಿಕ ವಾತಾವರಣದಿಂದಲೂ ವಂಚಿತವಾಗಿ ಕತೆಯ ಮುಕ್ತಾಯ ತೀರಾ ಸಪ್ಪೆಯೆನ್ನಿಸುತ್ತದೆ. ಎಷ್ಟೇ ಕಷ್ಟಗಳೊದಗಿದರೂ, ಅವುಗಳನ್ನು ನಿಷ್ಠೆ, ತ್ಯಾಗಗಳಿಂದ ಧೈರ್ಯವಾಗಿ ಎದುರಿಸಿ ಈಸಿ ಇದ್ದು ಜಯಿಸಿದರೆ ಗೆಲುವು ಸಿದ್ಧವೆನ್ನುವ ಮತ್ತು ಕೊನೆಯಲ್ಲಿ ಎಲ್ಲವೂ ಮಂಗಳಮಯವಾಗಿ ಮುಕ್ತಾಯಗೊಳ್ಳಬೇಕೆನ್ನುವ ಭಾರತೀಯ ದೃಷ್ಟಿಗನುಗುಣವಾಗಿದೆ ನಾಟಕದ ಮುಕ್ತಾಯ.

೪ನೇ ಅಂಕ

ಯಾವುದೇ ಒಂದು ಸಾಹಿತ್ಯ ಕೃತಿ ಚಿರಂತನವಾಗಿ ಬದುಕಬೇಕಾದರೆ ಜೀವನದಿಂದ ನೇರವಾಗಿ ಮೂಡಿ ಬಂದಿರಬೇಕು. ಅಷ್ಟೇ ಅಲ್ಲದೆ ಆ ಕೃತಿ ಕಾಲ ದೇಶಾದಿಗಳಿಂದ ದೂರವಾಗಿ, ಸಾರ್ವಕಾಲಿಕವಾಗಿ ನಿಲ್ಲುವಂತಹ ಶಾಶ್ವತ ಮೌಲ್ಯಗಳನ್ನು ಪ್ರತಿಪಾದಿಸುವಂತಿರಬೇಕು. ಅಂತಿದ್ದರೆ ಮಾತ್ರ ಕವಿ ಅಳಿದರೂ ಕೃತಿ ಕವಿಯ ಹೆಸರನ್ನು ಉಳಿಸುತ್ತದೆ. ಈ ದೃಷ್ಟಿಯಿಂದ 'ಅಭಿಜ್ಞಾನ

ಶಾಕುಂತಲ'ವನ್ನು ಅವಲೋಕಿಸಿದಾಗ ನಾಟಕದ ಹಿರಿಮೆ ಅರಿವಾಗುತ್ತದೆ. 'ಕಾವ್ಯಗಳಲ್ಲೆಲ್ಲಾ ನಾಟಕ ರಮ್ಯ: ಅದರಲ್ಲೂ ಶಾಕುಂತಲ, ಶಾಕುಂತಲದಲ್ಲೂ ನಾಲ್ಕನೆಯ ಅಂಕ' ಎನ್ನುವಷ್ಟು ವಿಶ್ವಸಾಹಿತ್ಯದಲ್ಲಿ ಸ್ಥಾನ ಪಡೆದುಕೊಂಡಿದೆ.

ಈ ಅಂಕದಲ್ಲಿ ಕಾಳಿದಾಸನು, ಮಾನವನ ಮನಸ್ಸಿನ ಪದರ ಪದರಗಳನ್ನು ಬಿಡಿಸಿ ತೋರಿಸಿದ್ದಾನೆ. ಮಾನವ ಸ್ವಭಾವಕ್ಕೆ ಕನ್ನಡಿ ಹಿಡಿದಿದ್ದು ಪ್ರಕೃತಿಯೂ ಜೀವಂತವಾಗಿ ಉಸಿರಾಡುತ್ತಿದೆಯೋ ಎಂಬಂತೆ ತನ್ಮಯವಾಗಿ ಪ್ರಕೃತಿಯನ್ನು ಚಿತ್ರಿಸಿದ್ದಾನೆ. ಚಿತ್ರಿಸುವುದಷ್ಟೇ ಅಲ್ಲ, ಪ್ರಕೃತಿಗೂ ಮನುಷ್ಯನಿಗೂ ಇರುವ ಸಾವಯವ ಸಂಬಂಧವನ್ನು ನಿರೂಪಿಸಿದ್ದಾನೆ. ಹೆಣ್ಣಿಗಿರುವ ತೌರಿನ ಹಂಬಲ ಮತ್ತು ತೌರಿನ ಸಂಬಂಧಗಳನ್ನು ಜಾನಪದ ಕವಿಗಳು ಹಾಡಿದಷ್ಟು ಸಹಜವಾಗಿ ಪಡಿಮೂಡಿಸಿದ್ದಾನೆ. ಹೆಣ್ಣು ಹೆತ್ತವರ ನೋವು–ನಲಿವು, ಜವಾಬ್ದಾರಿಗಳನ್ನು ಯಥಾವತ್ತಾಗಿ ಕಂಡರಿಸಿದ್ದಾನೆ. ಒಟ್ಟಿನಲ್ಲಿ ಕೌಟುಂಬಿಕ ಜೀವನದಲ್ಲಿ ಕಂಡುಬರಬಹುದಾದ ಭಾರತೀಯ ಸಂಸ್ಕೃತಿಯ ಚಿತ್ರಣದ ಒಂದು ಮುಖ ನಾಲ್ಕನೆಯ ಅಂಕವೆನ್ನಬಹುದು. ಶಕುಂತಲೆಯನ್ನು ಪತಿಗೃಹಕ್ಕೆ ಬೀಳ್ಕೊಡುವ ಈ ಹೃದಯಸ್ಪರ್ಶಿ ಸನ್ನಿವೇಶವನ್ನು ಈ ಕೆಳಗಿನಂತೆ ನೋಡಬಹುದು.

"ಕಳವಳವಾಂತುದೆನ್ನೆರ್ದೆ ಶಕುಂತಳೇ ಪೋದಪಳೆಂದು ಕಂಠಮು
ಮ್ಮಳಿಸುವುದೊತ್ತುವಶ್ರುಭರದಿಂ ಜಡಮಾದುದು ದೃಷ್ಟಿ ಚಿಂತೆಯಿಂ
ದಳಲಿನಿತಾಗೆ ಕಾಡ ಮನುಜಂಗೆನಗಂ ಕಡು ನೇಹದಿಂದಮಿ
ನೂಳಿದ ಗೃಹಸ್ಥರಾತ್ಮಭವೆಯಂ ಕಳಪುತ್ತಕತೆಂತಳಲ್ಪರೋ"[೭]

ಕಣ್ವರು ಅರಿಷಡ್ವರ್ಗಗಳನ್ನು ಗೆದ್ದು ದೂರನಾದ, ಸರಿ ಸಮರ್ಥನಾದ ಋಷಿ ಶಕುಂತಳೆಯಾದರೋ ಅವನ ಔರಸ ಪುತ್ರಿಯಲ್ಲ, ಸಾಕುಮಗಳು. ವಾಸ ಮಾಡುತ್ತಿರುವ ಸ್ಥಳವಾದರೂ ಮಾನವರ ರಾಗ ದ್ವೇಷರಹಿತವಾದ ಆಶ್ರಮದಲ್ಲಿ, ಇಷ್ಟಾದರೂ ಕಣ್ವನ ಮನಸ್ಸು ತಡೆಯಲಿಲ್ಲ. ಅಂತಃಕರಣ ಉಕ್ಕಿ ಹರಿಯಿತು. ಅಂತಹ ಋಷಿಯ ಸ್ಥಿತಿಯೇ ಹಾಗಾದರೆ ಇನ್ನು ನವಮಾಸಗಳು ಗರ್ಭದಲ್ಲಿ ಧರಿಸಿ ಹೆತ್ತ ತಾಯಿಗೆ, ಪ್ರೀತಿ ವಾತ್ಸಲ್ಯದಿಂದ ಸಾಕಿ ಸಲಹಿದ ತಂದೆ ಮುಂತಾದ ಬಂಧು ಬಾಂಧವರಿಗುಂಟಾಗುವ ಅಗಲಿಕೆಯ ನೋವು ಮಾತಿಗೆ ಮೀರಿದ್ದು. ಅದನ್ನು ಕಾಳಿದಾಸ "ಮನುಜರ್ ತಮ್ಮಾತ್ಮ ಭವೆಯಂ ಕಳಪುತ್ತಕಟೆಂತಳಲ್ಪರೋ" ಎಂದಿದ್ದಾರೆ.

ಭಾವ ತೀವ್ರವಾದಲ್ಲಿ ಭಾಷೆ ಮೂಕವಾಗಿ ಮೌನ ಮಾತಾಡುತ್ತದೆ. ಎಂತಳಲ್ಪರೋ' ಎಂಬ ನಾಟಕಕಾರನ ಮಾತು ಒಂದು ಭಾವನಾ ಪ್ರಪಂಚವನ್ನೇ ನಿರ್ಮಾಣ ಮಾಡಿ ಓದುಗರ ಮನಸ್ಸಿನಲ್ಲಿ ಅನುರಣಿತವಾಗುವಂತೆ ಮಾತು ಬಳಸಿರುವ ಕಾಳಿದಾಸನ ಪ್ರತಿಭೆಯನ್ನು ಕಂಡಾಗ ಮಾನವ ಹೃದಯದ ತಂತಿಗಳನ್ನು ಈ ನಾಟಕಕಾರ ಎಷ್ಟು ಚೆನ್ನಾಗಿ ಮಿಡಿಯಬಲ್ಲ ಎನ್ನಿಸುತ್ತದೆ. ಧ್ವನಿ ಪರಂಪರೆ ಈ ಮಾತಿನ ಹಿಂದಡಗಿದೆ ಎನ್ನಬಹುದು. ಪದ್ಯಗಳನ್ನು ಗಮನಿಸಿದರೆ ಕಣ್ವರ

ಕಣ್ಣೀರಿನೊಡನೆ ನಮ್ಮ ಕಣ್ಣುಗಳು ಹನಿಗೂಡದಿರವು. ಕಾರಣ ಚಿತ್ರಿತವಾಗಿರುವ ಭಾವ ಸನ್ನಿವೇಶಗಳು ವ್ಯಕ್ತಿಗತವೆನ್ನುವಂತೆ, ಕಣ್ವ, ಶಕುಂತಳೆಯನ್ನು ಕುರಿತೇ ಚಿತ್ರಿತವಾಗಿದ್ದರೂ ಅದನ್ನು ಮೀರಿ ಸಾಧಾರಣೀಕರಣಗೊಳ್ಳುವ ಮಟ್ಟಕ್ಕೇರುತ್ತವೆ. ಈ ಸಾಧಾರಣೀಕರಣ ಸಿದ್ಧಿಸುವುದು ಕಾಳಿದಾಸರಂತವರಿಗೆ ಮಾತ್ರವೇನೋ ಅನ್ನಿಸುತ್ತದೆ.

ಗಂಡನ ಮನೆಯೇ ಗರತಿಯ ಕೈಲಾಸವಾದರೂ ಅವಳ ತೌರಿನ ಬೆಸುಗೆ ಮಾತಿಗೆ ಮೀರಿದ್ದು, ಶರೀರ ಗಂಡನ ಮನೆಯಲ್ಲಿದ್ದರೆ, ಮನಸ್ಸು ಹೆತ್ತೊಡಲ ಮಡಿಲಲ್ಲಿಯೇ ಪವಡಿಸಲಿಚ್ಛಿಸುತ್ತದೆ. ಹೂ ಮುಡಿವಾಗ 'ಒಬ್ಬಳಿರುವ ಮನೆಗೆ ಹಬ್ಬದಿರು ಮಲ್ಲಿಗೆ ಹಬ್ಬೋಗು ನನ್ನ ತವರೀಗೆ' ಎಂದರೆ ಬಳೆ ತೊಟ್ಟುಕೊಳ್ಳುವಾಗ "ಹಂಚಿನ ಮನೆ ಕಾಣೋ ಕಂಚಿನ ಕದ ಕಾಣೋ" ಅಲ್ಲಿಗೆ ಹೋಗಿ ಬಳೆ ತೊಡಿಸು ಎನ್ನುತ್ತದೆ. ಗಂಡನ ಮನೆಯಲ್ಲಿರುವ ಗರತಿಯ ಮನಸ್ಸು ತಂಗಿಯನ್ನು ಕಳುಹಿಸಿಕೊಡುತ್ತಿರುವ ಈ ಅಣ್ಣನ ಮಾತುಗಳನ್ನು ಗಮನಿಸುವುದಾದರೆ

ತೊಟ್ಟಿಲ ಹೊತ್ತುಕೊಂಡು ತೌರು ಬಣ್ಣ ಉಟ್ಟುಕೊಂಡು
ಅಪ್ಪ ಕೊಟ್ಟೆಮ್ಮೆ ಹೊಡಕೊಂಡು-ತಂಗ್ಯಮ್ಮ
ತಿಟ್ಹತ್ತಿ ತಿರುಗಿ ನೋಡ್ಯಾಳು

ಈ ಜನಪದ ಗೀತೆಯಲ್ಲಿ ಹೆಣ್ಣು-ತೌರುಗಳ ಸಂಬಂಧ ಮಡುಗಟ್ಟಿ ನಿಂತಿದೆ.

ಇದೇ ಭಾವನೆಯನ್ನು ಶಕುಂತಲೆಯು ಕಣ್ವಾಶ್ರಮದೊಂದಿಗಿಟ್ಟುಕೊಂಡಿದ್ದ ಸಂಬಂಧವನ್ನು ಚಿತ್ರಿಸುವಾಗ ಕಾಳಿದಾಸನು ಚಿತ್ರಿಸಿದ್ದಾನೆ.

ಇತ್ತುದದೊಂದು ಕಾಳಿ ಶುಭಕಾಣೆಗೊಲವಿಂ ಶಶಿಪಾಂಡು ವಸ್ತ್ರಮಂ
ಮತ್ತಮದೊಂದು ವೃಕ್ಷಮಿರದಿತ್ತುದು ತಾನಡಿ ಯೋಡೆ ಲಾಕ್ಷೆಯಂ
ಎತ್ತಿದ ಪಲ್ಲವ ಪ್ರತಿಮ ಪಾಣಿಗಳಿಂ ವನದೇವಿಯರ್ ಮುದಂ
ಬೆತ್ತೊಡನಿತ್ತರೀ ತೊಡವನೆಲ್ಲ ಮನನ್ಯ ಕುಜಂಗಳತ್ತಣಿಂ

ಹೀಗೆ ಶಕುಂತಲೆಯನ್ನು ಗಿಡಮರಗಳು ಆಭರಣ, ವಸ್ತ್ರ, ಅಲಂಕಾರ ಪರಿಕರಗಳನ್ನಿತ್ತು ಬೀಳ್ಕೊಡಬೇಕಾದರೆ ಅವಳು ಅವುಗಳನ್ನು ಅದೆಷ್ಟು ಮಮತೆಯಿಂದ ಲಾಲನೆ ಪಾಲನೆ ಮಾಡಿರಬೇಕು? ಶಕುಂತಲೆಯ ಪ್ರಯಣಕ್ಕೆ ಅನುಮತಿ ಕೋರುವ ಕಣ್ವರ ಮಾತುಗಳಲ್ಲಿರುವ ಉತ್ತರ ಈ ಕೆಳಗಿನಂತಿದೆ.

"ಆಲವನನಾವಳೀಂಟಳೆರೆದಲ್ಲದೆ ನಿಮ್ಮಯ ಪಾತೆಗಂಬುವಂ
ತಳಿರ್ಗಳ ಕೊಯ್ಯುಳಾವಳೊಲವಿಂ ಮಿಗೆ ಸಿಂಗರದಾಸೆ ಯುಳ್ಳೊಡಂ
ಅಲರ್ಗಳ ತಾಳೆ ನೀವು ಮೊದಲತ್ಸವಾಂತ ಫಳಾವಳಾಶಕುಂ
ತಳೆ ಪತಿಸದ್ಮ ಕೈದಿದ ಪಳಾಕೆಗನುಜ್ಞೆಯ ನೀವುದೆಲ್ಲರುಂ"೬೪

ಮೃಗಾರ್ಭಕವೊಂದು ತನಗೆ ಗಾಯವಾದಾಗ ಆರೈಕೆ ಮಾಡಿದ ಶಕುಂತಲೆಯ ಹೊರಡಲು ಬಿಡದೆ ಸೆರಗನ್ನು ಹಿಡಿದು ಎಳೆಯುವಲ್ಲಿ, ಪೂರ್ಣ ಗರ್ಭಿಣಿಯಾದ ಜಿಂಕೆಯ ಸುಖಪ್ರಸವವನ್ನು ಕುಶಲಪತ್ರಿಕೆಯ ಮೂಲಕ ತಿಳಿಸಬೇಕೆಂದು ಕೇಳುವ ಶಕುಂತಲೆಯ ಮಾತುಗಳಲ್ಲಿ ಆಕೆಯು ಆಶ್ರಮದ ಗಿಡಮರ, ಜಿಂಕೆಗಳಲ್ಲಿ ಉಸಿರಾಡುತ್ತಿರುವಳೋ ಎನ್ನಿಸುತ್ತದೆ. ಶಕುಂತಲೆ ಹೊರಟಾಗ ಆಶ್ರಮದೊಳಗಿರುವ ಅವಸ್ಥೆಯನ್ನು ನೋಡಬಹುದು.

"ಕುಣಿವುದನುಳಿದವು ಶಿಖಿಗಳ್
ತೃಣಕಬಳಂ ಜಗುಳ ಬಾಯಿನರಿಯದ ಹರಿಣೀ
ಗಣ ಮುದಿರ್ವೆಲೆಯಿಂ ರಮಣೀ
ಮಣಿ ಕಣ್ಣೀರ್ಗಿಡುವ ತೆರೆದೆ ತೋರ್ಪುವು ಲತೆಗಳ್"[೬೫]

ಈ ರೀತಿಯಲ್ಲಿ ನಾಟಕದಲ್ಲಿ ಪ್ರಕೃತಿಯೂ ಒಂದು ಸಜೀವ ಪಾತ್ರವಾಗಿ ಚಿತ್ರಿತವಾಗಿದೆ. ತೌರನ್ನು ಅಗಲಿ ಪತಿಗೃಹಕ್ಕೆ ತೆರಳುವ ಗೃಹಿಣಿಯ ಜವಾಬ್ದಾರಿ ಅಸಾಮಾನ್ಯ. ನಡೆದು ಬಂದ ದಾರಿಗಿಂತ ನಡೆಯಬೇಕಾಗಿರುವ ದಾರಿ ಅವಳಿಗೆ ಬಹುಮುಖ್ಯ. ಹುಟ್ಟಿದ, ಸೇರಿದ ಮನೆಗಳೆರಡನ್ನು ಬೆಳಗಿಸುವ, ತನ್ಮೂಲಕ ಸಂಸ್ಕೃತಿಯನ್ನು ಎತ್ತಿ ಹಿಡಿಯುವ ಸಂತೋಷ ತೃಪ್ತಿಗಳನ್ನು ಬಿತ್ತರಿಸುವ ಗುರುತರ ಹೊಣೆ ಅವಳದು. ಇದನ್ನು ಜಾನಪದ ಕವಿಗಳು "ಅತ್ತೆಮಾವಗಂಜಿ, ಸುತ್ತೇಳು ನೆರೆಗಂಜಿ ಮತ್ತೆ ಗಂಡನ ಶ್ರೀಪಾದಕಂಜಿ" ಬಾಳಬೇಕೆಂದು ಹೇಳಿದ್ದಾರೆ.

"ಜಾತೆ ನಿಜಗುಣಗಳಿಂದೆಯ
ಯಾತಿಗೆ ಶರ್ಮಿಷ್ಠೆಯಂತೆ ಪತಿಹಿತೆಯಾಗು
ತ್ತಾತರುಣಿ ಪೂರವಂ ಪಡೆ
ದಾತೆರದಿಂ ಚಕ್ರವರ್ತಿಪುತ್ರನ ಪಡೆ ನೀಂ–ಮತ್ತು"[೬೬]

"ಪಿರಿಯರ ಸೇವೆಗಯ್ ಸವತಿಯರ್ಕಳೊಳಿಷ್ಟವಯಸ್ಯೆಯಂದದಿಂದಿರು
ಪತಿಯೋರ್ಮೆ ಹೇವಗೊಳಿಸಲ್ ಮುಳಿಸಂ ಪ್ರತಿಕೂಲೆ ಯಾಗದಿರ್
ಪರಿಜನವಂ ಕರಂ ಸಲಹು ಭಾಗ್ಯದ ಬಾಗಿರು ಪೆಣ್ಣಿಳಿಂತಿರಲ್
ಗರತಿಯರಪ್ಪರಿಂತಿರದರನ್ವಯಕೌಧಿಯನುಂಟುಮೌಳ್ವರೌ"[೬೭]

ಎಂದು ಗಂಡನ ಮನೆಯಲ್ಲಿ ಗೃಹಿಣಿಯಾದವಳು ಹೇಗಿರಬೇಕೆಂಬುದನ್ನು ಕಣ್ವರ ಮೂಲಕ ಉಪದೇಶಿಸಿ ಈ ಉಪದೇಶಕ್ಕೆ ಹೆಚ್ಚು ಬೆಲೆ ಬರುವಂತೆ ಮಾಡಿದ್ದಾನೆ.

ಹೆಣ್ಣಿನ ಜವಾಬ್ದಾರಿಯನ್ನು ತಿಳಿಸಿದ ನಾಟಕಕಾರನು ಅವಳನ್ನು ಅವಳ ಗಂಡನು ನೋಡಿಕೊಳ್ಳಬೇಕಾದ ರೀತಿಯನ್ನು ತಿಳಿಸಲು ಮರೆತಿಲ್ಲ. ಹೆಣ್ಣಿಗೆ ಕೇವಲ ಊಟ ಬಟ್ಟೆ ಕೊಟ್ಟರೆ

ತೀರಲಿಲ್ಲ. ಅವಳಿಗೂ ಹೃದಯವಿದೆ, ಆತ್ಮವಿದೆ, ಅವಳಿಗೂ ತನ್ನದೇ ಆದ ವ್ಯಕ್ತಿತ್ವವಿದೆಯೆಂಬುದನ್ನರಿತು 'ಬಾಳಿಸ'ಬೇಕು ಎಂದು ಹೇಳುವ ನಾಟಕಕಾರನ ಲೌಕಿಕ ಪ್ರಜ್ಞೆ ಮೆಚ್ಚತಕ್ಕದ್ದು. ಕಾಳಿದಾಸನ ಸೃಷ್ಟಿ ಏಕಮುಖವಲ್ಲದೆಂಬುದನ್ನಿಲ್ಲಿ ಅರಿಯಬಹುದು. ಭಾರತದಲ್ಲಿ ಹೆಣ್ಣು ಹೆತ್ತವರ ಕಷ್ಟ ಹೆತ್ತವರಿಗೇ ವೇದ್ಯ. 'ಹೆಣ್ಣು ಹುಟ್ಟಿದರೆ ಹುಣ್ಣು ಹುಟ್ಟಿದಂತೆ' ಎನ್ನುವಷ್ಟು. ಈ ಕಷ್ಟದ ವಿಸ್ತಾರ ರಾಜನಾಗಿರಲಿ ಋಷಿಯಾಗಿರಲಿ ಮಗಳಿದ್ದರೆ ತೀರಿತು! ಅಳಿಯನೆದುರಿಗೆ ಎಲ್ಲರೂ ಅಸಹಾಯಕರೆ! ಕಣ್ವ ಗುರುವಾಗಿ ದುಷ್ಯಂತ ಮಹಾರಾಜನಿಗೆ ಆಶೀರ್ವದಿಸುವ ಸಾಮರ್ಥ್ಯ ಪಡೆದಿದ್ದರೂ ಶಕುಂತಲೆಯ ತಂದೆಯಾಗಿ ಅವನ ಪರಿಸ್ಥಿತಿ ಸಂದಿಗ್ಧ. ಇನ್ನಿಂತರಿಂ ಪೆರತಲಂ ಬಗೆಯಲ್ಕದಂ ನುಡಿವುದಲ್ಲಂ ದಲ್ ವಧೂ ಬಂಧುಗಳ್. ಮಗಳನ್ನು ಎಷ್ಟೇ ಪ್ರೀತಿಯಿಂದ ಸಾಕಿದ್ದರೂ ಹೆಚ್ಚು ಹೇಳುವಂತಿಲ್ಲ. ಹೀಗೆ ಕಾಳಿದಾಸ ಹೆಣ್ಣು ಹೆತ್ತವರ ಸಂಕೋಚ ಸಂಕಷ್ಟಗಳನ್ನು ಮನಮುಟ್ಟುವಂತೆ ಚಿತ್ರಿಸಿದ್ದಾನೆ.

ಮಗಳ ಬಗ್ಗೆ ಅಪಾರವಾದ ಪ್ರೀತಿ ಮಮತೆಗಳಿದ್ದರೂ ಯಾವ ತಂದೆತಾಯಂದಿರೂ, ಶಾಶ್ವತವಾಗಿ ಮಗಳು ತೌರಿನಲ್ಲಿಯೇ ಅವಿವಾಹಿತಳಾಗಿರಲೆಂದು ಬಯಸುವುದಿಲ್ಲ. ಅಂತೂ ದುಷ್ಯಂತನ ಹೆಸರುಳ್ಳ ಉಂಗುರ ಶಕುಂತಲೆಯ ಬೆರಳನ್ನು ಸೇರಿತು. ವಿಚಿತ್ರವೆಂದರೆ ಪ್ರೇಮದ ಸಂಕೇತವಾಗಿ ಶಕುಂತಲೆಗೆ ಪುಷ್ಟಿ ತುಷ್ಟಿಗಳನ್ನು ಕೊಡಬೇಕಾಗಿದ್ದ ಉಂಗುರದ ದೆಸೆಯಿಂದ ಶಕುಂತಲೆಗೆ ಒದಗಿದ ಅವಸ್ಥೆಯನ್ನು ಕಂಡಾಗ ಓದುಗರಿಗೆ ಕಳವಳವಾಗದಿರಲಾರದು. ಈ ಘಟ್ಟದಲ್ಲಿಯೇ ಕಾಳಿದಾಸನು ಉಂಗುರಕ್ಕೂ ಶಾಪಕ್ಕೂ ಸಂಬಂಧವನ್ನು ಕಲ್ಪಿಸಿದ್ದಾನೆನ್ನಬಹುದು. ದುಷ್ಯಂತ ರಾಜಧಾನಿಗೆ ಹಿಂದಿರುಗುವಾಗ ಶಕುಂತಲೆಗೆ ಮುದ್ರೆಯುಂಗುರವನ್ನು ಕೊಟ್ಟು,

ಅನುದಿನವೊಂದಾಗೆಣಿ
ಸಿನಿಯಳೆ ಮನ್ನಾಮದಕ್ಷರಂಗಳ ಕೊನೆಸಾ
ರ್ವನಿತರೊಳಿರ್ಕುಂ ನಿನ್ನಯ
ಸನಿಯದೊಳೆನ್ನಂತಪುರವನೊಂದಿಪ್ಪಜನಂ(ಆರನೆ ಅಂಕ)

ಎಂಬ ಭರವಸೆಯನ್ನು ಕೊಟ್ಟು ಹೊರಟುಹೋದ. ಅವನ ಭರವಸೆಯನ್ನೇ ಮೆಲುಕು ಹಾಕಿಕೊಳ್ಳುತ್ತ ಅವನ ಧ್ಯಾನದಲ್ಲಿಯೇ ಮೈಮರೆತ ಶಕುಂತಲೆಗೊದಗಿದ ಪ್ರೇಮ ಕಾಣಿಕೆ ಅದೆಷ್ಟು ರೌದ್ರಮಯವಾದುದು!

"ನೀನಾವನ ಚಿಂತಿಸುತೆತ
ಪೋನಿಧಿಯಾದೆನ್ನನರಿಯದಾದೆಯೋ ನಿನ್ನಂ
ಏನರಿಪಿದೊಡಂ ಸ್ಮರಿಸಂ ತಾ
ನಾತಂ ಮುನ್ನಗೈದುದಂ ಮರುಳನವೋಲ್"[೬೮]

ದೂರ್ವಾಸರ ಶಾಪದ ಗುಡುಗು ಇಡೀ ನಾಟಕವನ್ನೇ ನಡುಗಿಸುತ್ತದೆ. ಶಕುಂತಲೆಯ ಸಖಿಯರೂ ತತ್ತರಿಸುತ್ತಾರೆ. ಆದರೆ ದೂರ್ವಾಸನು "ನಮ್ಮ ವಚನವು ತಪ್ಪತಕ್ಕುದಲ್ಲ. ಆದರೆ

ಅಭಿಜ್ಞಾನಾಭರಣ ದರ್ಶನದಿಂದ ಶಾಪ ವಿಮೋಚನೆಯಾಗುವುದು" ಎಂಬ ಮಾತು ಅವರಿಗೆ ಸಮಾಧಾನವನ್ನು ತಂದಿದೆ. "ಈಗ ನೆಮ್ಮದಿಯಾಯಿತು. ಆ ರಾಜರ್ಷಿಯು ಪಟ್ಟಣಕ್ಕೆ ಹೊರಡುವಾಗ ತಮ್ಮ ನಾಮಾಂಕಿತವಾದ ಮುದ್ರಿಕೆಯ ಸ್ಮರಣೆಯನ್ನುಂಟು ಮಾಡತಕ್ಕದೆಂದು ತಾನೇ ಶಕುಂತಲೆಯ ಬೆರಳಿಗಿಟ್ಟು ಹೋದನು. ಅದರಿಂದ ಶಕುಂತಲೆಗೆ ಉಪಾಯವೂ ಸ್ವಾಧೀನವಾಗಿರುವುದು" ಅನಸೂಯೆಯ ಈ ಮಾತಿನೊಂದಿಗೆ ನಾವು ಸಮಾಧಾನದ ಉಸಿರೆಳೇಯುತ್ತೇವೆ. ನಿಜ; ಆದರೆ "ಎಲೆ ಸಖಿ ಆ ರಾಜನು ನಿನ್ನನ್ನು ಮರೆತಿದ್ದುದೇ ಆದರೆ ಆತನಿಗೆ ಅವನ ನಾಮಾಂಕಿತವಾದ ಈ ಉಂಗುರವನ್ನು ತೋರಿಸು." ಸಖಿಯರ ಈ ಅನುಮಾನ ಮುಂದಿನ ದುರಂತ ಸೂಚಕವಾಗಿದೆ.

ಐದನೆಯ ಅಂಕದಲ್ಲಿ ಶಕುಂತಲೆ ತನ್ನ ಪರಿಚಯವನ್ನೂ ದುಷ್ಯಂತನೊಂದಿಗೆ ತನಗಿರುವ ಸಂಬಂಧವನ್ನೂ ಸ್ಥಾಪಿಸಿಕೊಳ್ಳಲು ಸಹಜವಾಗಿ ತನ್ನ ಕೈಬರೆಳನ್ನು ನೋಡಿಕೊಂಡಾಗ ಅಭಿಜ್ಞಾನ ರಹಿತವಾದ ಅವಳ ಬೆರಳನ್ನು ಕಂಡು ಹಾವು ಮೆಟ್ಟಿದಂತವರಾಗುತ್ತೇವೆ. ಅವಳಾದರೋ ಎಂತಹ ಮಾತುಗಳನ್ನು ಕೇಳಬೇಕಾಯಿತು. "ಸ್ತ್ರೀಯರು, ಸಮಯಕ್ಕೆ ತಕ್ಕ ಬುದ್ಧಿಯುಳ್ಳವರೆಂಬುದು ಸುಳ್ಳಲ್ಲ." ಎಂತಹ ಮುಗ್ಧ ಪ್ರೀತಿಗೆ ಎಂತಹ ಉಡುಗೊರೆ, ಮುದ್ರೆಯುಂಗುರದ ಮೇಲೆ ರೌದ್ರಮುದ್ರೆ! ಪರಿಣಾಮ ರುದ್ರರಮಣೀಯ. ಇಂತಹ ಪರಿಣಾಮ ರಮಣೀಯತೆಯನ್ನು ಸಾಧಿಸುವುದೇ ಕಾಳಿದಾಸನ ಹಿರಿಮೆಯಾಗಿದೆ. ಅಂತೂ ಉಂಗುರ ಸಮಯಕ್ಕೊದಗಲಿಲ್ಲ. ಒದಗಲು ಸಾಧ್ಯವಿಲ್ಲ. ಒದಗಿದರೆ ದೂರ್ವಾಸನ ಶಾಪದ ಗತಿ? ದೂರ್ವಾಸನ ಶಾಪದ ಆರೋಹಣವೇನೋ ಆಯಿತು. ಅಲ್ಲಿಯೇ ನಿಂತು ಬಿಟ್ಟರೆ? ಆರೋಹಣಕ್ಕೆ ಅವರೋಹಣವೂ ಇರಲೇ ಬೇಕಲ್ಲ! ಐದು ಆರನೆಯ ಅಂಕಗಳ ಮಧ್ಯದ ಪ್ರವೇಶಕ್ಕೆ ಈ ಅವರೋಹಣ ಕ್ರಿಯೆಯು ದೂರ್ವಾಸನ ಶಾಪದ ತಾಪ ಸಂಬಂಧ ಪಟ್ಟವರಿಬ್ಬರನ್ನೂ ತಟ್ಟದೆ, ಬೇಯಿಸಿದೆ, ಪಕ್ವಗೊಳಿಸಿದೆ. ಆರನೆಯ ಅಂಕದ ದುಷ್ಯಂತನ ಚಿತ್ತ, ಮಾರೀಚಾಶ್ರಮದ ದೀಕ್ಷಾಬದ್ಧ ಶಕುಂತಲೆಯ ಚಿತ್ರಗಳು ಈ ಮಾತಿಗೆ ಸಾಕ್ಷಿಯಾಗಿದೆ.

ಪುನಃ ಉಂಗುರ ಸೌಮ್ಯಮುದ್ರೆಯನ್ನು ಪಡೆದುಕೊಳ್ಳಲೇ ಬೇಕು. ಇಲ್ಲದಿದ್ದರೆ ಉಂಗುರದ ಬಗ್ಗೆಯೇ ಭಯ ಮೂಡಿತು. ಇದರ ಫಲವೇ ಮಾರೀಚಾಶ್ರಮದಲ್ಲಾಗುವ ದುಷ್ಯಂತ ಶಕುಂತಲೆಯರ ಪುನರ್‌ಸ್ಸಮಾಗಮ ಮತ್ತೊಮ್ಮೆ ದುಷ್ಯಂತನು ಶಕುಂತಳೆಗೆ ತನ್ನ ಮುದ್ರೆಯುಂಗುರವನ್ನು ಕೊಡಲು ಪ್ರಯತ್ನಿಸುತ್ತಾನೆ. "ಪುನಶ್ಚ ಋತುಸಂಬಂಧಕ್ಕೆ ಗುರುತಾಗಿ ಬಳ್ಳಿಯು ಕುಸುಮವನ್ನು ಪಡೆದಂತೆ ನೀನು ಈ ಉಂಗುರವನ್ನು ಧರಿಸಿಕೊ". ದುಷ್ಯಂತನ ಈ ಮಾತಿಗೆ ಪ್ರತಿಯಾಗಿ ಶಕುಂತಲೆ "ಇದರಲ್ಲಿ ನನಗೆ ವಿಶ್ವಾಸವಿಲ್ಲ ಆರ್ಯಪುತ್ರನೇ ಇದನ್ನು ಧರಿಸಲಿ" ಎನ್ನುತ್ತಾಳೆ. ಶಕುಂತಲೆಯ ಈ ಮಾತನ್ನು ಮತ್ತು ನಾಟಕದ ಮೊದಲ ಅಂಕದಲ್ಲಿ ಪ್ರಿಯಂವದೆಯು ಆಡಿದ "ಹಾಗಾದರೆ ಈ ಉಂಗುರವು ಆರ್ಯನ ಅಂಗುಲಿಯನ್ನು ಅಗಲಕೂಡದು" ಎಂಬ ಮಾತನ್ನು ವಿಶೇಷವಾಗಿ ಪರಿಶೀಲಿಸಿ ಸುಜನಾ ಅವರು ಈ ರೀತಿ ಅಭಿಪ್ರಾಯ ಪಟ್ಟಿದ್ದಾರೆ. ಯಾವಾಗ ಶಕುಂತಲೆ ಆ ಉಂಗುರ ಆರ್ಯಪುತ್ರನ, ಬೆರಳನ್ನು ಅಲಂಕರಿಸಿರಲಿ ಎಂದಳೋ ಅಂದೆ ದುಷ್ಯಂತನ ಪ್ರಣಯ ಜೀವನ

ಅನ್ಯಾಪೇಕ್ಷಿಯಾಗಿ ಬೇರಡೆ ಹರಿದಂತಾಯಿತು. ಅದು ಅವನ ಕಾಮಜೀವನದ 'ಕಾಮ' ಮಾತ್ರವಾಗದೆ ಪೂರ್ಣವಿರಾಮವಾಯಿತು. ದುಷ್ಯಂತ ತನ್ನ ಇಡೀ ಬಾಳಿನಲ್ಲಿ ಮತ್ತೆಂದೂ ಆ ಉಂಗುರವನ್ನು ಅಗಲಿರಲಾರ, ಮತ್ತಾರಿಗೂ ಕೊಟ್ಟಿರಲಾರ, ಮತ್ತಾರ್‍ಯಾನು ನೆನದಿರಲಾರ ಎಂದು ಹೇಳಬಹುದು.

ದುಷ್ಯಂತನು ಇಂತಹ ತೀಕ್ಷ್ಣವಾದ ಮೊನಚಾದ ವಿಮರ್ಶೆಗೊಳಗಾಗುವಷ್ಟು ಕಾಮುಕನೇ? ಕೇವಲ ಕಾಮವೇ ಅವನ ವ್ಯಕ್ತಿತ್ವದ ಗುರುತ್ವಾಕರ್ಷಣ ಕೇಂದ್ರವಾಗಿದ್ದಲ್ಲಿ ತಾನಾಗಿ ಹೆಂಡತಿಯೆಂದು ಹೇಳಿಕೊಂಡು ಬಂದ ಅಪೂರ್ವ ಸೌಂದರ್ಯ ರಾಶಿಯನ್ನು ತಿಸ್ಕರಿಸುತ್ತಿದ್ದನೇ? ವಸಂತೋತ್ಸವವನ್ನು ರದ್ದುಗೊಳಿಸುವಷ್ಟು, ಧರ್ಮಾಸನದ ಮೇಲೆ ಕುಳ್ಳಿರಲಾಗದಷ್ಟು ಪರಿತಪ್ತ ಕರ್ತವ್ಯನಿಷ್ಠನಾಗಿರುವುದು ಕಾಮಿಯೊಬ್ಬನಿಗೆ ಸಾಧ್ಯವಾಗಬಲ್ಲುದೆ? ಎಂಬ ಪ್ರಶ್ನೆಗಳು ಓದುಗರನ್ನು ಕಾಡುತ್ತಿರುತ್ತವೆ.

ಶಕುಂತಲೆಯ ಮಾತಿಗೆ ಇಷ್ಟೊಂದು ವಿಪರೀತ ಅರ್ಥ ಕಲ್ಪಿಸುವ ಅಗತ್ಯವಿಲ್ಲ. ಉಂಗುರದ ಅವಾಂತರದಿಂದ ಕಳವಳಗೊಂಡ ಭೀತ ಹೃದಯದ ಪ್ರತಿಕ್ರಿಯೆಯು ದುಷ್ಯಂತನನ್ನು ಶಂಕಿಸುವಷ್ಟು ದೂರ ಅವನನ್ನು ಒಂದು ಬಂಧನಕ್ಕೊಳಪಡಿಸುವಷ್ಟು ದೂರ ಒಯ್ಯುವುದು ಉಚಿತವಾಗಲಾರದು. ಉಂಗುರ ದುಷ್ಯಂತನ ಬೆರಳಲ್ಲಿದ್ದ ಕ್ಷಣ 'ಮತ್ತಾರನ್ನು ನೆನೆದಿರಲಾರ' ಎಂದ ಮಾತ್ರಕ್ಕೆ ಒಂದು ವೇಳೆ ದುಷ್ಯಂತನು ನಿಜವಾಗಿಯೂ ಅಂತಹ ಚಪಲ ಚಿತ್ತ, ಕಾಮಿಯಾಗಿದ್ದಲ್ಲಿ, ತನ್ನ ಇಷ್ಟಾರ್ಥಗಳನ್ನು ಈಡೇರಿಸಿಕೊಳ್ಳಲಾಗುತ್ತಿರಲಿಲ್ಲವೇ? ಎಂಬ ಪ್ರಶ್ನೆಯು ಸಹ ಕಾಡುತ್ತದೆ. ಅಂತೂ ಸುಜನಾ ಅವರ ವಿಮರ್ಶೆ ವಿಚಾರವಂತರಿಗೊಂದು ಸವಾಲು. ಒಪ್ಪಿಕೊಳ್ಳುವುದೂ ಪರಿಶೀಲಿಸುವುದೂ ಅಭಿಪ್ರಾಯದ ಮಾತು. ಪ್ರೇಮದ ಸಂಕೇತವಾದ ಉಂಗುರವನ್ನು ಪ್ರತಿಮೆಯನ್ನಾಗಿ ಬಳಸಿಕೊಂಡು ಪ್ರೇಮದ ಹಿರಿಮೆಯನ್ನು ಯಶಸ್ವಿಯಾಗಿ ಅಭಿಜ್ಞಾನ ಶಾಕುಂತಲದಲ್ಲಿ ಸಾರಿದ್ದಾನೆ. ಕಾಳಿದಾಸ ನಾಟಕಕ್ಕೆ ಬರಿ **'ಅಭಿಜ್ಞಾನ'** ಎಂದಷ್ಟೇ ಹೆಸರಿಟ್ಟಿದ್ದರೂ ಒಪ್ಪುತ್ತಿತ್ತು. ಸುಜನಾ ಅವರ ಈ ಮಾತು ನಾಟಕದಲ್ಲಿ ಅಭಿಜ್ಞಾನಕ್ಕೆ ಕುಂದಣವಿಟ್ಟಂತೆ ಹಾಗುತ್ತದೆ.

ಶೀರ್ಷಿಕೆಯ ಔಚಿತ್ಯ ವಸ್ತುವನ್ನು ಬಳಸಿಕೊಳ್ಳುವುದರಲ್ಲಿ, ಅದನ್ನು ಬೆಳೆಸಿ ನಾಟಕ ನಿರ್ಮಾಣ ಮಾಡುವುದರಲ್ಲಿರುವಷ್ಟೇ ಜಾಣ್ಮೆ ಪ್ರತಿಭೆಗಳು ಇನ್ನೂ ಒಂದು ತೂಕ ಹೆಚ್ಚಾಗಿಯೇ ನಾಟಕಕ್ಕೊಂದು ಅನ್ವರ್ಥವಾದ, ಅರ್ಥಪೂರ್ಣ ಹೆಸರಿಡುವುದರಲ್ಲಿರಬೇಕಾಗುತ್ತದೆ. ನಾಟಕಕ್ಕೆ ಕೊಟ್ಟ ಹೆಸರು ಇಡಿ ನಾಟಕವನ್ನೇ ಪ್ರತಿನಿಧಿಸುವಂತಿರಬೇಕು, ಧ್ವನಿಪೂರ್ಣವಾಗಿರಬೇಕು. ಹೆಸರಿಗೂ ನಾಟಕಕ್ಕೂ ಅನ್ಯೋನ್ಯ ಸಂಬಂಧವಿರಬೇಕು. ನಾಟಕಕ್ಕೆ ಇಡುವ ಹೆಸರು ಮುತ್ತೈದೆಯ ಹಣೆಯಲ್ಲಿ ಕಂಗೊಳಿಸುವ ಕುಂಕುಮದಂತೆ ಸೌಂದರ್ಯಪೂರ್ಣವೂ ಅರ್ಥಗಾಂಭೀರ್ಯದಿಂದಲೂ ಕೂಡಿರಬೇಕು. ಈ ಹಿನ್ನೆಲೆಯಲ್ಲಿ 'ಅಭಿಜ್ಞಾನ ಶಾಕುಂತಲ'ದ ಹೆಸರಿನ ಔಚಿತ್ಯ ಚರ್ಚೆ ನಡೆಸಿದರೆ ನಾಟಕಕಾರನ ಪ್ರತಿಭೆಯ ದರ್ಶನ ಪಡೆಯುವುದರಲ್ಲಿ ಸಂಶಯವೇ ಇಲ್ಲ.

ಅಭಿಜ್ಞಾನ ಶಾಕುಂತಲ ಶೀರ್ಷಿಕೆಯನ್ನು ಎರಡು ಭಾಗವಾಗಿ ವಿಭಜಿಸಿಕೊಂಡು ವಿಶ್ಲೇಷಿಸಬೇಕಾಗುತ್ತದೆ. 'ಅಭಿಜ್ಞಾನ' ನಾಟಕದ ಹೆಸರಿನ ಒಂದು ಭಾಗವಾದರೆ 'ಶಾಕುಂತಲ'

ಮತ್ತೊಂದು ಭಾಗವಾಗುತ್ತದೆ. ಅಭಿಜ್ಞಾನ ಕುರಿತು ಈ ಹಿಂದೆಯೇ ವಿವರವಾಗಿ ಪ್ರಸ್ತಾಪಿಸಿ ನಾಟಕದಲ್ಲಿ ಅಭಿಜ್ಞಾನಕ್ಕಿರುವ ಪ್ರಾಶ್ಯಸ್ತವನ್ನು ಪರಿಶೀಲಿಸಿರುವುದರಿಂದ ಪುನರಾವರ್ತನೆಗೆ ತೊಡಗದೆ ಶೀರ್ಷಿಕೆಯ ಉತ್ತರಾರ್ಧದ ಪರಿಶೀಲನೆಗೆ ತೊಡಗಬಹುದು. 'ಶಕುಂತಲ' ಎಂದರೆ ಒಬ್ಬಳ ಹೆಸರಾಗುತ್ತದೆ. 'ಶಾಕುಂತಲ' ಎಂದರೆ ಶಕುಂತಲೆಗೆ ಸಂಬಂಧಿಸಿದ್ದು(ಶಕುಂತ ಪಕ್ಷಿ ಸಾಕಿದವಳಿಗೆ ಸಂಬಂಧಿಸಿದೆ) ಎಂದರ್ಥವಾಗುತ್ತದೆ. ಅಂದರೆ ನಾಟಕದಲ್ಲಿ ಇತರ ಪಾತ್ರಗಳಷ್ಟೇ ಇದ್ದರೂ ಶಕುಂತಳೆಗೆ ಅಗ್ರಪಟ್ಟ ಇತರ ಪಾತ್ರಗಳು, ಘಟನೆಗಳೇನಿದ್ದರೂ ಶಕುಂತಳೆಗಾಗಿ ಮಾತ್ರ. ಅದು ಹೇಗೆಂದು ವಿವರಿಸಿದರೆ 'ಶಾಕುಂತಲ' ಹೆಸರಿನ ಚರ್ಚೆಯಾದಂತೆಯೇ.

ನಾಟಕದ ಆರಂಭದಿಂದಲೂ ನಾಟಕದ ಉದ್ದಗಲಗಳನ್ನೆಲ್ಲಾ ಶಕುಂತಲೆಯೇ ಆಕ್ರಮಿಸಿಕೊಂಡಿದ್ದಾಳೆ. ಮೊದಲನೇ ಅಂಕದಲ್ಲಿ ದುಷ್ಯಂತ ಬೇಟೆಗೆ ಬಂದಾಗ ಕಾಣಿಸಿಕೊಂಡ ಶಕುಂತಲೆ ನಾಟಕದ ಕೊನೆಯಂಕದಲ್ಲಿ ದುಷ್ಯಂತನೊಂದಿಗೆ ಪುನಸ್ಸಮಾಗಮವಾಗುವವರೆಗೂ ನೋಡುಗರ–ಓದುಗರ ಗಮನವನ್ನು ಸೆಳೆಯುತ್ತಾಳೆ. ಶಕುಂತಲೆಯನ್ನು ಕಂಡ ದುಷ್ಯಂತ ಬೇಟೆಗೆ ಎಳ್ಳು ನೀರು ಬಿಡುವುದಷ್ಟೇ ಅಲ್ಲ, ತನ್ನ ತಾಯಿಯ ಕರೆಯನ್ನು ಮನ್ನಿಸಲಾರದಷ್ಟು ಅವಳಿಂದ ಆಕರ್ಷಿತನಾಗುತ್ತಾನೆ. ಋಷಿಗಳ ಮೇಲಿನ ಗೌರವದಿಂದ ಆಶ್ರಮರಕ್ಷಣೆಗಾಗಿ ಗುರುಜನರ ಆಜ್ಞೆಯನ್ನು ಮೀರಲಾರದೆ ದುಷ್ಯಂತ ಆಶ್ರಮದಲ್ಲಿ ನಿಂತಂತೆ ಕಂಡುಬಂದರೂ ಒಳಗುಟ್ಟು ಶಕುಂತಲೆಯ ಸೌಂದರ್ಯಾಕರ್ಷಣೆಯೆಂದು ಬೇರೆ ಹೇಳಬೇಕೆ? ಬಳಿಕ ಕಣ್ವರು ಸೋಮತೀರ್ಥಕ್ಕೆ ಹೋಗಿರುವುದೂ ಸಹ ಶಕುಂತಲೆಯ "ಪ್ರತಿಕೂಲ ದೈವ ಶಮನಾರ್ಥ"ವಾಗಿ. ಈ ಮಧ್ಯೆ ಬರುವ ಅವಳ ಸಖಿಯರಾದ ಅನಸೂಯೆ, ಪ್ರಿಯಂವದೆಯರ ಪಾತ್ರಗಳೂ ಸಹ ಶಕುಂತಲೆಯ ಪಾತ್ರ ಪರಿಪೋಷಣೆಗಾಗಿಯೇ. ವಿಶಾಖನಕ್ಷತ್ರಗಳು ಚಂದ್ರನನ್ನು ಅನುಸರಿಸುವಂತೆ ಶಕುಂತಲೆಯನ್ನು ಅನುಸರಿಸುವವರು ಅವರು. ಮಾವಿನ ಮರವನ್ನಾಶ್ರಯಿಸಿದ ಮಲ್ಲಿಗೆಯ ಬಳ್ಳಿಯ ಬಳಿ ನಿಂತ ಶಕುಂತಲೆಯ ಮನೋಗತವನ್ನು ಅವಳ ಗೆಳತಿಯರು ಪ್ರತಿಬಿಂಬಿಸುತ್ತಾರೆಯೇ ಹೊರತು, ಶಕುಂತಲೆಯ ವಿವಾಹದ ಬಗ್ಗೆ, ಅವಳ ಭವಿಷ್ಯದ ಬಗ್ಗೆ, ಪ್ರಸ್ತಾಪ ಅವರ ಮಾತಿನಲ್ಲಿದೆಯೇ ಹೊರತು, ಅವರ ಸ್ವಂತ ವಿಷಯದ ಸುಳಿವಿಲ್ಲ. ಒಟ್ಟಿನಲ್ಲಿ ಶಕುಂತಲೆಗಾಗಿ ಅನಸೂಯೆ ಪ್ರಿಯಂವದೆಯರು(ಶಕುಂತಲೆಯ ಪ್ರಾಮುಖ್ಯತೆಯ ದೃಷ್ಟಿಯಿಂದ ಮಾತ್ರ, ಸ್ನೇಹದ ದೃಷ್ಟಿಯಿಂದಲ್ಲ.). ಅನಂತರ ಮೂರನೇ ಅಂಕದಲ್ಲಿ ಶಕುಂತಲೆಯ ವಿರಹವ್ಯಥೆಯ ಕತೆ ತುಂಬಿಕೊಂಡಿದೆ. ದುಷ್ಯಂತನ ವಿರಹದ ಪ್ರಸ್ತಾಪವಿದ್ದರೂ ಶಕುಂತಲೆಯೊಂದಿಗೆ ಹೋಲಿಸಿದಾಗ ಗೌಣವೆನ್ನಿಸುತ್ತದೆ.

ಇನ್ನೂ ನಾಲ್ಕನೆಯ ಅಂಕವಂತೂ ಶಕುಂತಲೆಗೇ ಮೀಸಲು. ಈ ಅಂಕದ ತುಂಬಾ ಎಲ್ಲೆಲ್ಲಿ ನೋಡಿದರೂ ಶಕುಂತಲೆಯ ವಿಷಯವೆ! ಅವಳು ಸಾಕಿ ಸಲಹಿದ ಗಿಡಬಳ್ಳಿಗಳ ವಿಷಯ. ಅವಳು ಜೋಪಾನ ಮಾಡಿದ ಜಿಂಕೆಯ ಮರಿಯ ವಿಷಯ, ಅವಳು ಮದುವೆ ಮಾಡಿಸಿದ ಮಲ್ಲಿಕಾಲಿತೆಯ ವಿಷಯಗಳೇ ತುಂಬಿವೆ. ಈ ಅಂಕದ ಆರಂಭದಲ್ಲಿ ಅನಸೂಯೆ ಪ್ರಿಯಂವದೆಯರು ದುಷ್ಯಂತನ ಆಗಮನದ ಬಗ್ಗೆ ಚಿಂತಿಸಿ ಕಳವಳ ಪಡುವುದು ಶಕುಂತಳೆಗೋಸ್ಕರ. ದೂರ್ವಾಸ ಶಕುಂತಲೆಗೆ

ಶಾಪವಿತ್ತಾಗ ಅವನ ಕೋಪಶಮನ ಮಾಡುವುದೂ ಶಕುಂತಲೆಗೋಸ್ಕರ. ಗಿಡಮರಗಳು ವಸ್ತ್ರಾಭರಣಗಳನ್ನು ನೀಡುವುದು ಶಕುಂತಲೆಗೋಸ್ಕರವೇ. ಶಕುಂತಲೆ ಪತಿಯ ಗೃಹಕ್ಕೆ ಹೊರಟದ್ದಾಳೆಂದು ಮಾರ್ಗವೆಲ್ಲವೂ ತಂಪಾಗಿದೆ.

ಆಶ್ರಮವಾಸಿಗಳೆಲ್ಲರೂ ಶಕುಂತಲೆಯನ್ನು ಹರಸಿ ಬೀಳ್ಕೊಡುವುದು ಮತ್ತೊಂದು ಭಾಗ. ಆಶ್ರಮವಾಸಿಗಳೆಲ್ಲರ ಹರಕೆ ಆಶೀರ್ವಾದಗಳು ಶಕುಂತಲೆಗಾಗಿ. ಇನ್ನು ಜಗತ್ಪ್ರಸಿದ್ಧವಾದ ಕಣ್ವರ ಉಪದೇಶ, ಬುದ್ಧಿವಾದ ವರರೂಪವಾದ ಆಶೀರ್ವಾದಗಳು ಶಕುಂತಲೆಯು ನಡೆಯಬೇಕಾಗಿರುವ ಹಾದಿ ಸುಗಮವಾಗಲೆಂದು. ಶಕುಂತಲೆಯ ಅಗಲುವಿಕೆಯ ತಾಪ ತಟ್ಟದವರಾರೂ ಅಲ್ಲಿಲ್ಲ. ನಿರ್ಜೀವವಾದ ಪ್ರಕೃತಿಯೇ ಕಣ್ಣೀರಿಡುವಂತಿತ್ತು ಎಂದ ಬಳಿಕ ಕಣ್ವರ ದುಃಖ ಅವರ್ಣನೀಯ. ಜೀವದ ಸಖಿಯರ ದುಃಖವಂತೂ "ಇದನ್ನಂತೂ ನಮ್ಮ ಕೈಗೆ ಕೊಟ್ಟೆ, ನಮ್ಮನ್ನು ನೀನು ಈಗ ಯಾರ ಕೈಗೆ ಕೊಟ್ಟೆ" ಎಂಬ ಮಾತಿನಲ್ಲಿ ಮಡುಗಟ್ಟಿನಿಂತಿದೆ. ಅಂತೆಯೇ ಪತಿ ಸನ್ನಿಧಿಗೆ ಮಗಳನ್ನು ಕಳುಹಿದ ಕಣ್ವರಿಗೆ ಪ್ರಾಪ್ತವಾದ ತೃಪ್ತಿ ಕಂಡುಬರುತ್ತದೆ.

ಐದನೆಯ ಅಂಕದ ದುಷ್ಯಂತನ ಆಸ್ಥಾನದೃಶ್ಯವೂ ಶಕುಂತಲೆಗಾಗಿಯೇ. ಈ ಅಂಕದ ತುಂಬ ಶಕುಂತಲೆಯ ಕರುಣ ಕತೆಯೇ. ಈ ಅಂಕದ ತುಂಬ ಶಕುಂತಲೆಯ ಕರುಣ ಕತೆಯ ವ್ಯಥೆಯೇ. ಅವಳ ಅಗ್ನಿಪರೀಕ್ಷೆ ಸಹೃದಯರ ಮನವನ್ನು ಕರಗಿಸಿ ನೀರಾಗಿಸುತ್ತದೆ. ಕೊನೆಗೆ ಇವಳಿಗಾಗಿ ಮೇನಕೆಯ ಪ್ರವೇಶವಾಗಬೇಕಾಗುತ್ತದೆ.

ಆರನೆಯ ಅಂಕವನ್ನು ಪರಿಶೀಲಿಸಿದಾಗ ದುಷ್ಯಂತನ ವಿವರವೇ ಹೆಚ್ಚೆಂಬಂತೆ ತೋರಿದರೂ ಒಳಹೊಕ್ಕು ನೋಡಿದಾಗ ಅವನ ಎಲ್ಲ ಬೇಗುದಿಯ ಹಿನ್ನೆಲೆಯಲ್ಲಿ ಶಕುಂತಲೆಯ ಪ್ರಭಾವಳಿಯಿದೆ. ಉಂಗುರ ದೊರೆತ ಮೇಲೆ ದುಷ್ಯಂತ ಪರಿತಪಿಸುವುದು ಶಕುಂತಳೆಗಾಗಿ, ಅವಳಿಗೆ ತನ್ನಿಂದಾದ ಅನ್ಯಾಯಕ್ಕಾಗಿ. ವಸಂತೋತ್ಸವ ರದ್ದಾಗುವಷ್ಟು ದುಷ್ಯಂತನ ಮೇಲೆ ಶಕುಂತಳೆಯ ಪರಿಣಾಮ. ಅವಳ ಚಿಂತೆಯಲ್ಲಿ ಮುಳುಗಿ ಮಾನಸಿಕ ಸ್ವಾಸ್ಥ್ಯವನ್ನು ಕಳೆದುಕೊಂಡಿರುವ ದುಷ್ಯಂತ ಧರ್ಮಾದ ಮೇಲೆ ಮಂಡಿಸಲಾರದಷ್ಟು ತಪ್ತ.

ಕೊನೆಯಂಕದಲ್ಲಿ ಮಾರೀಚಾಶ್ರಮದಲ್ಲಿ ಶಕುಂತಲೆ ಇರುವುದರಿಂದಲೇ, ಇಂದ್ರಲೊಕಕ್ಕೆ ಹೋಗುವಾಗ ನೋಡಲಾಗದ ದೃಶ್ಯಗಳನ್ನು ಹಿಂದಿರುಗುವಾಗ ನೋಡುವ ನೆಪದಲ್ಲಿ ಮಾರೀಚಾಶ್ರಮಕ್ಕೆ ಆಗಮಿಸಿ ದುಷ್ಯಂತ ಶಕುಂತಲೆಯನ್ನು ಸಂಧಿಸುತ್ತಾನೆ.

ಹೀಗೆ ನಾಟಕದ ಆದಿಯಿಂದ ಅಂತ್ಯದವರೆಗೂ ಶಕುಂತಲೆಯೇ ಆವರಿಸಿಕೊಂಡಿದ್ದಾಳೆ. ಉಳಿದ ಪಾತ್ರಗಳೇನಿದ್ದರೂ ಮಲ್ಲಿಗೆಯ ಮಾಲೆಯಲ್ಲಿನ ಹಸಿರೆಲೆಗಳಂತೆ ಮಾತ್ರ. ಇಷ್ಟು ವ್ಯಾಪಕವಾಗಿ ನಾಟಕವನ್ನೆಲ್ಲ ಆವರಿಸಿಕೊಂಡಿರುವ ಶಕುಂತಲೆ ಅಷ್ಟೊಂದು ಪ್ರಾಮುಖ್ಯತೆಗೆ ಅರ್ಹಳೇ ಎಂಬುದು. ಈ ದೃಷ್ಟಿಯಿಂದ ನೋಡಿದಾಗ ಚಕ್ರವರ್ತಿಯಾದ ದುಷ್ಯಂತನನ್ನೂ ಮೂಲೆಗೊತ್ತಿ ಕಂಗೊಳಿಸುತ್ತದೆ. ಶಕುಂತಲೆಯದು ಅಚ್ಚಳಿಯದ ವ್ಯಕ್ತಿತ್ವವಾಗಿದೆ.

ಮೂಲ ಕತೆಯಲ್ಲಿ ಶಕುಂತಲೆಯ ರೀತಿ ನೀತಿ, ವರ್ತನೆಗಳನ್ನು 'ಅಭಿಜ್ಞಾನ ಶಾಕುಂತಲದ'ದ ಶಕುಂತಲೆಯೊಂದಿಗೆ ತೌಲನಿಕವಾಗಿ ನೋಡಿದರೆ ಗೊತ್ತಾಗುತ್ತದೆ. ಕಾಳಿದಾಸ ತನ್ನ ನಾಟಕಕ್ಕೆ ಶಕುಂತಲೆಯನ್ನು ಒಳಗೊಳ್ಳುವಂತಹ ಹೆಸರಿಟ್ಟುದುದರ ಔಚಿತ್ಯ ಅರ್ಥವಾಗುತ್ತದೆ. ಈ ಕಾರಣಗಳಿಂದ 'ಶಾಕುಂತಲ' ಎಂದರೆ 'ಶಕುಂತಲೆಗೆ ಸಂಬಂಧಿಸಿದ' ಎಂಬ ವಿವರಣೆಯನ್ನು ಅಂಗೀಕರಿಸಲು ಯಾವ ಬಾಧಕವೂ ಉಳಿಯದು. ಆದುದರಿಂದ ಅಭಿಜ್ಞಾನ ಶಾಕುಂತಲ ಎಂಬ ಹೆಸರು ಎಲ್ಲ ದೃಷ್ಟಿಯಿಂದಲೂ ಸೂಕ್ತವಾದ ಹೆಸರಾಗಿದೆ.

ಮೇಲೆ ವಿವರಿಸಿದ ವಿವಿಧ ದೃಷ್ಟಿಕೋನಗಳಿಂದ 'ಅಭಿಜ್ಞಾನ ಶಾಕುಂತಲ'ವನ್ನು ಅವಲೋಕಿಸಿದಾಗ ನಾಟಕದ ಬಗ್ಗೆ ಸಮಗ್ರವಲ್ಲದಿದ್ದರೂ, ಒಂದು ನಿರ್ದಿಷ್ಟ ಚಿತ್ರ ಮೂಡುತ್ತದೆ. 'ಕಾವ್ಯಗಳಲ್ಲೆಲ್ಲಾ ನಾಟಕ ರಮ್ಯ, ಅದರಲ್ಲೂ ಶಾಕುಂತಲ' ಎಂಬ ಹೇಳಿಕೆಯು ಯಥಾರ್ಥವಾಗುತ್ತದೆ. ಇದಕ್ಕೆ ಪೂರಕವಾಗಿ ಕಾಳಿದಾಸನ ಸನ್ನಿವೇಶ ನಿರ್ಮಾಣ ಕೌಶಲ್ಯ ಅವನ ಸಂಭಾಷಣೆಯ ಪರಿಣಾಮಗಳನ್ನು ಸೂಕ್ಷ್ಮವಾಗಿ ನೋಡಬಹುದು. ಶಕುಂತಲೆಯ ಎದುರಿಗೆ ದುಷ್ಯಂತನ ಪ್ರವೇಶವಾಗಲು ಕಾಳಿದಾಸನು ನಿರ್ಮಾಣ ಮಾಡಿಕೊಂಡಿರುವ ಸನ್ನಿವೇಶ ಒಂದು ಚಿಕ್ಕ ನಿದರ್ಶನ. ದುಷ್ಯಂತನನ್ನೇ ನೋಡುವ ಆಸೆಯಿಂದ, ಗೋರಂಟಿಗೆ ಸೆರಗು ಸಿಕ್ಕಿತೆಂದು ನಿಲ್ಲುವ ಶಕುಂತಲೆಯು ಕುಂಟುನೆಪವೊಡ್ಡುವುದು ಮತ್ತೊಂದು ರಮ್ಯ ಸನ್ನಿವೇಶ.

"ರಸಭಾವಗಳಿಂದ ತುಂಬಿ ತುಳುಕುವ ಸಂಭಾಷಣೆಯ ಜಾಲವೇ ನಾಟಕ ಸೃಷ್ಟಿ" ಎಂಬ ಹೇಳಿಕೆಯನ್ನು ಶಕುಂತಲೆಯ ಸಖಿಯರು ಹೇಳುವ "ಇದನ್ನಂತೂ ನಮ್ಮ ಕೈಗೆ ಕೊಟ್ಟೆ. ನಮ್ಮನ್ನು ನೀನು ಈಗ ಯಾರ ಕೈಗೆ ಕೊಟ್ಟೆ?" ಇಂತಹ ಮಾತುಗಳು ಪುಷ್ಟಿಕರಿಸುತ್ತವೆ. ಇನ್ನು ಕಾಳಿದಾಸನ ಪಾತ್ರಗಳಲ್ಲಿರುವ ವೈವಿಧ್ಯತೆಯನ್ನು ಹಿಂದೆಯೇ ಪ್ರಸ್ತಾಪಿಸಿದೆ. ಒಟ್ಟಿನಲ್ಲಿ ಕಾಳಿದಾಸನೊಬ್ಬ ಪ್ರಥಮ ದರ್ಜೆಯ ನಾಟಕಕಾರನೆಂಬುದರಲ್ಲಿ ಸಂದೇಹವಿಲ್ಲ. ಓದಿದಂತೆಲ್ಲಾ ಮತ್ತೆ ಮತ್ತೆ ಓದಿಸಿಕೊಳ್ಳುವ ಅರ್ಥ ಮಾಡಿದಷ್ಟು ಇನ್ನು ಅರ್ಥೈಸಬೇಕಾದ್ದು ಇದೆ ಎನ್ನುವ ಕೊರತೆಯನ್ನು ಸಹೃದಯರ, ವಿಮರ್ಶಕರ ಮನದಲ್ಲಿ ಮೂಡಿಸಬಲ್ಲ ನಾಟಕ 'ಅಭಿಜ್ಞಾನ ಶಾಕುಂತಲ.' ಮಗಳನ್ನು ಗಂಡನ ಮನೆಗೆ ಕಳುಹಿಸುವಾಗ ಅವರ ಜವಾಬ್ದಾರಿ ಕಳೆದ, ದೊರಕುವ ತೃಪ್ತಿ ಅನುಭವವೇದ್ಯ.

"ಕನ್ನೆ ಪೆರನೊಡವೆ ಗಂಡ ಪತಿ
ಸನ್ನಿಧಿಗಿಂದವಳ ಕಳುಹಿ ನಿರ್ಮಲವಾದ
ತ್ತೇ ನ್ನಯ ಮಾನಸಮಾದಂ
ತನ್ನಯ ಬಳಿಯಿಟ್ಟೊಡವೆಯ ಮಗುಳಿತ್ತನವೊಲ್"೬

ನಮ್ಮ ಒಡವೆ ಕಳೆದರೆ ದುಃಖವಾಗುತ್ತದೆ ನಿಜ. ಆದರೆ ಇಲ್ಲಿ ವಿಶ್ವಾಸ, ನಂಬಿಕೆ, ಜವಾಬ್ದಾರಿಗಳ ಪ್ರಶ್ನೆಯಿಲ್ಲ. ನಮ್ಮನ್ನು ನೆಚ್ಚಿ ಕೊಟ್ಟವರ ಒಡವೆ ಕಳೆದರೆ? ಅಥವಾ ಅದರ ಮೂಲ ರೂಪದಲ್ಲಿ ವಾರಸುದಾರರಿಗೆ ಹಿಂದಿರುಗಿಸಲು ಪಡೆದವರು ಅಸಮರ್ಥರಾದರೆ? ಒಡವೆ ಹೋದದ್ದು

ಮುಖ್ಯವಲ್ಲ ಒಡವೆಯನ್ನಿಟ್ಟುಕೊಳ್ಳಲು ಇಟ್ಟಿರಬಹುದಾದ ನಂಜಿಕೆ ಮರಳಿ ಮಾಡುವಂತಹುದಲ್ಲ. ಇಷ್ಟೇ ಜವಾಬ್ದಾರಿ ಹೆಣ್ಣನ್ನು ಸೇರಬೇಕಾದ ಸ್ಥಳವನ್ನು ಸೇರಿಸುವ ತನಕ ಹೆತ್ತವರದೂ. ಅವಿವಾಹಿತ ಕನ್ಯೆ ಸಾಲಪತ್ರ, ವಿವಾಹಿತ ಗೃಹಿಣಿ ಸಾಲ ತೀರಿಸಿದ ರಸೀದಿ, ಇಷ್ಟೇ ವ್ಯತ್ಯಾಸ. ಈ ಅಂಕದ ವೈಶಿಷ್ಟ್ಯವನ್ನು ವಿವರಿಸಲು ಜಾನಪದ ಗೀತೆಗಳನ್ನು ಬಳಸಿಕೊಂಡ ಉದ್ದೇಶವಿಷ್ಟೇ. ಜಾನಪದ ಸಾಹಿತ್ಯ ರಚಿಸಬೇಕೆಂದು ಕೂತು ಬರೆದದ್ದಲ್ಲ. ಅನುಭವಜನ್ಯವಾಗಿ, ಜೀವನದ ನಾನಾ ಮುಖಗಳಿಂದ ನೇರವಾಗಿ ಜೀವನದ ನೋವು ನಲಿವುಗಳನ್ನು, ಜೀವನದ ಗತಿಯನ್ನೊಳಗೊಂಡ ಸತ್ಯದ ಆವಿಷ್ಕಾರವಾಗಿ ಕವಿತೆಯ ರೂಪದಲ್ಲಿ ಮೈದೋರಿದ್ದು ಜನಪದ ಸಾಹಿತ್ಯ. ಆದ್ದರಿಂದಲೇ ಈ ಸಾಹಿತ್ಯ ಉಳಿದ ಪಂಡಿತರಿಂದ, ಕವಿಗಳೆಂಬ ಬಿರುದಾಂಕಿತರಿಂದ ರಚಿತವಾದ ಸಾಹಿತ್ಯಕ್ಕಿಂತ ಪ್ರಭಾವಶಾಲಿಯಾಗಿ ಸಹೃದಯರ ಮನವನ್ನು ಮಿಡಿಯಬಲ್ಲುದು. ಪಾಂಡಿತ್ಯವುಳ್ಳ, ಕಾವ್ಯ ರಚಿಸುತಿದ್ದೇವೆಂಬ ಪ್ರಜ್ಞಾಪೂರ್ವಕ ಕವಿಗಳಿಂದ ರಚಿತವಾದುದು ಎಷ್ಟೇ ಶಕ್ತಿಯುತವಾಗಿದ್ದರೂ 'ಕವಿವಾಣಿ ಹೂವು ಜನವಾಣಿ ಬೇರು' ಎಂಬ ಮಾತನ್ನು ಒಪ್ಪಲೇಬೇಕಾಗುತ್ತದೆ. ಕಾಲದ ದೃಷ್ಟಿಯಿಂದ ಕಾಳಿದಾಸ ಮೊದಲಿನವನೇ? ಜನಪದ ಸಾಹಿತ್ಯ ಮೊದಲು ಸೃಷ್ಟಿಯಾಯಿತೇ ಎಂಬ ಪ್ರಶ್ನೆ ಅಪ್ರಸ್ತುತ. ಹೂವಾಗಿರುವ ಕಾಳಿದಾಸನ ಕವಿವಾಣಿ ಬೇರಿನಂತಿರುವ ಜನವಾಣಿ ಬೀರಬಹುದಾದ ಪರಿಣಾಮವನ್ನೇ ಸಾಧಿಸಿದೆಯೆಂಬುದನ್ನು ತೋರಿಸಲು ಜನಪದ ಗೀತೆಗಳನ್ನು ಬಳಸಲಾಗಿದೆ. ಜನಪದ ಸಾಹಿತ್ಯದಲ್ಲಿ ಚಿತ್ರಿತವಾಗಿರುವ ತೌರಿನ ಚಿತ್ರಣ ನಮ್ಮ ಮನವನ್ನು ಹೇಗೆ ಮಿಡಿಯಬಲ್ಲದೋ ಹಾಗೆಯೇ ಕಾಳಿದಾಸನು ಚಿತ್ರಿಸಿರುವ ಶಕುಂತಲೆ ಕಣ್ವಾಶ್ರಮದೊಂದಿಗೆ ಬೆಳೆಸಿಕೊಂಡಿದ್ದ ಅವಿನಾಭಾವ ಸಂಬಂಧ, ಇಡೀ ತಂದೆ ತಾಯಿಯರ ಪ್ರಪಂಚದ ಪ್ರತಿನಿಧಿಯಾಗಿ ಕಣ್ವನು ಶಕುಂತಳೆಗೆ ನೀಡಿರುವ ಉಪದೇಶ, ಮಗಳನ್ನು ಬೀಳ್ಕೊಡುವಾಗ ಅನುಭವಿಸುವ ಅನಿರ್ವಚನೀಯ ಯಾತನೆಗಳು ಕೇವಲ ಅವರಿಬ್ಬರಿಗೇ ಸೀಮಿತವಾಗಿರದೆ ಸೀಮೋಲ್ಲಂಘನ ಮಾಡಿ ಸಾಧಾರಣೀಕರಣಗೊಂಡು ನಮ್ಮನ್ನು ತಮ್ಮತ್ತ ಸೆಳೆದುಕೊಳ್ಳುತ್ತವೆ. ಕಾಳಿದಾಸನ ನಾಟಕ ರಚನೆಯಾಗಿ ಶತಮಾನಗಳೇ ಸಂದಿವೆ. ಇಂದೂ ಅಲ್ಲಿ ಅಭಿವ್ಯಕ್ತವಾಗಿರುವ ಭಾವತರಂಗಗಳು ಅನುರಣಿತಗೊಳ್ಳುತ್ತವೆ. ಅಲ್ಲಿ ಪ್ರತಿಪಾದಿತವಾಗಿರುವ ಮೌಲ್ಯಗಳು ಸವಕಲಾಗದೆ ಇಂದೂ ಉಳಿದಿವೆ.

ಈ ಅಂಕದ ಮತ್ತೊಂದು ವೈಶಿಷ್ಟ್ಯವೆಂದರೆ ಪ್ರಕೃತಿಯನ್ನು ಒಂದು ಸಜೀವ ಪಾತ್ರವಾಗಿ ಚಿತ್ರಿಸಿರುವುದು. ವಿಶೇಷವೆಂದರೆ ಈ ಅಂಕದಲ್ಲಿ ಮೇಲೆ ವಿವರಿಸಿದ ವಿಷಯಗಳೆಲ್ಲವನ್ನು ಅತ್ಯಂತ ಸಂಯಮದಿಂದ, ಕಡಿಮೆ ಮಾತುಗಳಲ್ಲಿ ಹೆಚ್ಚು ಪರಿಣಾಮಕಾರಿಯಾಗಿ ಚಿತ್ರಿಸಿರುವುದು.

**ಅನಭಿಜ್ಞಾನ ಶಾಕುಂತಲ – ಕೆ.ವೈ. ನಾರಾಯಣಸ್ವಾಮಿ**

ತುಂಬುಗರ್ಭಿಣಿಯನ್ನು ಹೊರಗಟ್ಟುವ ದುಷ್ಯಂತನ ಕಥೆ ಕೇಳುತ್ತಿದ್ದ ಗಂಧರ್ವಕನ್ನೆಯ ಮಗ ತಂದೆ ಎಂದು ಅರಿಯದೆ ಕಾಳಿದಾಸನತ್ತ ಕತ್ತಿ ಬೀಸುತ್ತಾನೆ. ಅದು ಕವಿಯ ಸಾವಾಗಿ ಪರಿಣಮಿಸುತ್ತದೆ. ಪ್ರೇಮಕ್ಕಾಗಿ ನೀರಿನೊಳು ಇರಲು ನಿಮಿಷ ಉಂಗುರ ಕರಗಿ ನೀರಾಗಿ ಹೋಯಿತು. ಕೆರೆಯಲ್ಲಿರುವ ಕಾಲ ಮೀನು ಅರೆಸಿದ್ದೆಯಲ್ಲಿದ್ದವು. ಪ್ರೇಮಕ್ಕಾಗಿ ಮಗನನ್ನು ಬಲಿ ಕೊಡಲೋ ಅಥವಾ

ಮಗನಿಗಾಗಿ ಪ್ರೇಮವನ್ನು ಬಲಿ ಕೊಡಲೋ ಅದಕ್ಕಾಗಿ ನಾನು ಮೌನವಾಗಿದ್ದೇನೆ ಎನ್ನುತ್ತಾಳೆ. ಎರಡು ವರ್ಷಗಳ ನಂತರ ಗಂಧರ್ವಕನ್ನೆಯನ್ನು ಕುರಿತು ಅನಭಿಜ್ಞಾನ ಶಾಕುಂತಲ ನಾಟಕವನ್ನು ಬರೆದಿದ್ದಾರೆ. ಇದು ಕೆ.ವೈ. ನಾರಾಯಣಸ್ವಾಮಿಯವರ ಸೃಜನಶೀಲ ನಾಟಕವಾಗಿದೆ.

ಮಧುಮಾಸದ ದುಷ್ಟ ಪರಿಣಾಮದಿಂದ ಗಣಪನನ್ನು ಮರೆತಿದ್ದು
ಕಾಳಿದಾಸನ ಕೊಲೆಯಿಂದ ಪ್ರಾರಂಭ
ಕನ್ನಡಿಯೇ ಮಾಯಾ ಕನ್ನಡಿಯೇ
ದರ್ಪಣವೇ ಮಾಯಾ ದರ್ಪಣವೇ
ದಾತನ ಚಿತ್ರವೇ ವಿಚಿತ್ರವೇ
ಮಾತಿನವೊಳಗಿನ ಲೋಕವೇ ಮಾಯಾಲೋಕವೇ
ಉಸಿರು ಉಸಿರಿನ ಪ್ರಾಣದಂತಹ ಪಾತ್ರವೇ
ಅಪರಾಧಿಯಾದರೂ ಸಾಕ್ಷಿ ಬೇಕು – ನಾಳೆ ಬೆಳಿಗ್ಗೆ ನಿನಗೆ ಗಲ್ಲು,
ಕವಿಯ ಬಳಿ ಇದ್ದ ಉಂಗುರ ನಿನ್ನ ಬಳಿಗೆ ಬಂದಿದು ಹೇಗೆ ಹೇಳು
ಕಣ್ಣುಗಳು ಸಾಕ್ಷಿ ಹೇಳುತ್ತಿದ್ದವು ಅದನ್ನು ನೀನು ಗಮನಿಸಲಿಲ್ಲವೇ
ಮುಸುಕು ದಾರಿಗಳನ್ನು ಹಿಡಿದು ತಂದರು.
೩ ತಿಂಗಳು ಕಳೆದಾಗ ಬರುವೇ ನಿನ್ನ ಕೈ ಬೆರಳಿಗೆ ಉಂಗುರು ಇಡುವೆ, ಇಡುತ್ತಾನೆ.

ಪುನಃ – ನ್ಯಾಯಾಲಯದಲ್ಲಿ ಇನ್ನೊಬ್ಬನನ್ನು ಮದುವೆಯಾಗದೇ ವಿಧಿಯೇ ಇರಲಿಲ್ಲ. ಕಾರಣ ಅ ಗಂಧರ್ವಕನ್ನೆಯನ್ನು ನೋಡಿದ ಮೇಲೆ, ಗಂಧರ್ವಕನ್ನೆ ಮಾತ್ರ ಪ್ರತಿ ಹುಣ್ಣಿಮೆಯೆಂದು ಮಾತ್ರ ಬರುತ್ತಿದ್ದಳು. ಕಾಳಿದಾಸನ ಮನಸ್ಸು ಮಾತ್ರ ಕಾಡಿನಲ್ಲೆಯೇ ಇತ್ತು. ಕಳೆದುಕೊಂಡಿದ್ದನ್ನು ಹುಡುಕಿಕೊಂಡು ಬಂದಿದ್ದೇನೆ. ಕಳೆದುಕೊಂಡಿದ್ದು ಉಜ್ಜನಿಯಲ್ಲಿ, ಕಳೆದು ಹೋದುದು ಮನಸ್ಸು ಎಂದು ರಾಜಕುಮಾರಿ ಕವಿ ಕಾಳಿದಾಸನನ್ನು ಹುಡುಕುತ್ತಾ ವೇಷ ಮರೆಸಿಕೊಂಡು ಬಂದಿದ್ದೇನೆ, ಕಾಳಿದಾಸ ಸತ್ತಿಲ್ಲ, ನಮ್ಮ ಹೃದಯದಲ್ಲಿ ಜೀವಂತವಾಗಿದ್ದಾನೆ.

ಋತುಸಂಹಾರ ಬರೆದ ಕಾಳಿದಾಸನು ನನ್ನ ಹಾಡಿಗೆ ಕಳುಹಿಸಿಕೊಡು ಎಂದು ರಾಜನಲ್ಲಿ ಬೇಡಿಕೊಂಡೆನು. ಗಂಧರ್ವಕನ್ನೆಗೆ ಮನಸೋತು ರಾಜ್ಯವನ್ನೇ ಬೇಡವೆಂದನು. ರಾಜಕುಮಾರಿ ಕಾಳಿದಾಸನನ್ನು ಸೆರೆ ಹಿಡಿಸಿದಳು. ಭೋಜರಾಜನ ಮಗಳು ಗಂಧರ್ವಕನ್ನೆಯನ್ನು ಕೊಲ್ಲುತ್ತೇನೆ. ಆದರೆ ನನ್ನನು ಕೊಂದು ಬಿಡಿ ಪ್ರೀತಿಯನ್ನು ಸಾಯಿಸಿ, ಅಧಿಕಾರದಿಂದ ಅಂತಸ್ತಿನಿಂದಾಗಲಿ ಪ್ರೇಮ ಹುಟ್ಟುವುದಿಲ್ಲ. ಎರಡು ವರ್ಷ ಕಳೆದರು. ವಿರಹದ ಮೇಘದೂತ ಕಾವ್ಯ ಬರೆದ. ನಂತರ ಬಿಡುಗಡೆ ಮಾಡಿದಳು. ಗಂಧರ್ವಕನ್ನೆ ಸಿಗಲಿಲ್ಲದಿದ್ದರೆ, ನಾನು ಇಲ್ಲಿ ಕಾಯುತ್ತಿರುತ್ತೇನೆ. ಪುನಃ ನ್ಯಾಯಾಲಯ ೩ ಜನರ ಪ್ರೀತಿ, ಗಂಧರ್ವಕನ್ನೆಯು ತಾನೇ ಬಂದು ಒಪ್ಪಿ ಕೇಳಿದಳು. ಹಾಡಿಯ ನಾಯಕನ

ಸೊಸೆ ಉಜ್ಜಿನಿಯ ರಾಜರು ಬಂದು ಉತ್ಸವದಲ್ಲಿ ಕಾಳಿದಾಸ ಹಾಡಿದ ಹಾಡಿನಿಂದ ನನಗೆ ಎಲ್ಲಾ ಮರೆತೇ ಹೋಯಿತು. ಹಸುವನ್ನು ಹಿಂಬಾಲಿಸುವ ಕರುವಿನಂತೆ ಹಿಂಬಾಲಿಸಿದೆ. ಆಕಾಶ, ಭೂಮಿ ಒಂದಾದಂತೆಯಾಯಿತು. ಆವಾಗಲೇ ಈ ಉಂಗುರ ಕೊಟ್ಟಿದ್ದು.

ಅಂದು ಬೆಳದಿಂಗಳ ರಾತ್ರಿ, ಅನುಮಾನ ಬಂತು. ಅದರಿಂದ ಕಾಣದಂತೆ ಹಿಂಬಾಲಿಸಿದ. ಅವಳ ಹೊಟ್ಟೆಯಲ್ಲಿರುವ ಕೂಸು ನನ್ನದಲ್ಲ, ಅವಳ ಕೈಯಲ್ಲಿ ಉಂಗುರವಿಲ್ಲ. ಅದು ಕೈ ಜಾರಿಹೋಯಿತು. ನೀರಿಗಾಗಿ ಹೋದಾಗ ನದಿಯಲ್ಲಿ ಜಾರಿಹೋಯಿತು. ಅಲ್ಲಿ ಗಂಧರ್ವನನ್ನು ಕಂಡೆ ಎಂದು ನಿಜ ಹೇಳಿದಳು.

ನೇಸ್ರೂಡಾ ನೆಲಬಾಲುಡಾ
ಮೂರು ಬಣ್ಣದ ಉಂಗುರ, ಮುಳುಗಿ ತೇಲಿ ಹೋಗಿತ್ತಾ
ನಾಲ್ಕು ಬಣ್ಣದ ಉಂಗುರ, ನಾಕ ಲೋಕವು ಸೇರಿತಾ
ಏಳು ಬಣ್ಣದ ಉಂಗುರ, ಏಟಿ ಪಾಲೈ ಪೊಯ್ದರ್
ಗಂಗೈ ಪಾಲೈ ಪೊಯ್ದರ್

ಬೆಟ್ಟದ ಮೇಲೆ ಬಿಟ್ಟುಹೋದರು. ಪ್ರಜ್ಞೆ ತಪ್ಪಿ ಬಿದ್ದಳು. ಎಚ್ಚರವಾದಾಗ ನಾಗಸಾನಿಯರು ನನ್ನನ್ನು ರಕ್ಷಿಸಿ ಕರೆತಂದಿದ್ದರು. ವೇಶ್ಯೆಯರು ಮನೆಯಲ್ಲಿ ಶಾಕುಂತಲಾ ನಾಟಕವನ್ನು ಬರೆದನು. ಹುಣ್ಣಿಮೆಯ ದಿನ ಹುಚ್ಚನಂತೆ ಅಲೆಯುತ್ತಿದ್ದರು. ಅಲ್ಲಿಯೇ ನಾಗಸಾನಿಯರು ಕರೆದೊಯ್ದರೆಂದು ಕೇಳಿ ಕಾಡಿನಲ್ಲಿದ್ದ ಮುದುಕಿ ಹೇಳಿದಳು. ಅಂದಿನಿಂದ ವೇಶ್ಯೆಯರ ಮನೆಗೆ ಹೋಗುತ್ತಿದ್ದನು. ಅಲ್ಲಿಯೇ ಉರ್ವಶಿಯನ್ನು ಕಾಯುತ್ತಿರುವ ವಿಕ್ರಮೋರ್ಶಿಯವನ್ನು ರಚಿಸಿದ್ದು, ಕಾಳಿದಾಸನ ಉಳಿಸಲು ಮಾರುವೇಷದಲ್ಲಿ ಬಂದರು. ಹಾಡಿಯ ಮಗನೇ ಕೊಲೆ ಮಾಡಿದನೆಂದು ತಿಳಿದಿದ್ದರು.

ನಾಗಸಾನಿಯ ಮನೆಯಲ್ಲಿ ಅಭಿಜ್ಞಾನ ಶಾಕುಂತಲೆಯನ್ನು ವಾಚಿಸುತ್ತಿದ್ದನು. ರಚಿಸುತ್ತಿದ್ದ ಬೇಟೆಗೆ ಬಂದು ಶಕುಂತಲೆಯನ್ನು ಮದುವೆಯಾದದ್ದು, ಉಂಗುರ ಕೊಟ್ಟಿದ್ದು, ಶಕುಂತಲೆ ಗರ್ಭ ಧರಿಸಿದ್ದು, ದೂರ್ವಾಸರು ಶಾಪ ಕೊಟ್ಟಿದ್ದು, ಕಣ್ವರು ಅರಮನೆಗೆ ಕಳುಹಿಸಿದ್ದು, ರಾಜ ತಿರಸ್ಕಾರ ಮಾಡಿದ್ದು, ಶಕುಂತಲೆಯಗೆ ಅಪಮಾನವಾದದ್ದು. ಮರೆವರೇನು? ಮಂಜರಿಯೇ ಎಂಬ ಚುರಮರಿ ಶೇಷಗಿರಿರಾಯರ ಶಾಕುಂತಲ ನಾಟಕದ ಪದ್ಯವನ್ನು ಬಳಸಿದ್ದಾರೆ.

ಈ ಹಾಡಿನ ಮೂಲಕ ಶಾಕುಂತಲೆಯನ್ನು ಅಯೋಧ್ಯೆಗೆ ಕರೆತಂದರು.

ಎಲ್ಯೆ ರಾಜನೇ ಏಕೆ ಸುಮ್ಮನಿರುವೆ?
ಎಲ್ಯೆ ತಾಪಸಿಯೇ?
ಎಲ್ಯೆ ಶಾಕುಂತಲೆಯೇ?
ಎಲ್ಯೆ ಮಹಾರಾಜನೇ?
ಎಲ್ಯೆ ವೃದ್ಧ ತಾಪಸ್ಸಿಯೇ
ಕಾಗೆಯ ಗೂಡಲ್ಲಿ ಕೋಗಿಲೆ ಮೊಟ್ಟೆ ಇಡಲು ಯಾರು ಕಲಿಸಿದರು.

ತಾನಾಗಿಯೇ ಮಾಡಿಕೊಂಡ ಚಪಲವು ತನ್ನನ್ನು ಸುಡದೆ ಬಿಡಲಾರದು. ದುಷ್ಯಂತನ ಪಾತ್ರಧಾರಿಯೇ ಕಾಳಿದಾಸನಾಗಿರುತ್ತಾನೆ. ಹೀಗಿರುವಾಗ ಕಾಳಿದಾಸನ ಕೊಲೆಯಾಗುವುದು ಅಲ್ಲಿ ಸೈನಿಕರು ಬಂದರು. ಕಾಳಿದಾಸ ಸಾಯುವಾಗ ಇವಳೇ ನನ್ನ ಪ್ರಾಣ ಎಂದು ಸತ್ತನು.

ಬೀಜದಿಂದ ಬೀಜ ಹುಟ್ಟಿ ಮರ ಸತ್ತ ಹಾಗೇ
ಮಗನೇ ಕಾಳಿದಾಸನನ್ನು ಕೊಂದನು.

ಕಾಳಿದಾಸನ ಮಗನಿಗೆ ಚಿಕ್ಕಂದಿನಿಂದಲೇ ನಾಗಸಾನಿಯರು ಕರುಳು ಕತ್ತರಿಸುವಾಗ ತಾಯಿಯ ಕಥೆ ಹೇಳಿದರು. ರೊಚ್ಚಿಗೆದ್ದ ಮಗನ ಒಡಲ ಕಿಚ್ಚಿಗೆ ಬಲಿಯಾದವನು ಅವನ ತಂದೆಯೇ. ನಿಷ್ಕರುಣೆಯಿಂದಲೇ ಪ್ರೀತಿಯ ಗುಂಡಿಗೆಯನ್ನು ಸೀಳಿ ಹಾಕಿತು.

ತಂದೆ-ಮಗ-ಯಾರನ್ನು ಬಲಿ ಕೊಡಲಿ
ಅವಳು ಅಭಿಜ್ಞಾನ ಶಾಕುಂತಲ
ಇವಳು ಅನಭಿಜ್ಞಾನ ಶಾಕುಂತಲ.

ಹೀಗೆ ನಾಟಕ ಕೊನೆಗೊಳ್ಳುತ್ತದೆ.

**ಕೊನೆಟಿಪ್ಪಣಿಗಳು**

೧. ಸೀತಾರಾಮಯ್ಯ, ಮಹಾಭಾರತದ ಐವರು, ಐಬಿಎಚ್ ಪ್ರಕಾಶನ, ಬೆಂಗಳೂರು, ಪುಟ.೨೮
೨. ಅದೇ, ಪುಟ.೩೦
೩. ಅದೇ, ಪುಟ.೩೧
೪. ಪಾಂಡುರಂಗಿ ಕೆ.ಟಿ.(ಸಂ), ಅಭಿಜ್ಞಾನ ಶಾಕುಂತಲಂ, ಬೆಂಗಳೂರು ವಿಶ್ವವಿದ್ಯಾಲಯ, ಬೆಂಗಳೂರು, ೧೯೮೧, ಪುಟ.೩೦
೫. ಅದೇ, ಪುಟ.೩೧
೬ ನರಸಿಂಹಶಾಸ್ತ್ರೀ ಕ., ಶಕುಂತಲೆ, ೧೯೪೫, ಪುಟ.೫
೭ ಅದೇ, ಪುಟ.೮
೮. ಅದೇ, ಪುಟ.೯
೯. ಅದೇ, ಪುಟ.೯
೧೦. ಅದೇ, ಪುಟ.೧೦
೧೧. ಲಕ್ಷ್ಮೀತಾತಾಚಾರ್ ಮಂ.ಅ., ಶಾಕುಂತಲ, ರಾಷ್ಟ್ರೋತ್ಥಾನ ಸಾಹಿತ್ಯ, ಭಾರತಿ ಪುಸ್ತಕ, ಬೆಂಗಳೂರು, ೧೯೭೬, ಪುಟ.೧೯
೧೨. ಸಿದ್ದಪ್ಪ ರೆ., ಶಾಕುಂತಲ, ಕಾವ್ಯಾಲಯ ಪ್ರಕಾಶನ, ಮೈಸೂರು, ೧೯೬೩, ಪುಟ.೧

೧೩. ಕುಲಕರ್ಣಿ, ಶಾಕುಂತಲ, ವಸಂತ ಮುದ್ರಣಾಲಯ, ಹುಬ್ಬಳ್ಳಿ, ಪುಟ.೨

೧೪. ವೀಣಾ ಶಾಂತೇಶ್ವರ, ನಡೆದದ್ದೇ ದಾರಿ, ಸುಂದರ ಪುಸ್ತಕ ಪ್ರಕಾಶನ, ಧಾರವಾಡ, ೨೦೦೬, ಪುಟ.೩೨

೧೫. ಅದೇ, ಪುಟ.೩೩

೧೬. ಮಾಸ್ತಿ ವೆಂಕಟೇಶ್ ಅಯ್ಯಂಗಾರ್, ಹೇಮಕೂಟದಿಂದ ಬಂದ ಮೇಲೆ, ರವೀಂದ್ರರ ಪ್ರಶಸ್ತಿ, ಸಾಹಿತ್ಯ ಅಭಿವೃದ್ಧಿ, ಬೆಂಗಳೂರು, ೧೯೬೨, ಪುಟ.೩೪

೧೭. ಅದೇ, ಪುಟ.೩೩

೧೮. ಮಾಸ್ತಿ ವೆಂಕಟೇಶ್ ಅಯ್ಯಂಗಾರ್, ಗೌತಮಿ ಹೇಳಿದ ಕತೆ, ಪುಟ.೩೦

೧೯. ನಟರಾಜ ಸಿ., ಶಾಕುಂತಲ ಕಾದಂಬರಿ, ತಾಂಡವಮೂರ್ತಿ ತರ್ಜುಮೆ ಕಛೇರಿ, ಮೈಸೂರು, ೨೦೦೯, ಪುಟ.೨

೨೦. ಅದೇ, ಪುಟ.೪, ಮುನ್ನುಡಿ

೨೧. ಅದೇ, ಪುಟ.೫–೬

೨೨. ಅದೇ, ಪುಟ.೧೦

೨೩. ಅದೇ, ಪುಟ.೧೨

೨೪. ಅದೇ, ಪುಟ.೨೫

೨೫. ಅದೇ, ಪುಟ.೩೦–೩೧

೨೬. ಅದೇ, ಪುಟ.೩೨

೨೭. ಅದೇ, ಪುಟ.೩೩

೨೮. ಅದೇ, ಪುಟ.೩೫–೩೬

೨೯. ಅದೇ, ಪುಟ.೩೮

೩೦. ಅದೇ, ಪುಟ.೫೧

೩೧. ಅದೇ, ಪುಟ.೬೩–೬೪

೩೨. ಅದೇ, ಪುಟ.೬೬–೬೭

೩೩. ಅದೇ, ಪುಟ.೭೦

೩೪. ಅದೇ, ಪುಟ.೭೦–೭೧

೩೫. ಅದೇ, ಪುಟ.೭೫

೩೬. ಅದೇ, ಪುಟ.೭೮

೩೭. ಅದೇ, ಪುಟ.೮೩

೩೮. ಅದೇ, ಪುಟ.೮೬

೩೯. ಅದೇ, ಪುಟ.೯೯

೪೦. ಅದೇ, ಪುಟ.೧೩೨-೧೩೩

೪೧. ಅದೇ, ಪುಟ.೧೪೩

೪೨. ಅದೇ, ಪುಟ.೧೫೨

೪೩. ಶಿವರುದ್ರಪ್ಪ ಜಿ.ಎಸ್., ಸೌಂದರ್ಯ ಸಮೀಕ್ಷೆ, ಕಾಮಧೇನು ಪ್ರಕಾಶನ, ಬೆಂಗಳೂರು, ೧೯೯೯, ಪುಟ.೩೩

೪೪. ಅದೇ, ಪುಟ.೩೪

೪೫. ಅದೇ, ಪುಟ.೩೬

೪೬. ಅದೇ, ಪುಟ.೩೭

೪೭. ಅದೇ, ಪುಟ.೩೯

೪೮. ಕಮಲ ಎಂ.ಆರ್., ಹೂ ಚೆಲ್ಲಿದ ಹಾದಿ, ಕಥನ ಪ್ರಕಾಶನ, ಬೆಂಗಳೂರು, ೨೦೦೭, ಪುಟ.೩೦

೪೯. ಅದೇ, ಪುಟ.೩೧-೩೨

೫೦. ದೇಶಕುಲಕರ್ಣಿ, ಕೊಂಪೆಯಲ್ಲಿ ಕೋಗಿಲೆ, ಕನ್ನಡ ಸಂಘ, ಶೇಷಾದ್ರಿಪುರಂ, ಬೆಂಗಳೂರು, ೧೯೮೩, ಪುಟ.೫೬-೫೭

೫೧. ಮುನಿಕೃಷ್ಣಪ್ಪ ಕೆ.ಎಂ., ಇನ್ನೊಬ್ಬಳು ಶಾಕುಂತಲೆ, ವಿಂದ್ಯಾ ಪ್ರಕಾಶನ, ಬೆಂಗಳೂರು, ೧೯೮೯, ಪುಟ.೩೧-೩೩

೫೨. ನಾಗರತ್ನ ಟಿ.ಎನ್.(ಸಂ), ಹರಪನಹಳ್ಳಿ ಭೀಮವ್ವನ ಹಾಡುಗಳು, ಕನ್ನಡ ಅಧ್ಯಯನ ಸಂಸ್ಥೆ: ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು, ೧೯೮೪, ಪುಟ.೧

೫೩. ಅದೇ, ಪುಟ.೧೨

೫೪. ಅದೇ, ಪುಟ.೧೩

೫೫. ಅದೇ, ಪುಟ.೫೦೨-೫೦೩

೫೬. ವೈಕುಂಟರಾಜು ಬಿ.ವಿ. ಕನ್ನಡ ರಂಗಭೂಮಿ-೨೦೦೭ ಸನತ್ ಪ್ರಕಾಶನ, ಬೆಂಗಳೂರು,(ಪು.ಸಂ.೧೫೯-೧೬೦) ರಂಗಗೀತೆಗಳು

೫೭. ಸುಬ್ಬಣ್ಣ ಕೆ.ವಿ., ಲೋಕಶಾಕುಂತಲ, ಅಕ್ಷರ ಪ್ರಕಾಶನ, ಹೆಗ್ಗೋಡು, ೧೯೯೦, ಪುಟ.೩೫

೫೮. ಡಿ.ವಿ.ಜಿ., ಗೀತಾಶಾಕುಂತಲ, ಕಾವ್ಯಾಲಯ ಪ್ರಕಾಶನ, ಮೈಸೂರು, ೧೯೬೯, ಪುಟ.೪೬-೪೭

೫೯. ಕಡೆಂಗೊಡ್ಲ ಶಂಕರಭಟ್ಟ, ಅಭಿನವ ಶಾಕುಂತಲ, ಕನ್ನಡ ವಿಭಾಗ, ಮಂಗಳೂರು ವಿಶ್ವವಿದ್ಯಾಲಯ, ಮಂಗಳೂರು, ೧೯೮೭, ಪುಟ.೩೦೨

೬೦. ರೇಣುಕಾ ಪ್ರಸನ್ನ, ಶಾಕುಂತಲ ಅವಲೋಕನ, ಪುಟ.೫೪

೬೧. ಅದೇ, ಪುಟ.೫೮

೬೨. ಅದೇ, ಪುಟ.೬೦

೬೩. ಅದೇ, ಪುಟ.೬೫

೬೪. ಅದೇ, ಪುಟ.೬೭

೬೫. ಅದೇ, ಪುಟ.೬೮

೬೬. ಅದೇ, ಪುಟ.೬೯

೬೭. ಅದೇ, ಪುಟ.೬೯

೬೮. ಅದೇ, ಪುಟ.೭೨

೬೯. ಅದೇ, ಪುಟ.೮೦

ಅಧ್ಯಾಯ ನಾಲ್ಕು

# ಕನ್ನಡದಲ್ಲಿ ಶಾಕುಂತಲದ ನಾಟಕಗಳ ಭಾಷಾಂತರಗಳ ಪ್ರಕ್ರಿಯೆ

ಕಾಳಿದಾಸನ ಅಭಿಜ್ಞಾನ ಶಾಕುಂತಲ ನಾಟಕವು ಕನ್ನಡ ಸಾಹಿತ್ಯದಲ್ಲಿ ಕವಿರಾಜಮಾರ್ಗ ಕಾಲದಿಂದಲೂ ಭಾಷಾಂತರವಾಗುತ್ತಿರುವುದನ್ನು ಗಮನಿಸಬಹುದು. ೧೩೦೦ ವರ್ಷಗಳ ಹಿಂದಿನಿಂದ ಭಾಷಾಂತರ ಕಾರ್ಯ ನಡೆಯುತ್ತಾ ಬಂದಿದೆ. ದಂಡಿಯ ಕಾವ್ಯಾದರ್ಶ, ಜನ್ನನ ಯಶೋಧರ ಚರಿತೆ, ವಾದಿರಾಜನ ಸಂಸ್ಕೃತ ಯಶೋಧರ ಚರಿತೆ ಇಂತಹ ಅನೇಕ ಕೃತಿಗಳನ್ನು ಅನೇಕ ಕವಿಗಳು ಭಾಷಾಂತರ ಮಾಡಿರುವುದನ್ನು ನೋಡಬಹುದು.

ಹೊಸಗನ್ನಡ ಸಾಹಿತ್ಯ ಭಾಷಾಂತರಕ್ಕೆ ಬಹಳ ಋಣಿಯಾಗಿದೆ. ೧೬ನೆಯ ಶತಮಾನದ ಅನಂತರ ಮಡುಗಟ್ಟಿ ನಿಂತು ನೀರಾಗಿದ್ದ ಕನ್ನಡ ಸಾಹಿತ್ಯವಾಹಿನಿಗೆ ೧೯-೨೦ನೆಯ ಶತಮಾನಗಳಲ್ಲಿ ಹೊಸ ಪಾತ್ರವನ್ನು ನಿರ್ಮಿಸಿದ ಶ್ರೇಯಸ್ಸು ಭಾಷಾಂತರಗಳದು. ಅದರಲ್ಲೂ ಇಂಗ್ಲಿಷ್‌ನಿಂದಾದ ಭಾಷಾಂತರಗಳದು. ವಿಲಿಯಂ ಕೇರಿಯ ಬೈಬಲ್‌ನ ಭಾಷಾಂತರ ೧೮೨೯ರಲ್ಲೇ ಪ್ರಕಟವಾಯಿತು. ಮುದ್ರಾಮಂಜೂಷವನ್ನು ಬಿಟ್ಟರೆ ಇದೇ ಹೊಸಗನ್ನಡದಲ್ಲಿ ಮೊದಲು ಅನುವಾದವಾದ ಗದ್ಯಗ್ರಂಥ.

ಕನ್ನಡ ಸಾಹಿತ್ಯದಲ್ಲಿ ಅನೇಕ ನಾಟಕಗಳು ಭಾಷಾಂತರವಾಗಿವೆ. ಕನ್ನಡದಲ್ಲಿ ನಮಗೆ ಮೊದಲು ಸಿಕ್ಕುವ ನಾಟಕ ೧೭ನೆಯ ಶತಮಾನದಲ್ಲಿ ರಚಿತವಾದ ಸಿಂಗರಾರ್ಯನ ಮಿತ್ರವಿಂದಾಗೋವಿಂದ. ಇದು ಸಂಸ್ಕೃತದ ರತ್ನಾವಳಿ ನಾಟಕದ ಅನುವಾದ. ಮುಂದೆ ೧೯-೨೦ನೆಯ ಶತಮಾನಗಳಲ್ಲಿ ಮುಖ್ಯ ಸಂಸ್ಕೃತ ನಾಟಕಗಳೆಲ್ಲ ಕನ್ನಡಕ್ಕೆ ಬಂದವು. ಬಸವಪ್ಪಶಾಸ್ತ್ರಿಗಳು ಶಾಕುಂತಲ, ವಿಕ್ರಮೋರ್ವಶೀಯ, ರತ್ನಾವಳಿ, ಉತ್ತರರಾಮಚರಿತೆ ಮತ್ತು ಚಂಡಕೌಶಿಕ ನಾಟಕಗಳನ್ನು ಭಾಷಾಂತರಿಸಿದರು. ಬಸವಪ್ಪಶಾಸ್ತ್ರೀ ಅವರ ಶಾಕುಂತಲದ ಅನುವಾದ ಶ್ರೇಷ್ಠವೆನಿಸಿದೆ. ಅವರಿಗಿಂತ ಮೊದಲೆ ಚುರಮರಿ ಶೇಷಗಿರಿರಾಯರು ಶಾಕುಂತಲವನ್ನು ಹಾಡಿನ ರೂಪದಲ್ಲಿ ಅನುವಾದಿಸಿದ್ದರು. ಜಿ.ಕೃಷ್ಣಪ್ಪನವರು ಅದನ್ನು ಗದ್ಯದಲ್ಲಿ ಪರಿವರ್ತಿಸಿದ್ದರು. ದೋಂಡೊ ನರಸಿಂಹ ಮುಳಬಾಗಿಲರು ಉತ್ತರರಾಮಚರಿತೆ, ಮಾಳವಿಕಾಗ್ನಿಮಿತ್ರ, ಮೃಚ್ಛಕಟಿಕ, ವೇಣಿಸಂಹಾರಗಳನ್ನು ಭಾಷಾಂತರಿಸಿದ್ದಾರೆ. ಅಳಸಿಂಗರಾಚಾರ್ಯರಿಂದ ಸ್ವಪ್ನವಾಸವದತ್ತ, ಪಂಚರಾತ್ರಗಳು, ಮೈಸೂರು ಸೀತಾರಾಮಶಾಸ್ತ್ರಿಗಳಿಂದ ಪ್ರತಿಮಾನಾಟಕ, ನಂಜನಗೂಡು ಸುಬ್ಬಾಶಾಸ್ತ್ರಿಗಳಿಂದ ಮೃಚ್ಛಕಟಿಕ, ಅನಂತನಾರಾಯಣಶಾಸ್ತ್ರಿಗಳಿಂದ ನಾಗಾನಂದ ಅನುವಾದಗೊಂಡಿವೆ. ವೇಣಿಸಂಹಾರವನ್ನು ಸೀತಾರಾಮಶಾಸ್ತ್ರಿಗಳೂ

ಜಯರಾಯಾಚಾರ್ಯರೂ ಭಾಷಾಂತರಿಸಿದ್ದಾರೆ. ಈ ಎಲ್ಲ ಭಾಷಾಂತರಗಳೂ ಕಂದವೃತ್ತಗಳ ರೂಪದಲ್ಲಿವೆ. ಹೊಸಗನ್ನಡ ಛಂದಸ್ಸಿನಲ್ಲೂ ಸಂಸ್ಕೃತ ನಾಟಕಗಳನ್ನು ಅನುವಾದಿಸಲಾಗಿದೆ. ಎಸ್.ವಿ.ಪರಮೇಶ್ವರಭಟ್ಟರು ಕಾಳಿದಾಸ, ಭಾಸರ ಎಲ್ಲ ನಾಟಕಗಳನ್ನು, ಕೆ.ಕೃಷ್ಣಮೂರ್ತಿಯವರು ಪ್ರತಿಮಾನಾಟಕ, ಉತ್ತರಾಮಚರಿತೆ, ಯಜ್ಞಫಲ, ಆಶ್ಚರ್ಯ ಚೂಡಾಮಣಿಗಳನ್ನು ಕನ್ನಡಿಸಿದ್ದಾರೆ. ಎಲ್.ಗುಂಡಪ್ಪನವರು ಭಾಸನ ಏಕಾಂಕ ನಾಟಕಗಳನ್ನೂ ಪ್ರತಿಜ್ಞಾಯೌಗಂಧರಾಯಣ ನಾಟಕ, ಸ್ವಪ್ನವಾಸವದತ್ತ ನಾಟಕಗಳನ್ನು ಅನುವಾದಿಸಿದ್ದಾರೆ. ತೀ.ನಂ.ಶ್ರೀ.ಯವರ ರಾಕ್ಷಸನ ಮುದ್ರಿಕೆ ಸಂಸ್ಕೃತ ಮುದ್ರಾರಾಕ್ಷಸದ ಸಂಗ್ರಹಾನುವಾದ, ಸಿ.ಪಿಕೆ. ಅವರಿಂದ ಸ್ವಪ್ನವಾಸವದತ್ತ, ಪ್ರತಿಜ್ಞಾಯೌಗಂಧರಾಯಣ, ರತ್ನಾವಳಿ, ನಾಗಾನಂದ, ವೇಣಿಸಂಹಾರಗಳು ಭಾಷಾಂತರಗೊಂಡಿವೆ. ಕನ್ನಡ ಭಾಷಾಂತರಗಳು ಒಂದು ಕಾಲದಲ್ಲಿ ಮುಖ್ಯವಾಗಿ ಕಥೆ, ಕಾದಂಬರಿಗಳ ಕ್ಷೇತ್ರದಲ್ಲಿ ಹೆಚ್ಚಾಗಿ ಕಂಡುಬರುತ್ತಿದ್ದುವು. ಅನಂತರದ ದಿನಗಳಲ್ಲಿ ಭಾಷಾಂತರ ಇತರ ಗಂಭೀರ ಸಾಹಿತ್ಯದತ್ತಲೂ ಮುಖ ಮಾಡಿತು. ಮುಖ್ಯವಾಗಿ ಮೈಸೂರು ವಿಶ್ವವಿದ್ಯಾನಿಲಯದ ಪ್ರಸಾರಾಂಗ, ಕುವೆಂಪು ಕನ್ನಡ ಅಧ್ಯಯನ ಸಂಸ್ಥೆ ಮತ್ತು ಕರ್ನಾಟಕ ವಿಶ್ವವಿದ್ಯಾಲಯಗಳು ಇಂಥ ಕೆಲಸಕ್ಕೆ ಚಾಲನೆ ನೀಡಿದವು. ಬೆಂಗಳೂರಿನ ಕೃಷಿ ವಿಶ್ವವಿದ್ಯಾಲಯವೂ ಪ್ರತ್ಯೇಕ ಪ್ರಕಟಣಾ ಶಾಖೆಯನ್ನು ಪ್ರಾರಂಭಿಸಿ ಈ ನಿಟ್ಟಿನಲ್ಲಿ ಗಮನ ಹರಿಸಿದೆ. ಹಂಪಿಯ ಕನ್ನಡ ವಿಶ್ವವಿದ್ಯಾಲಯದಲ್ಲಿ ಪ್ರತ್ಯೇಕ ಭಾಷಾಂತರ ವಿಭಾಗವನ್ನೇ ಸ್ಥಾಪಿಸಿದೆ. ಅಕಾಡೆಮಿಗಳು, ಪುಸ್ತಕ ಪ್ರಾಧಿಕಾರ ಹಾಗೂ ಕನ್ನಡ ಮತ್ತು ಸಂಸ್ಕೃತಿ ಇಲಾಖೆಗಳು ಅನುವಾದ ಕೃತಿಗಳನ್ನು ಹೊರತಂದಿವೆ. ಕನ್ನಡ ಭಾಷೆಯ ಸತ್ವ ಹೆಚ್ಚಲು ಮತ್ತು ಬೋಧನೆಯಲ್ಲಿ ಅದು ಪರಿಣಾಮಕಾರಿಯಾದ ಮಾಧ್ಯಮವಾಗಲು ಅತ್ಯಾಧುನಿಕ ತಂತ್ರಜ್ಞಾನ ಕ್ಷೇತ್ರದಿಂದ ಹಿಡಿದು ವಿವಿಧ ಜ್ಞಾನಶಾಖೆಗಳಲ್ಲಿ ಭಾಷಾಂತರ ಕೃತಿಗಳು ಬಂದಿರುವುದನ್ನು ಗ್ರಹಿಸಬಹುದು.

ಯಾವುದೇ ನಾಟಕವಾಗಲಿ, ಕಾದಂಬರಿಯಾಗಲಿ, ಕಾವ್ಯವಾಗಲಿ, ಸಿನಿಮಾವಾಗಲಿ, ಅಲ್ಲಿ ದಾಖಲಾಗುವ ಪ್ರಾದೇಶಿಕ ಅನನ್ಯತೆಯ ಯಾವುದೇ ವಿಚಾರಗಳನ್ನು ಲೇಖಕ ತಾನು ಕಂಡುಕೊಂಡ ರೀತಿಯಲ್ಲಿ ಮರು ನಿರೂಪಿಸುತ್ತಾನೆ. ತನ್ನ ಗ್ರಹಿಕೆಗೆ ನಿಲುಕಿದ್ದನ್ನು ನಿರೂಪಿಸುತ್ತಾನೆ. ಮುಖ್ಯವಾಗಿ ಭಾಷಾಂತರದ ಅಧ್ಯಯನದ ಸಂದರ್ಭದಲ್ಲಿ ಅಂತರ್‌ಸಂಜ್ಞಾ ಭಾಷಾಂತರವಾಗಿದೆ. ಕಥೆಯಾಗುವುದು ಭಾಷೆಯ ಒಳಗಡೆ. ಅದು ಇನ್ನೇನೋ ಆಗುವುದು ಸಿನಿಮಾಕ್ಕೆ ಬಂದಾಗ. ಅದು ಇನ್ನೊಂದು ಮಾಧ್ಯಮದಲ್ಲಿ ರೂಪುಗೊಳ್ಳುವುದು. ಈ ಮಾಧ್ಯಮವನ್ನು ವ್ಯತ್ಯಾಸ ಮಾಡಿಕೊಂಡಾಗ ಅಲ್ಲಿರುವ ಇತಿಮಿತಿಗಳು ಗುಣಗಳು ಅವು ಬೇರೆ. ಆ ಪ್ರಶ್ನೆಗಳನ್ನು ಕೇಳಿಕೊಳ್ಳಬೇಕಾದ ರೀತಿ ಮುಖ್ಯವಾಗಿದೆ.

ಲೇಖಕನ ಸೃಜನಶೀಲ ಪ್ರಕ್ರಿಯೆ ಸಿದ್ಧವಾಗುವುದು ಸಮಾಜದಲ್ಲಾದರೂ ಆ ಸೃಜನಶೀಲತೆ ಅನುಭವಿಸಬಲ್ಲ. ಆದರೆ ಸಿನಿಮಾ ನಿರ್ದೇಶಕನ ಸೃಜನಶೀಲ ನೆಲೆಯು ಸೃಷ್ಟಿಯಾಗುವುದು ಒಂದು ಸಾಮೂಹಿಕ ಪ್ರಯತ್ನದ ಮೂಲಕ. ಅದು ಪ್ರಕಟವಾಗುವುದು ಒಂದು ಬೇರೆಯೇ ಆದಂತಹ ಮಾಧ್ಯಮದಲ್ಲಿ. ಅಲ್ಲಿ ಪ್ರೇಕ್ಷಕರು ಮೌನವಾಗಿರುತ್ತಾರೆ. ಅದು ಪ್ರೇಕ್ಷಕರ ಸುತ್ತಮುತ್ತ ಎಡಬಲದಲ್ಲಿ ಕುಳಿತವರ ನೆಲೆಯಿಂದ ಅದು ಬೇರೆಯಾಗಬೇಕೇ ಹೊರತು ಇನ್ಯಾವ ನೆಲೆಯಿಂದಲೂ ಅಲ್ಲ.

ಹಾಗಾಗಿ ಒಂದು ಸಾಹಿತ್ಯ ಕೃತಿ ಇರಬಹುದು. ಸಿನಿಮಾ ಇರಬಹುದು ಅದು ಎಲ್ಲ ಕಾಲಕ್ಕೂ ಮತ್ತೆ ಮತ್ತೆ ಹೊಸ ಹೊಸ ನೆಲೆಯಲ್ಲಿ ಹೊಸ ಹೊಸ ವ್ಯಾಖ್ಯಾನಗಳನ್ನು ಕೊಡುತ್ತಾ ಹೋಗುತ್ತದೆ.

ಭಾಷಾಂತರ ಪ್ರಕ್ರಿಯೆಯ ಸ್ವಭಾವಗಳಲ್ಲಿನ ವ್ಯತ್ಯಾಸಕ್ಕೆ ಅನುಗುಣವಾಗಿ ಕನ್ನಡದಲ್ಲಿ ಅನೇಕ ಪದಗಳು ಬೇರೆ ಬೇರೆ ಪ್ರಕ್ರಿಯೆಯ ನೆಲೆಯಿಂದಲೇ ರೂಪುಗೊಂಡಿರುವುದನ್ನು ಕಾಣಬಹುದು. ಕನ್ನಡೀಕರಣ, ರೂಪಾಂತರ, ಅನುಸೃಷ್ಟಿ, ಅನುರೂಪ, ಮರುರೂಪ, ಪುನರ್‌ಲೇಖ, ವ್ಯಾಖ್ಯಾನ, ಪುನರ್‌ವ್ಯಾಖ್ಯಾನ, ಭಾಷ್ಯ ಇತ್ಯಾದಿ ಅನೇಕ ಪದಗಳು ಭಾಷಾಂತರ ಪ್ರಕ್ರಿಯೆಯ ವಿವಿಧ ಸ್ವರೂಪಗಳನ್ನು ತಿಳಿಸುತ್ತವೆ. ಭಾಷಾಂತರ ಪ್ರಕ್ರಿಯೆ ಎಂಬುದು ಇಂದು ನಿನ್ನೆಯದಲ್ಲ. ಭಾಷೆಗಳು ಹುಟ್ಟಿದಾಗಿನಿಂದಲೇ ಭಾಷಾಂತರ ಹುಟ್ಟಿಕೊಂಡಿದೆ. ಭಾಷಾಂತರವನ್ನು ಕುರಿತ ಚಿಂತನೆಗಳು ಆರಂಭವಾದುದು ಮಾತ್ರ ೨೦ನೇ ಶತಮಾನದ ಉತ್ತರಾರ್ಧದಲ್ಲಿ.

ಪ್ರಾಚೀನ ಕನ್ನಡದ ಕವಿಗಳು ಸಂಸ್ಕೃತ ಭಾಷೆಯ ಸಾಹಿತ್ಯದ ನೆಲೆಯಿಂದ ತಮ್ಮ ಕೃತಿಗಳನ್ನು ರೂಪಿಸಿದರು. ಹಾಗಾಗಿ ಅವರು ತಾವು ಆಯ್ದುಕೊಂಡ ವಸ್ತುವಿಷಯವನ್ನು ತಮ್ಮ ಕಾಲದ ಅನುಕೂಲಕ್ಕೆ ಅನುಗುಣವಾಗಿ ತಮಗೆ ಬೇಕಾದಂತೆ ಪುನರ್ ಸೃಷ್ಟಿಸಿದರು. ವ್ಯಾಸನ ಮಹಾಭಾರತದಲ್ಲಿ ಬರುವ ಒಂದು ಸಣ್ಣಕಥೆಯನ್ನು ಆಧರಿಸಿ ಕಾಳಿದಾಸ ಉತ್ತಮ ನಾಟಕವನ್ನೇ ರಚಿಸುತ್ತಾನೆ. ಕಾಳಿದಾಸನ ಅಭಿಜ್ಞಾನ ಶಾಕುಂತಲ ಇಂದಿಗೂ ಕನ್ನಡ ಸಾಹಿತ್ಯ ಪರಿಸರದಲ್ಲಿ ಭಾಷಾಂತರಗೊಳ್ಳುತ್ತಲಿದೆ.

ಭಾಷಾಂತರ ಎಂಬ ಪದವೇ ಸೂಚಿಸುವಂತೆ ಒಂದು ಭಾಷೆಯಿಂದ ನಿರ್ದಿಷ್ಟ ಅಂತರವನ್ನು ಉಳಿಸಿಕೊಂಡು ಸೃಷ್ಟಿಸಿದ ಕೃತಿ. ಈ ಅಂತರ ಮುಖ್ಯವಾಗಿ ಭಾಷೆಗೆ ಸಂಬಂಧಿಸಿದ್ದು. ಭಾರತೀಯ ಭಾಷೆ, ವಿದೇಶಿ ಭಾಷೆ, ಧಾರವಾಡ ಭಾಷೆ, ಪದ್ಯಭಾಷೆ, ಗದ್ಯಭಾಷೆ, ಹಳೆಗನ್ನಡ ಭಾಷೆ, ಹೊಸಗನ್ನಡ ಭಾಷೆ, ಹೀಗೆ ಯಾವ ಭಾಷೆಗಳ ನಡುವೆಯೂ ನಡೆಯಬಹುದು.

**ಮಾಧ್ಯಮಗಳ ಭಾಷಾಂತರ**

ಮಾಧ್ಯಮಗಳಲ್ಲಿ ಮುದ್ರಣ ಮಾಧ್ಯಮಗಳ ಭಾಷಾಂತರದ ಸ್ವರೂಪಕ್ಕೂ ಶ್ರವ್ಯ ದೃಶ್ಯಮಾಧ್ಯಮಗಳ ಭಾಷಾಂತರದ ಸ್ವರೂಪಕ್ಕೂ ಸ್ಪಷ್ಟವಾದ ವ್ಯತ್ಯಾಸವಿದೆ. ಇರಲೇಬೇಕಾಗುತ್ತದೆ. ಮಾಧ್ಯಮಗಳು ವರದಿಗಳ ಆಶಯವನ್ನು ಮುಖ್ಯವಾಗಿ ಗಮನದಲ್ಲಿರಿಸಿ ಭಾಷಾಂತರ ಮಾಡ ಬೇಕಾಗುತ್ತದೆ. ಆಶಯಗಳನ್ನು ಸಹ ಆಯಾ ಪತ್ರಿಕೆಯ ಆದ್ಯತೆಯ ಮೇರೆಗೆ ಭಾಷಾಂತರಗಳನ್ನು ರೂಪಿಸಿಕೊಳ್ಳುತ್ತವೆ. ಇಲ್ಲಿಯೂ ಭಾಷಾಂತರ ಸರಳವಾಗಿ ಸಂವಹನಗೊಳ್ಳುವಂತಿರಬೇಕು. ದೃಶ್ಯ ಮಾಧ್ಯಮವಾದರೆ ಭಾಷೆಯ ಮೂಲಕ ಹೇಳಬಹುದಾದ ಅನೇಕ ಸಂಗತಿಗಳು ದೃಶ್ಯದ ಮೂಲಕ ನೋಡುಗರಿಗೆ ಲಭ್ಯವಾಗುತ್ತವೆ. ಹಾಗಾಗಿ ಅಲ್ಲಿನ ಭಾಷಾಂತರ ಭಾಷೆ ದೃಶ್ಯಗಳಿಗೆ ಪೂರಕವಾಗಿ ಮತ್ತು ಅವುಗಳಲ್ಲಿ ಇಲ್ಲದ ಸಂಗತಿಗಳನ್ನು ವಿವರಿಸುವಂತಿರಬೇಕು. ದೃಶ್ಯಮಾಧ್ಯಮಗಳನ್ನು ನೋಡುವವರು ದೃಶ್ಯ ಮತ್ತು ಶ್ರವ್ಯ ಭಾಷೆಗಳೆರಡನ್ನೂ ಏಕಕಾಲಕ್ಕೆ ಸಂವಹನಕ್ಕಾಗಿ ಅವಲಂಬಿಸಿರುತ್ತಾರೆ. ದೃಶ್ಯ ಮಾಧ್ಯಮದ

ದೃಶ್ಯಗಳು ಬಹುಬೇಗ ನೋಡುಗರ ಸಂದೇಹವನ್ನು ದೂರ ಮಾಡುತ್ತದೆ.(ಭಾಷಾಂತರದ ವಿಭಿನ್ನ ನೆಲೆಗಳು, ಡಾ. ಮೋಹನ್ ಕುಂಟಾರ್, ಪು.ಸಂ.೭೮)

ಭಾಷಾಂತರದಲ್ಲಿ ಮೂಲದ ಭಾವಾಂಶ, ಚಿಂತನಾಂಶ, ರೂಪಾಂಶಗಳೆಲ್ಲ ಸಮಗ್ರರೂಪದಲ್ಲಿ ಮೈದಳೆಯಬೇಕೆಂಬುದನ್ನು ಮನದಟ್ಟು ಮಾಡಿಕೊಡುವುದು ಈ ತತ್ವದ ಆಶಯ. ಇತರ ಪ್ರಕಾರಗಳಲ್ಲಿ ಅಂದರೆ ವಿಜ್ಞಾನ ಮತ್ತು ಮಾನವಿಕ ಕ್ಷೇತ್ರಗಳಲ್ಲಿ ಈ ಸಮಸ್ಯೆ ಅಷ್ಟಾಗಿ ಬಾಧಿಸದಿದ್ದರೂ ಸಾಹಿತ್ಯಕ್ಷೇತ್ರದಲ್ಲಿ ಅದರಲ್ಲಿಯೂ ಕಾವ್ಯದ ಅನುವಾದದ ಸಂದರ್ಭದಲ್ಲಿ ಮೂಲ ತನ್ನ ಸಮಸ್ತ ವೈಭವದೊಡನೆ ಅವತರಿಸುವುದು ಕಷ್ಟಸಾಧ್ಯವಾದ ಸಂಗತಿ. ಏಕೆಂದರೆ ಮೊದಲನೆಯದಾಗಿ ಮೂಲದ ಭಾವಸಮಸ್ತವೂ ಭಾಷಾಂತರದಲ್ಲಿ ಮೂಡಿ ಬರುವಂತೆ ಮಾಡುವುದೇ ಮಹಾಪ್ರಯಾಸದ ಸಂಗತಿ. ಭಾವವನ್ನು ಅಷ್ಟೋ ಇಷ್ಟೋ ಹೇಗಾದರೂ ಮಾಡಿ ತಂದೆವೆಂದರೂ, ಮೂಲದ ಛಂದಸ್ಸನ್ನು ಅಳವಡಿಸಿಕೊಳ್ಳಲು ಸಾಧ್ಯವಾಗದೆ ಹೋಗಬಹುದು. ಹೀಗಾಗಿ ಭಾಷಾಂತರದ ನಡೆಯೇ ಬೇರೆಯಾಗಬಹುದು. ಮೂಲ ಭಾಷೆಯ ನಾಯಕತ್ವ ಭಾಷಾಂತರದಲ್ಲಿ ಮಾಯವಾಗಿ ಬಿಡಬಹುದು. ಅಪೂರ್ವವಾಗಿ ಆಗೊಮ್ಮೆ ಈಗೊಮ್ಮೆ ಕಣ್ಣಿಗೆ ಬೀಳಬಹುದಾದಂಥ ಆದರ್ಶ ಭಾಷಾಂತರದಲ್ಲಿ ಮಾತ್ರವೇ ಮೂಲ ಸಮಗ್ರರೂಪದಲ್ಲಿ ಮೈದಳೆಯಬಹುದು.

ಉದಾಹರಣೆಗೆ ಕಾಳಿದಾಸನ 'ಅಭಿಜ್ಞಾನ ಶಾಕುಂತಲ' ನಾಟಕದ ನಾಲ್ಕನೆಯ ಅಂಕದ ಪದ್ಯವೊಂದನ್ನು ಇಲ್ಲಿ ಉದಾಹರಿಸಬಹುದು.

**ಸಂಸ್ಕೃತ**

ಪಾತುಂನ ಪ್ರಥಮ ವ್ಯವಸತಿ ಝಲಂ ಯುಷ್ಮಾಸ್ವಪೀತೇಷು ಯಾ।
ನಾದತ್ತೇ ಪ್ರಿಯ ಮಣ್ಡನಾಪಿ ಭವತಾಂ ಸ್ನೇಹೇನ ಯಾ ಪಲ್ಲವಮ್।
ಆದ್ಯೇ ವಃ ಕುಸುಮ ಪ್ರಸೂತಿಸಮಯೇ ಯಸ್ಯಾ ಭವತ್ಯುತ್ಸವಃ
ಸೇಯಂ ಯಾತಿ ಶಕುಂತಲಾ ಪತಿಗೃಹಂ ಸರ್ವೈನುಜ್ಞಾಯತಾಮ್॥

**ಬಸವಪ್ಪಶಾಸ್ತ್ರಿಗಳ ಭಾಷಾಂತರ**

"ಜಲವನದಾವಳೀಂಟಳೆರೆದಲ್ಲದೆ ನಿಮ್ಮಯ ಪಾತೆಗಂಬುವಂ।
ತಳಿರ್ಗಳ ಕೊಯ್ಯಳಾವಳೊಲವಿಂ ಮಿಗೆ ಸಿಂಗರದಾಸೆಯುಳ್ಳೊಡಂ॥
ಅಲರ್ಗಳ ತಾಳೆ ನೀವು ಮೊದಲುತ್ಸವವಾಂತಪಳಾವಳಾ ಶಕುಂ।
ತಳೆ ಪತಿಸದ್ಮಕೈದಿದಪಳಾಕೆಗನುಜ್ಞೆಯನೀವುದೆಲ್ಲರುಂ॥"[೧]

ಭಾಷಾಂತರದಲ್ಲಿ ಮೂಲದ ಸರಳತೆ, ಲಾಲಿತ್ಯ, ಸೌಂದರ್ಯ, ಸೌಕುಮಾರ್ಯ, ಕರುಣರಸಪೋಷಕವಾದ ವಿಳಂಬಿತ ಲಯ, ಬಟ್ಟಿನಲ್ಲಿ ಮೂಲದ ಸಮಸ್ತ ಭಾವಶ್ರೀಮಂತಿಕೆ ಹಾಗೂ ಸೂಕ್ತ ಛಂದೋಬಂಧ ಇವೆಲ್ಲ ಅಸದೃಶ ರೀತಿಯಲ್ಲಿ ಮೈವೆತ್ತಿದ್ದು, ಮೂಲವನ್ನು ಬಲ್ಲ

ಓದುಗರು ಮೂಲವನ್ನು ಓದಿದಾಗ ಸವಿಯಬಹುದಾದಂಥ ಆನಂದವನ್ನೇ ಓದುಗರೂ ಸವಿಯುವಂತಾಗಿದೆ. ಭಾಷಾಂತರದಲ್ಲೂ ಮೂಲ ಸಮಗ್ರರೂಪದಲ್ಲಿ ಮೈದಳೆದಿದೆ. ಇಂಥ ಆದರ್ಶವನ್ನು ಸಾಧಿಸಬೇಕೆಂಬುದು ಭಾಷಾಂತರದ ಲಕ್ಷ್ಯವಾಗಿರಬೇಕೆಂಬುದನ್ನು ಅನುರೂಪತಾತತ್ವ ವಿವರಿಸುತ್ತದೆ.

"ಭಾಷಾಂತರ ಮೆಲ್ಕಂಡಂತೆ ಗುಣದಲ್ಲಿ ಮಾತ್ರವಲ್ಲದೆ, ಗಾತ್ರದಲ್ಲಿಯೂ ಮೂಲಕ್ಕೆ ಅನುರೂಪವಾಗಿರಬೇಕೆಂಬುದನ್ನು ಈ ಸಂದರ್ಭದಲ್ಲಿ ಗಮನಿಸಬೇಕು. ಭಾಷಾಂತರದ ಗಾತ್ರ ಮೂಲದ ಗಾತ್ರಕ್ಕಿಂತ ತೀರ ಕಿರಿದಾಗಲಿ ತೀರ ದೊಡ್ಡದಾಗಲಿ ಆಗಿರಬಾರದು. ಒಟ್ಟಿನಲ್ಲಿ ಈ ಗಾತ್ರ ವ್ಯತ್ಯಾಸ ಗಮನಾರ್ಹವಾಗಿ ಪರಿಣಮಿಸಬಾರದು. ಒಂದು ಭಾಷೆಯಿಂದ ಇನ್ನೊಂದು ಭಾಷೆಗೆ ಭಾಷಾಂತರಿಸುವ ಸಂದರ್ಭದಲ್ಲಿ, ಭಾಷೆಯ ಅಗತ್ಯಗಳಿಂದಾಗಿ, ವಿಸ್ತಾರ ಅಗತ್ಯವಾಗಬಹುದು. ಇಂಥದನ್ನು ವಿಸ್ತಾರವೆನ್ನುವುದೂ ಉಚಿತವಲ್ಲ. ಆದರೆ, ಒಂದು ಕಡೆ ಹೀಗೆ ವಿಸ್ತರಿಸಿಕೊಂಡ ಭಾಷೆಯ ಮತ್ತೊಂದು ಕಡೆ ಸಂಕೋಚನಕ್ಕೂ ಅವಕಾಶ ಮಾಡಿಕೊಡುತ್ತದೆ. ಹೀಗಾಗಿ ಒಟ್ಟಿನಲ್ಲಿ ಸಮತೋಲನ ಸ್ಥಾಪಿತವಾಗಿಯೇ ತೀರುತ್ತದೆ. ಇಲ್ಲವಾದಲ್ಲಿ ಈ ಅತಿಯಾದ ವಿಸ್ತಾರ ಅಥವಾ ಅತಿಯಾದ ಸಂಕೋಚನ ಭಾಷಾಂತರದ ದೋಷವಾಗಿರುತ್ತದೆಂದು ಹೇಳಬೇಕಾಗುತ್ತದೆ."[೨]

ಶ್ಲೇಷಾರ್ಥಗಳೂ ಬಹ್ವರ್ಥಗಳೂ ಇರುವಂಥ ಸಂದರ್ಭಗಳಲ್ಲಿಯೂ ಉದ್ದಿಷ್ಟ ಭಾಷೆಯಲ್ಲಿ ಶ್ಲೇಷಾರ್ಥಕ, ಬಹ್ವರ್ಥಕ ಸಂವಾದಿ ಶಬ್ದಗಳನ್ನು ಕಂಡುಕೊಳ್ಳಲು ಸಾಧ್ಯವಾಗದೆ ಹೋಗಬಹುದು. ಇವು ಬೇರೆ ಬೇರೆ ಸಂದರ್ಭಗಳು ಬಂದಲ್ಲಿ ಅಂಥ ಸಮಸ್ಯೆ ಉದ್ಭವಿಸಲಾರದಾದರೂ, ಒಂದೇ ಪ್ರಸಂಗದಲ್ಲಿ ಎರಡು ಅಥವಾ ಹಲವು ಅರ್ಥಗಳನ್ನು ಧ್ವನಿಸುವಂತಿದ್ದಲ್ಲಿ, ಅದೇ ರೀತಿ ಭಾಷಾಂತರಿಸಿಕೊಳ್ಳಲು ಸಾಧ್ಯವಾಗದೆ ಹೋಗಬಹುದು.

ಉದಾಹರಣೆಗೆ "ಅಭಿಜ್ಞಾನ ಶಾಕುಂತಲ' ನಾಟಕದ ನಾಂದೀ ಪದ್ಯವನ್ನು ಗಮನಿಸಬಹುದು.

> ಯಾ ಸೃಷ್ಟಿಃ ಸ್ರಷ್ಟುರಾದ್ಯಾ ವಹತಿ ವಿಧಿಹುತಂ ಯಾ ಹವಿರ್ಯಾ ಚಹೋತ್ರೀ
> ಯೇ ದ್ವೇ ಕಾಲಂ ವಿಧತ್ತಃ ಶ್ರುತಿ ವಿಷಯಗುಣಾಯಾ ಸ್ಥಿತಾ ವ್ಯಾಪ್ಯ ವಿಶ್ವಮ್।
> ಪ್ರತ್ಯಕ್ಷಾಭಿಃ ಪ್ರಸನ್ನಸ್ತನುಭಿರವತು ವಸ್ತಾಭಿರಷ್ಟಾಭಿರೀಶಃ॥"[೩]

ಇದಕ್ಕೆ ಈಶ್ವರನ ಪರವಾದ ಅರ್ಥ ಈ ರೀತಿ ಆಗುತ್ತದೆ. ಯಾರು ವಿಧಾತನ ಮೊದಲ ಸೃಷ್ಟಿಯೋ, ಯಾರು ವಿಧಿಪೂರ್ವಕವಾಗಿ ಅರ್ಪಿಸಿದ ಹವಿಸ್ಸನ್ನು ಸ್ವೀಕರಿಸುತ್ತಾನೆಯೋ, ಯಾರು ಹೋತೃವಾಗಿರುತ್ತಾನೆಯೋ, ಯಾರು ಎರಡು ಕಾಲಗಳನ್ನು ಗೊತ್ತುಪಡಿಸುತ್ತಾನೆಯೋ, ಶ್ರುತಿವಿಷಯವಾದ ಶಬ್ದ ಯಾರ ಗುಣವಾಗಿದೆಯೋ, ಯಾರು ವಿಶ್ವವನ್ನು ವ್ಯಾಪಿಸಿಕೊಂಡಿದ್ದಾನೆಯೋ, ಯಾರನ್ನು ಸರ್ವಬೀಜ ಪ್ರಕೃತಿ ಎಂದೂ ಕರೆಯುತ್ತಾರೋ, ಯಾರಿಂದಾಗಿ ಎಲ್ಲ ಪ್ರಾಣಿಗಳೂ ಜೀವಂತವಾಗಿರುತ್ತವೆಯೋ ಆ ಪ್ರತ್ಯಕ್ಷ ಅಷ್ಟಮೂರ್ತಿಗಳಿಂದ ಕೂಡಿದ ಈಶ್ವರನು ನಿಮ್ಮನ್ನು ರಕ್ಷಿಸಲಿ.

ಶಕುಂತಲಾ ದುಷ್ಯಂತರ ಪರವಾಗಿ ಈ ಪದ್ಯಕ್ಕೆ ಅರ್ಥ ಮಾಡುವಾಗ ಮೂಲದ ಶಬ್ದಗಳಿಗೆ ಈ ರೀತಿಯಲ್ಲಿ ಅರ್ಥವನ್ನು ಕಲ್ಪಿಸಬೇಕೆಂಬುದು 'ದಶರೂಪಕ'ದ ಕರ್ತೃವಾದ ಧನಂಜಯನ ಅಭಿಪ್ರಾಯವಾಗಿದೆ.

“ಯಾ ಸೃಷ್ಟಿಃ ಸ್ರಷ್ಟುರಾದ್ಯಾ’ ಎಂಬುದರಿಂದ ‘ಶಕುಂತಲೆ’ ಸೂಚಿತಳಾಗಿದ್ದಾಳೆ(ಏಕೆಂದರೆ ಅಲ್ಲಿಯವರೆಗೆ ಅವಳಂಥ ಸುಂಧರ ಸ್ತ್ರೀ ಹುಟ್ಟಿರಲಿಲ್ಲವಾದುದರಿಂದ ಆದ್ಯತ್ವ ಆಕೆಗೆ ಪ್ರಾಪ್ತವಾಗುತ್ತದೆ).

‘ಯಾ ವಿಧಿಹುತಂ ಹವಿರ್ವಹತಿ’ ಎಂಬುದರಿಂದ ‘ಶಕುಂತಲೆ’ಯ ಗರ್ಭಧಾರಣೆ ಸೂಚಿತವಾಗಿದೆ (ಹೇಗೆಂದರೆ, ಸುರತ ವಿಧಿಯಿಂದ ಪ್ರದತ್ತವಾದ ವೀರ್ಯ ರೂಪದ ಹವಿಸ್ಸನ್ನು ಧರಿಸಿದ್ದಾಳೆ).

‘ಯಾಚ ಹೋತ್ರೀ’ ಎಂಬುದು ಕಣ್ವರನ್ನು ಸೂಚಿಸುತ್ತದೆ.

‘ಯೇ ದ್ವೇ ಕಾಲಂ ವಿಧತ್ತಃ’ ಎಂಬುದು ಶಕುಂತಲೆಯ ಇಬ್ಬರು ಸಖಿಯರಾದ ಅನಸೂಯಾ ಮತ್ತು ಪ್ರಿಯಂವದೆಯರನ್ನು ಸೂಚಿಸುತ್ತದೆ(ಏಕೆಂದರೆ ಅವರು ಶಾಪಾವಸಾನ ಕಾಲವನ್ನು ಸೂಚಿಸುತ್ತಾರೆ).

‘ಶೃತಿ ವಿಷಯಗುಣಾ ಯಾ ವಿಶ್ವಂ ವ್ಯಾಪ್ಯಸ್ಥಿತಾ’ ಎಂಬುದರಿಂದ ಶಕುಂತಲೆಯ ಪ್ರತ್ಯಾಖ್ಯಾನ ಅಥವಾ ಕಥೆ ಸೂಚಿತವಾಗಿದೆ.

‘ಯಾಂ ಸರ್ವಬೀಜ ಪ್ರಕೃತಿರಿತ್ಸಾಹುಃ’ ಎಂಬುದು ಭರತ ಹುಟ್ಟಿದುದನ್ನು ಸೂಚಿಸುತ್ತದೆ (ನಾಟಕದ ಸುಖಾಂತ್ಯವೂ ಇದರಿಂದ ಸೂಚಿಸುತ್ತದೆ). (ಅಂದರೆ ದುಷ್ಯಂತ ಶಕುಂತಲೆಯರ ಪುನಸ್ಸಮಾಗಮದಿಂದ ಎಲ್ಲ ಸಹೃದಯರೂ ಪ್ರಸನ್ನಗೊಳ್ಳುತ್ತಾರೆ ಎಂದರ್ಥ).

ಭಾಷಾಂತರಕಾರ ಸ್ವತಃ ಪ್ರತಿಭಾಶಾಲಿಯಾಗಿದ್ದರೂ, ಭಾಷಾ ಸಂಬಂಧವಾದ ಅಥವಾ ಇತರ ಕೆಲವು ಕಾರಣಗಳಿಂದಾಗಿ ಮೂಲಕ್ಕೆ ಸಾದೃಶ್ಯವಾದ ಭಾಷಾಂತರವನ್ನು ಕೊಡಲಾರದೆ ಹೋದಾಗ ಮಾತ್ರ, ಅಂಥ ಅನುವಾದವನ್ನು ‘ಅಧೋನುವಾದ’ವೆನ್ನಲಾಗುತ್ತದೆ. ಇಂಥ ಒಂದು ಉದಾಹರಣೆಯನ್ನು ‘ಶಾಕುಂತಲ’ದ ಐದನೆಯ ಅಂಕದಲ್ಲಿ ಶಕುಂತಲೆ ಗೋಪ್ಯ ಪ್ರಸಂಗವೊಂದನ್ನು ಬಹಿರಂಗಪಡಿಸಿ ಹೇಳುವಾಗ,

‘ತದಾ ತ್ವಮಿತ್ಥಂ ಪ್ರಹಸಿತೋರಿಸಿ ಸರ್ವ ಸಗಂಧೇಷು ವಿಶ್ವಸಿತಿ ದ್ವಾವಪ್ಯತ್ರಾರಣ್ಯಕಾಮಿತಿ’ ಎಂಬ ಮಾತಿದೆ.

ಇದರ ಅನುವಾದ,

ಆಗ ಎಲ್ಲರಿಗೂ ತಮ್ಮ ತಮ್ಮ ಜನರಲ್ಲೇ ನಂಬಿಕೆ, ನೀವಿಬ್ಬರೂ ಕಾಡು ಪ್ರಾಣಿಗಳು ಎಂದು ನೀನು ಹಾಸ್ಯ ಮಾಡಿದೆ.

ಈ ಪ್ರಸಂಗದಲ್ಲಿ ‘ಸಗಂಧೇಷು’ ಎಂಬ ಮಾತು ‘ತಮ್ಮ ತಮ್ಮ ಜನರಲ್ಲೇ’ ಎಂಬುದಾಗಿ ಅನುವಾದಗೊಂಡಿದೆ. ಆದರೆ, ‘ಸಗಂಧ’ ಎಂಬ ಮಾತು ವಿಶೇಷಾರ್ಥದಲ್ಲಿ ಬಳಕೆಯಾಗಿದೆ. ‘ಸಮಾನಃ(ಅಥವಾ ಸದೃಶ್ಯಃ) ಗಂಧೋಂಯೇಷಾಂ ತೇ ಸಗಂಧಃ’ ಎಂಬ ಮಾತು ವ್ಯಾಕರಣ ಸಮ್ಮತ ವಿಶ್ಲೇಷಣೆಯನ್ನು ಮೀರಿ ನಿಲ್ಲುವ ಅಂಶವೊಂದು ಇಲ್ಲಿದೆ. ಪ್ರಾಣಿಗಳು ಮೂಸಿ ನೋಡುವ ಮೂಲಕ ತಮ್ಮವರನ್ನು ಗುರುತಿಸುತ್ತವೆಯಷ್ಟೆ. ಹೀಗೆ, ವಾಸನೆಯನ್ನು ಹಿಡಿದು ತಮ್ಮವರೆಂದು ಗುರುತಿಸಲಾಗುವ ವ್ಯಕ್ತಿಗಳನ್ನು ‘ಸಗಂಧಃ’ ಎಂಬ ಮಾತು ಸೂಚಿಸುತ್ತದೆ. ಈ ಸೂಕ್ಷ್ಮವನ್ನು ‘ತಮ್ಮ

ತಮ್ಮ ಜನ' ಎಂಬ ಮಾತು ಸಂಪೂರ್ಣವಾಗಿ ಧ್ವನಿಸುವುದಿಲ್ಲ. 'ಸಗಂಧಿ'ಗಳಲ್ಲಿ ಎಂದು ಮೂಲ ಶಬ್ಧವನ್ನೇ ಬಳಸಿಕೊಂಡರೂ ಉದ್ದಿಷ್ಟಭಾಷೆಯ ಭಾವನೆಯನ್ನು ಮೂಡಿಸದೆ ಹೋಗಬಹುದು. ಏಕೆಂದರೆ, ಇಂತಹ ಪಾರಿಭಾಷಿಕ ಉಪಯೋಗ ಉದ್ದಿಷ್ಟ ಭಾಷೆಯಲ್ಲಿ ಇಲದೇ ಇರಬಹುದು ಉಳಿದಂತೆ, ಎಲ್ಲ ಭಾವವಿಭಾವಗಳೂ ಭಾಷಾಂತರದಲ್ಲಿ ಅವತರಿಸಿದ್ದು, ಇತರ ಕಾರಣಗಳಿಂದಾಗಿ ಹೀಗೆ ಆಂಶಿಕವಾಗಿ ಮಾತ್ರ ಮೂಲಕ್ಕಿಂತ ಹಿಂದೆ ಉಳಿಯುವ ಭಾಷಾಂತರಗಳನ್ನು 'ಅಧೋನುವಾದ'ವೆಂದು ಕರೆಯಲಾಗುತ್ತದೆ".[೪]

**'ಶಾಕುಂತಲ' ನಾಟಕದ ಒಂದು ಪದ್ಯ**

ಗ್ರೀವಾಭಂಗಾಭಿರಾಮಂ ಮುಹುರುನುಪತತಿ ಸ್ಯಂದನೇ ದತ್ತ ದೃಷ್ಟಿಃ।
ಪಾಶ್ಚಾರ್ಧೇನ ಪವಿಷ್ಟಃ ಶರಪತನಭಯಾದ್ಭೂಯಸಾ ಪೂರ್ವಕಾಯಮ್॥
ದುರ್ಭೈರರ್ಧಾವಲೀಢೈಃ ಶ್ರಮವಿವೃತಮುಖಭ್ರಂಶಿಭಿಃ ಕೀರ್ಣವರ್ತ್ಮಾ।
ಪಶ್ಯೋದಗ್ರ ಪ್ಲುತತ್ವಾದ್ವಿಯುತಿ ಬಹುತರಂ ಸ್ತೋಕಮುರ್ವ್ಯಾಂ ಪ್ರಯಾತಿ॥೧॥

**ಅನುವಾದ**

ಕೊರಲಂ ತಾಂ ಕೊಂಕುಗೆಯ್ಯುತ್ತಡಿಗಡಿಗೊಡನೈತರ್ಪ ತೇರಲ್ಲಣಂ ನ।
ಟ್ಟಿರೆ ನೋಟಂ ಬಾಣಪತಕ್ಕಗಿದಿರುಕಿಸುತಂ ಪೃಷ್ಠಮಂ ಮಾರ್ಗದೊಳ್ತೀ॥
ವಿರೆ ನೀಡಂ ಬಿಟ್ಟ ಬಾಯಿಂ ಶ್ರಮದುದಿರ್ವರೆಮೆಲ್ದಿರ್ದ ದರ್ಭಾಂಕುರಂಗಾಳ್।
ಧರೆಯಲ್ಲೋರೊರ್ಮೆ ಕಾಲಿಟ್ಟಿಹ ನಿರುಕಿಸೈ ಬಾನೋಳೇ ಪಾರಿ ಪೋಕುಂ॥"[೫]

ಈ ಅನುವಾದದಲ್ಲಿ ಬಹುಮಟ್ಟಿಗೆ ಮೂಲದ ಸತ್ಯ ಸೌಂದರ್ಯಗಳು ಮಾಯವಾಗಿಲ್ಲ. ಮೂಲದಂತೆಯೇ ಆಕರ್ಷಣೀಯವಾಗಿದೆ. 'ಬಣ್ಣ ಬೇರೆಯಾದರೂ ಒಂದೇ ಅಚ್ಚಿನಿಂದ ಬಂದ ಎರಡು ಬೊಂಬೆಗಳಂತೆ ಕಂಡುಬರುತ್ತದೆ.' ಮೂಲದ ಭಾವ ಮೂರ್ತವೂ ಸರಳವೂ ಆಗಿರುವುದರಿಂದ ಭಾಷಾಂತರಕ್ಕೆ ವಿಶಿಷ್ಟವಾದ ತೊಡಕುಗಳೇನೂ ಉಂಟಾಗಿಲ್ಲ. ಹೀಗಾಗಿ ಈ ಭಾಷಾಂತರ ಸರಳವೂ, ಸುಂದರವೂ ಆಗಿದೆ. ಕಾವ್ಯ ಎಲ್ಲ ಕಡೆಯಲ್ಲೂ ಇಷ್ಟೇ ಮೂರ್ತವೂ, ಸರಳವೂ ಆಗಿರುವುದು ಸಾಧ್ಯವಿಲ್ಲ. ಬಳಿಕ ಬೆಳಕಿಗೆ ಬಂದದ್ದು ಚುರಮರಿ ಶೇಷಗಿರಿರಾಯರ ಅಭಿಜ್ಞಾನ ಶಾಕುಂತಲದ ಅನುವಾದ(೧೮೭೦). ಕನ್ನಡ ಮರಾಠಿ ಎರಡೂ ಭಾಷೆಗಳಿಗೆ ಮಾತೃಸ್ಥಾನದಲ್ಲಿರುವ ಪ್ರಥಮ ಹೊಸ ಬಗೆಯ ಸಂಗೀತ ಮಾರ್ಗೀಕೃತಿ. ಪ್ರಾಸ್ತಾವಿಕ ಪದ್ಯಗಳಲ್ಲಿ ತಮ್ಮದು 'ಭಾಷಾಂತರ' ಎಂದಿದ್ದರೂ ಅದು ಅಕ್ಷರಶಹಃ ಕಾಳಿದಾಸನ 'ಪ್ರಯೋಗ ಪ್ರಧಾನಂ ಹಿ ನಾಟ್ಯಶಾಸ್ತ್ರಂ' ಉಕ್ತಿಯನ್ನು ನೆನೆದೊ ಏನೊ ತಾವು ಅನುವಾದಿಸುತ್ತಿರುವುದು ನಾಟಕ, ನಾಟಕದ ಪರಮೋದ್ದೇಶ ಪ್ರೇಕ್ಷಕರ ಮೆಚ್ಚಿಗೆ ತಮ್ಮ ಅನುವಾದ ಕನ್ನಡದಲ್ಲಿ, ಪ್ರೇಕ್ಷಕರು ಕನ್ನಡಿಗರು, ಅವರ ಸಂತೃಪ್ತಿಯಲ್ಲಿಯೇ ತಮ್ಮ ಕೃತಕೃತ್ಯತೆ ಎಂದು ಬಗೆದು ತಮಗೆ ಉಚಿತವೆನಿಸಿದ ಬದಲಾವಣೆ, ನ್ಯೂನಾತಿರೇಕ ಭಾಷಾವ್ಯತ್ಯಾಸ, ಇತ್ಯಾದಿಗಳೊಂದಿಗೆ ಮುಂದುವರಿದಂತಿದೆ.

ಉದಾಹರಣೆಗಾಗಿ ಎರಡನೇ ಅಂಕದ ಪ್ರಾರಂಭದಲ್ಲಿ ವಿದೂಷಕನು ತನ್ನ ಗೋಳನ್ನು ತೋಡಿಕೊಳ್ಳುತ್ತಿರುವಾಗ ದುಷ್ಯಂತನು ಅರಣ್ಯ ಕುಸುಮ ಮಾಲೆಗಳನ್ನು ಧರಿಸಿದ ಯವನ ಪರಿಚಾರಿಕೆಯೊಂದಿಗೆ ಪ್ರವೇಶಿಸುತ್ತಾನೆ. ಬಹುಪಾಲು ಅನುವಾದಗಳಲ್ಲಿ ಮೂಲದಲ್ಲಿರುವ 'ಯವನೀಭಿಃ' ಓದಲು ಯವನ ಸ್ತ್ರೀಯರು, ಯವನ ಹೆಂಗಳೆಯರು ಎಂದಿದೆ. ಚುರಮರಿ ಧಾರವಾಡದವರು. ಅಲ್ಲಿ ಬೇಡರ ಸಂಖ್ಯೆ ಜಾಸ್ತಿಯಿದೆ. ಬೇಟೆ ಅವರ ಮುಖ್ಯ ಜೀವನೋಪಾಯವಿದ್ದಿತು.

ಚುರಮರಿ ವಿದೂಷಕನನ್ನು ಕನ್ನಡ ಯಕ್ಷಗಾನ ಮತ್ತು ಸದೃಶ ಆಟಗಳಿಗೆ ವಿಶಿಷ್ಟವಿರುವ ತತ್ಸಮ ಪಾತ್ರ 'ಹನುಮನಾಯಕ' ಎಂದು ಹೆಸರಿಸಿ ಅವನಿಗಾಗಿ ಉತ್ತರ ಕರ್ನಾಟಕದ ಭಾಗದಲ್ಲಿ ಪ್ರಚಾರದಲ್ಲಿರುವ ಗ್ರಾಮ್ಯಭಾಷೆಯನ್ನು ನಿಯೋಜಿಸಿದ್ದರಿಂದ 'ಬ್ಯಾಡತಿ' ಎಂದಿದ್ದಾರೆ. ವಿದೂಷಕನು ಹನುಮನಾಯಕನನ್ನಾಗಿಸಿ ಆ ಪಾತ್ರಕ್ಕೆ ಕನ್ನಡದ ಮೆರಗು ಕೊಟ್ಟಿದ್ದಾದರೂ ಪ್ರೇಕ್ಷಕರ ಸಂತೋಷಕ್ಕಾಗಿಯೇ, ಎಂದಿದ್ದಾರೆ.

ರಂಗಭೂಮಿಗಾಗಿಯೇ ಜೀವನವನ್ನು ಸವೆಸಿದ ಶ್ರೀರಂಗರು ಚುರಮರಿಯವರ ಸಾಧನೆಯನ್ನು 'ಸರಳವಾದ ಗದ್ಯ ಮತ್ತು ಹಾಡುಗಳಿಂದ ಕೂಡಿದ ಅದ್ಭುತ ಭಾಷಾಂತರ' ಎಂದು ಪ್ರಶಂಸಿಸಿದ್ದಾರೆ (ಭಾ.ರಂ.ಭೂ.ಪು.೧೪೪). ತತ್ಪೂರ್ವದಲ್ಲಿ ಚುರಮರಿ ಅನುವಾದಕ್ಕೆ ಮುನ್ನುಡಿ ರೂಪದಲ್ಲಿ ಪ್ರಕಟವಾದ ಮುದವೀಡರ ವಿಮರ್ಶೆ ಅವರ ಈ ಮಾತಿನ ವಿಸ್ತರಣ ಎನ್ನುವಂತಿದೆ. ತಮ್ಮ ವಿಮರ್ಶೆಯಲ್ಲಿ ಮುದವೀಡು ಅವರು "ಮೂಲ ಶಾಕುಂತಲದಲ್ಲಿರುವ ಅಗಾಧವಾದ ಕಲ್ಪನಾ ಚಮತ್ಕೃತಿ, ಅಸದೃಶವಾದ ವರ್ಣಣಾಚಾತುರ್ಯ, ಅನನ್ಯ ಸಾಧಾರಣವಾದ ಅಲಂಕಾರ ನಿಯೋಜನೆ ಮೊದಲಾದ ಕಾಳಿದಾಸನ ಕಲಾವೈಶಿಷ್ಟ್ಯಗಳನ್ನು ಅಚ್ಚಗನ್ನಡದ ಮೂಸೆಯಲ್ಲಿ ಎರಕ ಹೊಯ್ಯುವಾಗ ಶೇಷಗಿರಿರಾಯರು ತಮಗೆ ನಿಸರ್ಗಸಿದ್ಧವಾದ ಕವಿತ್ವ ಪ್ರತಿಭೆಯ ಪ್ರಭಾವದಿಂದ ಚೆನ್ನಾಗಿ ವಿಕಾಸಗೊಳಿಸಿ ಮೂಲ ಕೃತಿಯ ಅಂದಚಂದಗಳಿಗೆ ಹೆಚ್ಚಿನ ಸಿಂಗಾರವನ್ನು ತಂದುಕೊಟ್ಟಿರುವರು" ಎಂದಿರುವರು.

ಗದ್ಯದ ವಿಷಯದಲ್ಲಿ "ನಾಟಕದ ಭಾಷೆಯು ಅಷ್ಟು ಮಟ್ಟಿಗೂ ಕ್ಲಿಷ್ಟವಾಗಿರದೆ, ಸಾಮಾನ್ಯವಾಗಿ ದೇಶದಲ್ಲಿ ಬಳಕೆಯಲ್ಲಿದ್ದ ಭಾಷೆಯೇ ಅದರಲ್ಲಿ ಉಪಯೋಗಿಸಲ್ಪಡಬೇಕೆಂಬುದು ಸ್ಪಷ್ಟವಾಗಿದೆ. ಶೇಷಗಿರಿರಾಯರು ಈ ತತ್ವವನ್ನು ಕಂಡುಹಿಡಿದು ತಮ್ಮ ಕಾಲಕ್ಕೆ ಈ ಸೀಮೆಯಲ್ಲಿ(ಧಾರವಾಡ) ಪ್ರಚಾರದಲ್ಲಿದ್ದ ಸರಳವಾದ ಸುಲಭವಾದ ಆದರೂ ಪರಿಶುದ್ಧವಾದ ಭಾಷಾಶೈಲಿಯನ್ನೇ ಅನುಸರಿಸಿರುವುದು ಕಂಡುಬರುತ್ತದೆ. ವಿದೂಷಕ ಹಾಗೂ ಮೀನುಗಾರ ಇವೆರಡೂ ಪಾತ್ರಗಳನ್ನು ಬಿಟ್ಟು ಎಲ್ಲಾ ಪಾತ್ರಗಳ ಮಾತುಗಳು ಸುಸಂಸ್ಕೃತ ಸಮಾಜದಲ್ಲಿ ವಾಡಿಕೆಯಾಗಿ ಬಳಕೆಯಲ್ಲಿರುವ ಭಾಷಾಸರಣಿಯಲ್ಲಿ ಬರೆಯಲ್ಪಟ್ಟಿವೆ. ವಿದೂಷಕ ಮತ್ತು ಮೀನುಗಾರ ಇವರ ಬಾಯಿಯಲ್ಲಿ ಮಾತ್ರ ಇತ್ತ ಕಡೆಯ ಗ್ರಾಮ್ಯಭಾಷೆಯು ನಿಯೋಜಿತವಾಗಿದೆ."

ಹಾಡು ಅಥವಾ ಪದ್ಯಗಳ ವಿಷಯದಲ್ಲಿ "ಪದಗಳು ಕರ್ನಾಟಕ ಹಾಗೂ ದೇಶದಲ್ಲಿ ಪುರಾತನ ಕಾಲದಿಂದಲೂ ಜ್ಞಾನಭಕ್ತಿ ವೈರಾಗ್ಯಗಳ ಜೊತೆಯಲ್ಲಿಯೇ ನ್ಯಾಯ ನೀತಿ ನಡಾವಳಿಗಳನ್ನು

ಸಾಮಾನ್ಯವಾಗಿ ಜನಾಂಗಕ್ಕೆಲ್ಲ ಬೋಧಿಸುತ್ತ ಮನುಷ್ಯ ಪ್ರಪಂಚವನ್ನೇ ಪರಮಾರ್ಥಮಯವಾಗಿ ಮಾಡಿದ ಭಗವದ್ಭಕ್ತರ ದಿವ್ಯವಾಣಿಯ ಸಮುಚ್ಚಯುವಾಗಿರುವ 'ದಾಸಕೂಟ ವಾಙ್ಮಯ'ದ ಲಲಿತ ಬಂಧ ಸರಣಿಯನ್ನು ಅನುಸರಿಸಿರುತ್ತವೆ. ಕಂದವೃತ್ತಾದಿ ಪದ್ಯಗಳು ಕೂಡ ಬಹುಮಟ್ಟಿಗೆ ಸುಲಭವೂ ಸರಳವೂ ಆದ ಶೈಲಿಯಲ್ಲಿಯೇ ಬರೆಯಲ್ಪಟ್ಟಿವೆ. ಆದರೂ ಹಲವು ಕಡೆಗೆ ಹಳಗನ್ನಡ ಪ್ರತ್ಯಯಗಳಿಂದ, ಅಲ್ಪ ಸ್ವಲ್ಪ ಹಳಗನ್ನಡ ಪ್ರಯೋಗಗಳಿಂದ ಕೊಂಚ ಮಟ್ಟಿಗೆ ಕಠಿಣವಾಗಿ ತೋರಬಹುದು. ಆದರೆ ಇಂಥ ಸಂದರ್ಭಗಳು ತೀರ ಕಡಿಮೆ." ದೋಷಗಳ ವಿಚಾರದಲ್ಲಿ "ಶೇಷಗಿರಿರಾಯರ ಪದ್ಯಗಳಲ್ಲಿ ಛಂದಶ್ಶಾಸ್ತ್ರದ ದೋಷಗಳಿರಬಹದು. ಶಬ್ದಮಣಿದರ್ಪಣ ಶಬ್ದಾನುಶಾಸನ ಸೂತ್ರಗಳ ಒರೆಗಲ್ಲಿಗೆ ಹಚ್ಚಿದಲ್ಲಿ ವ್ಯಾಕರಣ ದೋಷಗಳೂ ಹಲಕೆಲವು ಹೊರಡಬಹುದು. ಸಾಹಿತಿಗಳೆಂದು ಶಾಸ್ತ್ರಾಭ್ಯಾಸ ನಿಪುಣರಿಗೆ ಇಂಥವು ಸರಿಬರಲಾರವೆಂಬುದು ಕಟ್ಟಿಟ್ಟ ಮಾತೇ ಸರಿ. ಆದರೆ ಶೇಷಗಿರಿರಾಯರು ಇದನ್ನು ಬರೆದ ಕಾಲ, ಅವರು ಬೆಳೆದ ಪರಿಸ್ಥಿತಿ, ಅವರು ಕಲಿತ ಶಿಕ್ಷಣ ಮೊದಲಾದ ಆನುಷಂಗಿಕ ಸಂಗತಿಗಳನ್ನೆಲ್ಲ ಮನಸ್ಸಿಗೆ ತಂದು ನೋಡಿದರೆ ಇಂಥ ದೋಷಗಳನ್ನು ಆರ್ಷ ಪ್ರಯೋಗ ಎಂಬ ಕಾವ್ಯಲಕ್ಷಣದಲ್ಲಿ ಸೇರಿಸುವುದು ಸೂಕ್ತವೆನಿಸುವದು" ಎಂದಿರುವರು.

ಮುಂದೆ ೧೧ ವರ್ಷಗಳ ನಂತರ ಅಂದರೆ ೧೮೮೧ರಲ್ಲಿ ಮೈಸೂರ ಅರಸು ಚಾಮರಾಜರ ಆದೇಶಾನುಸಾರ ಅವರ ಆಸ್ಥಾನಕವಿ ಬಸವಪ್ಪಶಾಸ್ತ್ರಿಗಳ 'ಕರ್ಣಾಟಕ ಶಾಕುಂತಲ ನಾಟಕ'ವು ಪ್ರಕಟವಾಯಿತು. ರಂಗಕ್ಕೂ ಬಂದಿತು. ಹೊಸಗನ್ನಡ ಗದ್ಯ ಹಳಗನ್ನಡ ಪ್ರಚುರ ಪದ್ಯಗಳಿಂದ (ಕಂದವೃತ್ತ) ಕೂಡಿದ ಅವರ ಅನುವಾದವು ಭಾಷಾಂತರ ದೃಷ್ಟಿಯಿಂದ ಸಾಹಿತ್ಯ ಕ್ಷೇತ್ರದಲ್ಲೊಂದು ಮೌಲಿಕ ಕೃತಿಯೆಂದು ಗಣಿಸಲ್ಪಟ್ಟಿದ್ದು ತಾತ್ಕಾಲಿಕವಾಗಿ ಆಸ್ಥಾನ ಮತ್ತು ಅನ್ಯ ಪಂಡಿತ ಮಂಡಳಿಯ, ಸ್ವಯಂ ಅರಸರ ಮೆಚ್ಚಿಗೆಗೆ ಪಾತ್ರವಾಗಿ ಅವರಿಗೆ "ಅಭಿನವ ಕಾಳಿದಾಸ" ಎಂಬ ಬಿರುದನ್ನು ಗಳಿಸಿಕೊಟ್ಟಿತು.

ಸಾಹಿತ್ಯಕ ದೃಷ್ಟಿ ಪುಟ ಪುಟಗಳಲ್ಲಿ ವ್ಯಕ್ತವಾಗಿದ್ದರೂ ಅದರ ಜನ್ಮ ಪ್ರಾಮುಖ್ಯವಾಗಿ ರಂಗಕ್ಕೆಂಬುದನ್ನು ಮನಗಂಡು ಪ್ರದರ್ಶನಕ್ಕೆ ಅನುಕೂಲವಾಗಲೆಂದು ಒಂದು ಕಾಲಾಂಶದಷ್ಟು ಪದ್ಯಗಳನ್ನು ಬೇರೆ ಬೇರೆ ರಾಗದಾರಿ ಹಾಡುಗಳಲ್ಲಿ ಪರಿವರ್ತಿಸಿ ಕೆಳಗೆ ಟಿಪ್ಪಣಿಗಳನ್ನು ಕೊಡಲಾಗಿದೆ.

ಚುರಮರಿ ಕೃತಿ ವಿಮರ್ಶನ ಸಂದರ್ಭದಲ್ಲಿ ಮುದವೀಡು ಕೃಷ್ಣರಾಯರು ಆನುಷಂಗಿಕವಾಗಿ ಶಾಸ್ತ್ರಿಗಳ ಕೃತಿಯನ್ನು ಉಲ್ಲೇಖಿಸಿ ಅದೊಂದು "ಹೊಸಗನ್ನಡ ಗದ್ಯದಿಂದೊಡಗೂಡಿ ಪದ್ಯಗಳಲ್ಲಿ ಶಾಸ್ತ್ರಿಗಳವರ ಅಗಾಧ ಪಾಂಡಿತ್ಯಕ್ಕೆ ಅನುರೂಪವಾಗುವಂಥ ಹಳಗನ್ನಡ ನುಡಿದಾರಿಯನ್ನೊಳಗೊಂಡ ಪಂಡಿತ ಪ್ರಬುದ್ಧ ಪ್ರಿಯವಾಗಿ ಮೂಲದ ಪ್ರತಿಬಿಂಬವೇ ಆಗಿರುವದೆನ್ನಲು ಅಡ್ಡಿಯಿಲ್ಲ. ಮೂಲವನ್ನು ಪ್ರಕೃತಿಯಲ್ಲಿ ಇದ್ದಕ್ಕಿದ್ದಂತೆಯೇ ಆದರೂ ಸೊಗಸಾಗಿ ಸುಂದರವಾಗಿ ಸುಮನೋಹರವಾಗಿ ಒಡಮೂಡಿಸಿ ಕೊಡಬಲ್ಲ ಛಾಯಾಚಿತ್ರಕಾರನ ಕಲಾಭಿಜ್ಞತೆಯೂ ನೈಪುಣ್ಯ ವಿಶೇಷವೂ ಕಂಡುಬರುತ್ತವೆ." ಎಂದಿರುವರು.

ಶಾಸ್ತ್ರಿಗಳ ಅನುವಾದದ ಮೇಲ್ಮೈಯನ್ನು ಮನ್ನಿಸಿ ಹಲವು ಲೇಖನಗಳು ಪ್ರಕಟವಾಗಿವೆ. ಅದನ್ನು ಚುರಮರಿ ಅನುವಾದಕ್ಕೆ ಹೋಲಿಸಿ ಯಾವುದು ಹೆಚ್ಚು ಉತ್ತಮ ಎನ್ನುವ ಬಗ್ಗೆ ಅಭಿಪ್ರಾಯಗಳು ವ್ಯಕ್ತವಾಗಿವೆ. ಸಾಹಿತ್ಯ ವಿಮರ್ಶೆಯಲ್ಲಿ ಇದು ನಡೆಯತಕ್ಕದೇ, ಆದರೆ ಚುರಮರಿ ಕೃತಿಗಿರುವ ಮುದವೀಡರ ಮುನ್ನುಡಿಯನ್ನು ಅನುಲಕ್ಷಿಸಿ, “ಅದೆಲ್ಲಿ... ಇದೆಲ್ಲಿ?” ಮುದವೀಡರದು ‘ಅರ್ಥವಿಲ್ಲದ ಪ್ರಾಂತಾಭಿಮಾನ’ ಎಂಬ ಆರೋಪವು(ಕನ್ನಡ ನಾಟಕ, ತ.ಸು.ಶಾಮರಾಯ, ಪು.೧೦೫) ಮಾತ್ರ ಚುರಮರಿ ಅನುವಾದ ರಂಗಭೂಮಿಯೆಂಬುದು ಸ್ಪಷ್ಟವಿದ್ದರೂ ಶಾಸ್ತ್ರಿಗಳ ಕೃತಿಕೂಡ ರಂಗಕ್ಕಾಗಿ ಅರಸರ ಅದೇಶಾನುಸಾರ ಜನ್ಮ ತಾಳಿದ್ದೆಂಬುದು ಗೊತ್ತಿದ್ದರೂ ಶಾಸ್ತ್ರಿಗಳ ಭಾಷಾಂತರ ಕೌಶಲ್ಯವನ್ನಷ್ಟೇ ಎತ್ತಿಕೊಂಡು ಉದಾಹರಣೆಯೆಂದು ಶಾಕುಂತಲದ ಎರಡನೇ ಅಂಕದಲ್ಲಿ ದುಷ್ಯಂತನು ವಿದೂಷಕನಿಗೆ ಶಕುಂತಲೆಯ ಲಾವಣ್ಯಾತಿಶಯವನ್ನು ಬಣ್ಣಿಸುವ ಈ ಕೆಳಗಣ ಕಾಳಿದಾಸ.

ಚಿತ್ರೇ ನಿವೇಶ್ಯ ಪರಿಕಲ್ಪಿತ ಸತ್ವಯೋಗಾ
ರೂಪೋಚ್ಚಯೇನ ಮನಸಾ ವಿಧಿನಾಕೃತಾನು
ಸ್ತ್ರೀರತ್ನ ಸೃಷ್ಟಿರಪರಾ ಪ್ರತಿಭಾತಿ ಸಾಮೇ
ಧಾತುರ್ವಿಭುತ್ವಮನುಚಿಂತ್ಯ ವಪ್ರಶ್ಚ ತಸ್ಯಾಃ॥

ಶಾಸ್ತ್ರಿಗಳು ‘ಪ್ರಾಣ ಬೊಯ್ದನೊ ಚಿತ್ರಿಸುತ್ತಮವಳಂ ಸೌಂದರ್ಯ ಸಾರಂಗಳಿಂ ವಾಣೀವಲ್ಲಭರನೋವೋ ನಿರ್ಮಿಸಿದನೋ ಮೇಣ್ ಚಿತ್ತದಿಂ ಗೆಯ್ದನೋ। ಜಾಣಂ ಬ್ರಹ್ಮನ ಮತ್ತು ಆಕೆಯೊಡಲಂ ನೋಡಲ್ಕದೇನೆಂದೆಪೆಂ.

ಕೋಣೀ ಭಾಗದೆ ಬೇರೆ ತೋರ್ಕುಮೆನಗಾಸ್ತ್ರೀರತ್ನ ಸೃಷ್ಟಿಕ್ರಮಂ॥
ಚುರಮರಿ: ಬಣ್ಣಿಸಿಲ್ಹ್ಯಾಂಗಿನ್ನ ನುಡಿಯಲಿ ಲಾ–
ವಣ್ಯದ ಖಣಿಯನ್ನು ॥ಪ॥
ಕಣ್ಣೊಳು ಕಟ್ಟಿದಾ ಹೆಣ್ಣಿನ ರೂಪವು।
ಎನ್ನೊಳಂಗನ ಸನ್ನಿಧಿಯಂತಿರೆ ॥ಅ.ಪ॥
ಮೊದಲು ಮನಸು ಕೊಟ್ಟು । ವಿಧಿಯು ಚಿತ್ರ ।
ಮುದದಿಂದೆ ಬರೆದಿಟ್ಟು ।
ಅದರ ಮೈಯೊಳು ಜೀವದ ಕಳೆಯನು ತುಂ।
ಬಿದ ಮ್ಯಾಲಿಳೆಯೋಳಗುದಭವಿಸಿದಳೇನೋ ॥೧॥
ಕೈನಡಗುವದೆಂದು । ವಿಧಾತನು ।
ಧ್ಯಾನದೊಳಗೆ ತಂದು ।
ಮೌನದಿಂದತಿಶಯ ಮೋಹದ ರೂಪವ ।

ಥೀನಿಸಿ ಪಡೆದಿಹ ಮಾನಸ ಪುತ್ರಿಯೊ ॥೨॥
ಎಂದಿಗೆ ಬರಬೇಕೈ । ಬ್ರಹ್ಮನಿಗಿಂಥ ।
ಸುಂದರ ಕೃತಿ ಸಾಕೈ ।
ಇಂದಿರಾ ರೂಪವ ಚೆಂದದಿ ಕಲಿತವ ।
ಳಂದದೊಳಿಸಿಹ ನಿಂದೀವರಾಕ್ಷಿಯ ॥೩॥"[೬]

ಈ ಪದ್ಯಗಳನ್ನು ಕೊಟ್ಟು 'ಕೈ ಹುಣ್ಣಿಗೆ ಕನ್ನಡಿ ಬೇಡ' ಎಂದು ಆಕ್ಷೇಪಣೆಯನ್ನು ಉಪಸಂಹರಿಸಿರುವರು.

ಇದು ಹೇಗಿದ್ದರೂ ರಂಗಪ್ರದರ್ಶನ ದೃಷ್ಟಿಯಿಂದ ಬಸವಪ್ಪಶಾಸ್ತ್ರಿಗಳ ಕೃತಿ ಮತ್ತು ಅದರ ಜಾಡಿನಲ್ಲಿ ಅರಮನೆ ರಂಗಕ್ಕೆ ಬಂದ ಅವರ ಮತ್ತು ಅನನ್ಯಪಂಡಿತ ಮಾನ್ಯ ಕೃತಿಗಳು ಸಾಮಾನ್ಯ ಜನತೆಗೆ ಅವೆಷ್ಟು ಸಪ್ಪೆಯಾಗಿದ್ದವೆಂಬುದು ಇತ್ತೀಚೆಗೆ ಬೆಳಕಿಗೆ ಬಂದ ಒಂದು ಮಾತಿನಿಂದ ಗೊತ್ತಾಗುವಂತಿದೆ. ಸ್ವತಃ ಚಾಮರಾಜರ ಕೃಪಾಶ್ರಯದಲ್ಲಿ ಬೆಳೆದ ಮಂಡ್ಯದ ರಂಗಾಚಾರ್ಯರೆಂಬ ನಾಟ್ಯಕಲಾ ಕುಶಲರು ಅರಮನೆ ರಂಗದಿಂದ ಹೊರಬಂದು 'ರಾಜಧಾನಿ ನಾಟಕಮಂಡಳಿ' ಎಂಬ ಜನಪ್ರಿಯ ಮೇಳವನ್ನು ಕಟ್ಟಿ ಅರಮನೆ ಕಂಪನಿಯೊಂದಿಗೆ ಹುರುಡು ಕಟ್ಟಿ ಸೆಣಸಾಡಿದರು. ಅದೇ ಊರಲ್ಲಿ ಅದೇ ರಾತ್ರಿ ಇಕ್ಕೆಲಗಳಲ್ಲಿ ನಾಟಕಗಳು ನಡೆಯತೊಡಗಿದವು. ಆಗ ಮಹಾರಾಜರ ಕೋಪಕ್ಕೆ ಪಾತ್ರರಾಗಬಹುದೆಂಬ ಭೀತಿಯಿಂದ ಸರಕಾರಿ ಉದ್ಯೋಗಿಗಳು ನಿಸ್ಸಾರವಾದ ಅರಮನೆ ಪ್ರದರ್ಶನಗಳಿಗೆ ಹೋಗುತ್ತಿದ್ದರು. ಅರಮನೆ ನಾಟಕ ಶಾಲಾಧ್ಯಕ್ಷ ಅಂಟಿಲ್ ನರಸಿಂಹಯ್ಯಂಗಾರರು ನಾಟಕ ರಂಗವನ್ನು ಅವರೆಲ್ಲರೂ ರಂಗಾಚಾರ್ಯರ ನಾಟಕ ರಂಗವನ್ನು ಬಿಟ್ಟೊಡನೆಯೇ ಅವರೆಲ್ಲರೂ ಇತರ ಕೆಲವು ನಾಟಕಗಳೊಂದಿಗೆ ಶಾಕುಂತಲವನ್ನೂ(ಎಸ್.ಜಿ.ನರಸಿಂಹಾಚಾರ್ಯ, ಕೃತಿ) ಪ್ರದರ್ಶಿಸುತ್ತಿದ್ದರಂತೆ. (ಬಣ್ಣ ಬೆಳಕು, ಎಚ್.ಕೆ.ರಂಗನಾಥ್. ಪು.೬-೭, ಉದ್ಧೃತ) ಹೆಚ್ಚಿನ ಊಹಾಪೋಹ ಅನಗತ್ಯವಾಗಿರಬೇಕು.

ಮುದವೀಡ ಕೃಷ್ಣರಾಯರು ಕೊಟ್ಟ ಉಪರೋಕ್ತ ಅವರತಣಿಕೆಗಳು ಚುರಮರಿ ಕೃತಿಗಿರುವ ಅವರ ಮುನ್ನುಡಿಯಲ್ಲಿಯವು. ಅಭಿವಂದ್ಯರಿರುವ ಇಬ್ಬರ(ಬಸವಪ್ಪಶಾಸ್ತ್ರಿ, ಚುರಮರಿ ಶೇಷಗಿರಿರಾಯ) ವಿಷಯದಲ್ಲಿ ಅವುಗಳಲ್ಲಿ ಒಂದಾದರೂ ಆಕ್ಷೇಪಾರ್ಹ ಮಾತಿಲ್ಲ. ಬದಲಾಗಿ ಹೊಗಳಿಕೆಯೇ ಇದೆ. ಮುನ್ನುಡಿ ಚುರಮರಿ ಶೇಷಗಿರಿರಾಯರ ಅನುವಾದಕ್ಕೇ ಇರುವುದರಿಂದ ಅವರ ವಿಷಯ ಹೆಚ್ಚು ಬಂದಿರುವದು. ಕ್ರಮ ಪ್ರಾಪ್ತ, ಗುಣಗಳೊಂದಿಗೆ ಚುರಮರಿ ಶೇಷಗಿರಿರಾಯರವರ ದೋಷಗಳನ್ನು ತೋರಿಸಲು ಮುದವೀಡು ಕೃಷ್ಣರಾಯರು ಮರೆತಿಲ್ಲ. ಚುರಮರಿ ಶೇಷಗಿರಿರಾಯ, ಬಸವಪ್ಪ ಶಾಸ್ತ್ರಿಗಳ ನಂತರ ಕನ್ನಡದಲ್ಲಿ ಶಾಕುಂತಲದ ಹಲವು ಅನುವಾದಗಳೂ ವೈಶಿಷ್ಟ್ಯಪೂರ್ಣ ಕೃತಿಗಳೂ ಇವೆ.

ಮೂಲದ ವ್ಯಾಸಂಗದಲ್ಲಿ 'ಸ್ವಾರಸ್ಯ ಭೂಮಿ' ಎನಿಸಿದ ಕೆಲವು ಪದ್ಯಗಳಲ್ಲಿನ ಭಾವವಿಕಾಸವನ್ನು ಆಗಾಗ ಮೆಲುಕು ಹಾಕಿ ಸವೆದುಕೊಳ್ಳಲೆಂದು ಅವನ್ನು ಹಾಡುಗಳ ರೂಪದಲ್ಲಿ ಪರಿವರ್ತಿಸಿ, ಸಂದರ್ಭಸೂಚಿ, ಮೂಲ ಬಸವಪ್ಪಶಾಸ್ತ್ರಿಗಳ ಅನುವಾದ ಮತ್ತು ಹಾಡಿನ ರೂಪದಲ್ಲಿರುವ ತಮ್ಮ ಪರಿವರ್ತನೆ ಮೂರನ್ನು ಕೊಟ್ಟಿರುವರು. ತಮ್ಮ ಭೂಮಿಕೆಯನ್ನು ವಿಸ್ತರಿಸುತ್ತ ಡಿ.ವಿ.ಜಿ. ಪರಿವರ್ತಿತ ಗೀತೆಗಳು ಕಾಳಿದಾಸನ ಮನೋಗತವನ್ನು ಯಥಾವತ್ತಾಗಿ ಪ್ರತಿಧ್ವನಿಸುತ್ತವೆಂದು ಹೇಳಿಕೊಳ್ಳುವ ಆಶೆ ಇದ್ದರೂ ಧೈರ್ಯವಿಲ್ಲ. ಕಾಳಿದಾಸನು ಒಂದೆರಡು ಮಾತುಗಳಿಂದ ಧ್ವನಿತ ಮಾಡಿರುವುದಕ್ಕೆ ತಾವು ಮೂರು ನಾಲ್ಕು ಮಾತುಗಳನ್ನು ಬಳಸಿದ್ದುಂಟು. ಅವರ ಕೃತಿಯಲ್ಲಿ ವ್ಯಂಗ್ಯ ತಮ್ಮದರಲ್ಲಿ ವಾಚ್ಯವಾಗಿರಬಹುದು. ಅವನ ಅಂತರ್ಭಾವಕ್ಕೆ ಅಭಿವ್ಯಕ್ತಿ ಕೊಡುವಲ್ಲಿ ನ್ಯೂನಾತಿರೇಕಗಳು ಕಂಡು ಬರಬಹುದು. ಆದರೂ ಕವಿಯ ಮೂಲ ವಾಕ್ಯದಲ್ಲಿ ಅಷ್ಟೊಂದು ಸ್ಪಷ್ಟವಿಲ್ಲೆಂದು ತೋರುವ ಧ್ವನಿ ಭಾವವನ್ನು ಅಂತರ್‌ಭಾವವನ್ನು ಸ್ಪಷ್ಟಪಡಿಸುವುದು. ಅದನ್ನು ಕಾಳಿದಾಸನ ಹೃದಯದ ಪ್ರತಿಬಿಂಬವೆಂದು ಹೇಳುವುದಕ್ಕಿಂತ ಅನುವಾದಕನ ಹೃದಯದಲ್ಲಿ ಪ್ರತಿಫಲಿಸಿದ ಕಾಳಿದಾಸನ ಪ್ರತಿಬಿಂಬವೆಂದು ಹೇಳುವುದು ಸರಿಯಾದೀತು. ಕಾಳಿದಾಸನ ದೃಷ್ಟಿಯಲ್ಲಿದ್ದ ವಾಚಕ ಪ್ರೇಕ್ಷಕ ಸಮಾಜ ಆತನದು. ಕಾಳಿದಾಸನ ಮನೋಭಾವ ಇಂದಿನ ಜನಕ್ಕೇ ಅಷ್ಟಿಷ್ಟಾದರೂ ತೋರಲೆಂಬುದು ತಮ್ಮ ಆಶಯ' ಎಂದು ಡಿ.ವಿ.ಜಿ. ತಮ್ಮ ಗೀತಾಶಾಕುಂತಲ ಅನುವಾದ ನಾಟಕದಲ್ಲಿ ಹೇಳಿಕೊಂಡಿದ್ದಾರೆ.

ಇದೊಂದು ಉದಾಹರಣೆಯ ಜೊತೆಗೆ ಚುರಮರಿ ಶೇಷಗಿರಿರಾಯರು ಅನುವಾದ ಮಾಡಿದ ಸಂದರ್ಭದಲ್ಲಿ, ದುಷ್ಯಂತನಿಗೂ ಶಕುಂತಲೆಗೂ ಪರಸ್ಪರ ಸಂದರ್ಶನವಾಗಿದೆ. ಆದರೆ ಸ್ನೇಹ ಇನ್ನೂ ವಿಕಸಿತವಾಗಿಲ್ಲ. ತನ್ನ ವಿಷಯದಲ್ಲಿ ಆಕೆಯ ಪ್ರತಿಚರ್ಯೆಯನ್ನು ನೋಡಿ ದುಷ್ಯಂತ ತನ್ನ ಮನಸ್ಸಿಲ್ಲಾದ ಪರಿಣಾಮವನ್ನು ಹೇಳಿಕೊಳ್ಳುತ್ತಾನೆ.

**ಮೂಲ**

ವಾಚಂಗನ ಮಿಶ್ರಯತಿ ಯಶ್ಯಪಿ ಮದ್ವಚೋಭಿಃ
ಕರ್ಣದದಾತ್ಯಭಿಮುಖಂ ಮಯಿಭಾಷಮಾಣೇ।
ಕಾಮಂನ ತಿಷ್ಠತಿ–ಮದಾನನ ಸಂಮುಖಿನಾ
ಭೂಯಿಷ್ಠಮನ್ಯ ವಿಷಯಾನತುದೃಷ್ಟಿರಸ್ಯಾಃ॥

**ಬಸವಪ್ಪಶಾಸ್ತ್ರಿ**

ನುಡಿಯುತ್ತಿರೆ ನಾಂ ನುಡಿಯಳ್
ಕೂಡುವಳ್ ಕಿವಿಯಂ ಮುದುಕ್ತಿಗವಲೋಕಿಸೆ ನಾ॥
ನೊಡನೆ ತಲೆಬಾಗಿ ಪಳ್ ಕ–
ಣ್ಣಡೆಯಂ ಪರಿದಿತರ ವಿಷಯದೊಳಗಿಡಳಾದಳ್॥

ರಾಗ: ಸಾರಂಗ.

ಮನದೊಳ್ ಆಂದೋಳನ–ಮಾನಿಸೀ ಮಣಿಗೇನೋ।
ನಾನೆಂತು ಕಾಣುವೆನೋ–ಆ ಮರುಮವ ॥ಪ॥
ಸಾನುರಾಗಿಯೊ ಅವಳೇನುದಾಸೀನೆಯೋ।
ಅನುಮಾನಿಪುದು ಸಾಹಸ–ಅದೇಂ ಕ್ಲೇಶ.॥ಅ.ಪ॥
ಸಲ್ಲಾಪದಲ್ಲಿ ಸೇರಳ್–ಆದರು ಮಳ್ತಿಯಿಂ।
ಸಲ್ಲಿಪಳ್ ಕಿವಿಯನ್–ಎನ್ನಯ ಸೊಲ್ಲಕೇಳೆ।
ಕುಳ್ಳಿರೆನ್ನೆದುರೋಳ್ ತನ್ನ ಮುಖವೆತ್ತಿ।
ಚೆಲಲು ನೋಟವನಿತ್ತತ್ತ ಸುಳಿಸಿ॥

ಇವಳಾ ಭಾವವದೇನೋ–ಪೇಳುವರಾರೋ॥ **ಚುರಮರಿ**–ಧಾಟಿ 'ದಿಲ್ಕೀ ದಿಲ್ ಮಾರ್ರೈ ಉಥಾಜಿ' ಎಂಬ ಹಿಂದೂಸ್ತಾನಿ ಪದದಂತೆ.

ಮನಸಾನಟ್ಟಿಹಳು।ಎನ್ನೊಳು ಪ॥ಪ॥
ಗೆಳತಿಯರೊಳ್ ಮಾತಿನೊಳ್ ನಾನಿರಲು।
ತಿಳಿಸದೆ ಎನ್ನನು ಬಲು ನೋಡುತಿಹಳು ॥೧॥
ಚೆಲುವ ಮುಖವ ನಾನೋ।ಡಲು ನಾಚುತೆ ಮೋರೆ।
ಕೆಳಗೆ ತಗ್ಗಿಸುತಲೇ।ನೆಲವ ಗೀಚುವಳು ॥೨॥
ಬಾಲೆ ಎನ್ನಯ ಮಾತಿನೊಳು ತಾ ಬಾರಳು।
ಆಲಿಸಿ ಮೆಲ್ಲನೆ।ಎಲ್ಲ ಕೇಳುವಳು ॥೩॥
ಅನ್ಯ ಮಾತಿನ ನೆವ।ದಿಂ ತನ್ನೊಳು ತಾನೇ।
ರನ್ನೆ ಗಲ್ಲದಿ ನಗು।ತೆನ್ನ ನೋಡಿದಳು ॥೪॥"[೭]

ಬಸವಪ್ಪಶಾಸ್ತ್ರಿಗಳ ಅನುವಾದ ಮೂಲಕ್ಕೆ ಹೊಂದಿಕೊಂಡು ಬಂದಿದ್ದರೆ ಉಳಿದೀರ್ವರದು ಸಾಕಷ್ಟು ವಿಸ್ತಾರ ಹೊಂದಿದೆ. ಆಕ್ಷೇಪಕರು ಉದಾಹರಿಸಿದ ಚುರಮುರಿ ಶೇಷಗಿರಿರಾಯರು ಅನುವಾದಿಸಿದ 'ಬಣ್ಣಿಸಲ್ಹ್ಯಾಂಗಿನ್ನು' ಮತ್ತು ಇತರ ಹಾಡುಗಳು ಇದೇ ಬಗೆಯವೆಂದು ಬೇರೆ ಹೇಳಬೇಕಿಲ್ಲ.

ಸ್ಥೂಲದರಲ್ಲೇ ಡಿ.ವಿ.ಜಿ. ಆಗಲಿ, ಅವರಿಗಿಂತ ಹಿರಿಯರಾಗಿ ಚುರಮುರಿ ಶೇಷಗಿರಿರಾಯರು, ಕಿರ್ಲೋಸ್ಕರ(ಮರಾಠಿ), ಪಾಶ್ಚಿಮಾತ್ಯರಲ್ಲಿ ಹೋಮರನ ಕೃತಿಗಳನ್ನು ಇಂಗ್ಲಿಷ್‌ಗೆ ಪರಿವರ್ತಿಸಿದ ಚಾಪ್ಮನ್, ಡ್ರಾಯ್ಡನ್, ಪೋಪ್ ಆಗಲಿ ಮೂಲದೊಂದಿಗೆ ತಮ್ಮ ಕಾಲದ ಬಹುಸಂಖ್ಯೆ ಸಹೃದಯರ ಒಲವು ಅಭಿರುಚಿಗಳನ್ನು ಮನದಲ್ಲಿಟ್ಟುಕೊಂಡು ಮೂಲವನ್ನು ಯಥಾವತ್ತಾಗಿ ಅಲ್ಲದಿದ್ದರೂ ಜನ

ಮೆಚ್ಚುಗೆಗೆ ಅರ್ಹವಾಗುವಂತೆ ಕೈಗೆತ್ತಿಕೊಂಡು ಕಾರ್ಯವನ್ನು ನಿರ್ವಹಿಸಿರುವರು. ಭಾಷಾಂತರ ದೃಷ್ಟಿಯಿಂದ ಅಸಮರ್ಪಕವೆಂಬ ಆಕ್ಷೇಪಣೆಗೆ ಗುರಿಯಾದರೂ ಒಟ್ಟಿನಲ್ಲಿ ಸಾಕಷ್ಟು ಯಶಸ್ವಿಯಾಗಿರುವರು. ಸ್ವಲ್ಪ ನಿಷ್ಠುರವೆನ್ನಿಸಿದರೂ ಡಿ.ವಿ.ಜಿ. ಸಹಾನುಭೂತಿ ಇಲ್ಲದವರು ಅದನ್ನು(ಗೀತಶಾಕುಂತಲಾ) ತಮ್ಮ ಅಧಿಕಾರ ಪರಿಧಿಯಲ್ಲಿ ತೆಗೆದುಕೊಳ್ಳಬೇಕಿಲ್ಲೆಂದು ವಿಜ್ಞಾಪಿಸಿಕೊಂಡು ಕನ್ನಡ ದೇಶದ ಸಾಮಾನ್ಯ ಮನೆತನಗಳ ಲಲಿತ ಮನಸ್ಸಿನ ಹೆಣ್ಣುಮಕ್ಕಳು ಹೊಲಗದ್ದೆಗಳಲ್ಲಿ ದುಡಿಮೆ ಮಾಡುವ ಸರಳ ಜನರೂ ತಮ್ಮ ಕೃತಿಯಲ್ಲಿನ ಹಾಡುಗಳನ್ನು ಹಾಡಿಕೊಳ್ಳುವಂತಾದರೆ ಅದು ತಮಗೆ 'ಕನಕಾಭಿಷೇಕ' ಎಂದು ಆಶಿಸುವರು. ಚುರಮುರಿ ಶೇಷಗಿರಿರಾಯರ ಹಾರೈಕೆ ಏನಿದ್ದಿತೋ ತಿಳಿಯದು. ಜೀವಿಸಿದ್ದಾಗ ಅವರ ಕೃತಿ ರಂಗಕ್ಕೆ ಬಂದದ್ದನ್ನು ನೋಡುವ ಭಾಗ್ಯ ಅವರಿಗೆ ಲಭಿಸದಿದ್ದರೂ ಅನೇಕ ವರ್ಷಗಳವರೆಗೆ ಉತ್ತರ ಕರ್ನಾಟಕದ ಮನೆ ಮನೆಗಳಲ್ಲಿ ಸಾರ್ವಜನಿಕ ಉತ್ಸವ ಜಾತ್ರೆಗಳಲ್ಲಿ ಕೇಳಿಬರುವುದು. ಅದರಲ್ಲಿನ ಹಾಡುಗಳು ಜನಪ್ರಿಯವಾಗಿದ್ದವೆಂಬ ಮುದವೀಡು ಕೃಷ್ಣರಾಯರಂಥ ರಸಿಕ ವಯೋವೃದ್ಧರ ಸ್ವಾನುಭವ ಸಾಕ್ಷಿ ನುಡಿಗಿಂತ ಹೆಚ್ಚಿನ ಪ್ರಶಸ್ತಿ ಇನ್ನಾವುದಿದೆ?

ಇದರರ್ಥ ಯಥಾಮೂಲ ಭಾಷಾಂತರಗಳೂ ಅನಗತ್ಯವೆಂದಲ್ಲ. ಚುರಮರಿಯವರು ಮತ್ತು ಬಸವಪ್ಪಶಾಸ್ತ್ರಿಗಳ ಕೃತಿಗಳ ವಿಚಾರದಲ್ಲಿ ಕೊಟ್ಟ ಡಾ.ಹಾವನೂರರ ದೃಷ್ಟಾಂತವನ್ನು ಪುನರುಚ್ಚರಿಸುವುದಾದರೆ ಒಂದು ಮಲ್ಲಿಗೆ ಇನ್ನೊಂದು ಸಂಪಿಗೆ, ನಮಗೆ ಎರಡೂ ಬೇಕು. ಇದರರ್ಥ ಹೇಗಿದೆಯೋ ಗೊತ್ತಿಲ್ಲ. ಮರಾಠಿಯಲ್ಲಿ ಮಾತ್ರ ಶ್ರೀಕೇಶವ ವಿನಾಯಕ ಗೋಡಬೋಲೆ ಅವರು ಕಾಳಿದಾಸನ ಈ ಕೃತಿಯನ್ನು ಯಥಾವತ್ತಾಗಿ ಭಾಷಾಂತರಿಸಿದವರು.

ಮುನ್ನುಡಿಯಲ್ಲಿ ಮಹಾವಿದ್ವಾನ್, ಸಂಸ್ಕೃತಜ್ಞ(ಮರಾಠಿಯಲ್ಲಿ ಸಹ) ತತ್ವಜ್ಞಾನಿ ಅನುಭಾವಿ ಗುರುದೇವ ಆರ್.ಡಿ.ರಾನಡೆ ಅವರು ತಮ್ಮ ಅಧಿಕಾರ ಸಂಪನ್ನವಾಣಿಯಲ್ಲಿ ಸೋದಾಹರಣೆಗಳೊಂದಿಗೆ ಗೋಡಬೋಲೆ ಅವರ ಭಾಷಾಂತರ ಅದೆಷ್ಟು ಸಮರ್ಪಕವಾಗಿದೆ, ಅದೆಷ್ಟು ಸಲೀಸಾಲಾಗಿದೆ ಎಂಬುದನ್ನು ಮನಸಾರೆ ಪ್ರಶಂಸಿರುವರು. ಭಾಷಾಂತರದಲ್ಲಿ ಪದ್ಯಗಳಿಗಾಗಿ ಮೂಲದಲ್ಲಿ ಶ್ಲೋಕವಿದ್ದಲ್ಲಿ ಶ್ಲೋಕ, ವೃತ್ತವಿದ್ದಲ್ಲಿ ಆ ವಿಶಿಷ್ಟ ವೃತ್ತ, ಜೊತೆಗೆ ಮರಾಠಿಯಲ್ಲಿ ರೂಢಿಯಿದ್ದ ಅಂತ್ಯಪ್ರಾಸವನ್ನು ಬಳಸಿರುವುದು ಗೋಡಬೋಲೆ ಕೃತಿಯ ಇನ್ನೊಂದು ವೈಶಿಷ್ಟ್ಯ. ಗೋಡಬೋಲೆ ಭಾಷಾಂತರದ ಖ್ಯಾತಿಯಿಂದ ಸ್ಫೂರ್ತಿ ಪಡೆದ ಶ್ರೀ ಮಲ್ಲಿಕಾರ್ಜುನ ಶಿವಲಿಂಗಪ್ಪ ರೈನಾಪುರ ಕನ್ನಡದಲ್ಲೂ ದ್ವಿತೀಯಾಕ್ಷರ ಪ್ರಾಸವಿಟ್ಟು ಸಮಶ್ಲೋಕ ಸಮವೃತ್ತಗಳಲ್ಲಿ ಕಾಳಿದಾಸನ ಈ ಕೃತಿಯನ್ನು ಭಾಷಾಂತರಿಸಿದ್ದುಂಟು. ಅವರ ಮತ್ತು ಇನ್ನಿತರ ಭಾಷಾಂತರಗಳ ವಿಚಾರಗಳನ್ನು ಈ ಕೆಳಕಂಡಂತೆ ಮಾಡಬೇಕಾಗಿದೆ. ಕವಿ ಕಾಳಿದಾಸ ಸಂಸ್ಕೃತ ಕಾವ್ಯ ಮತ್ತು ನಾಟಕಗಳನ್ನು ರಚಿಸುವಲ್ಲಿ ಪ್ರಮುಖನಾಗಿದ್ದಾನೆ. ವಿಶ್ವದ ಮಹಾಕವಿಗಳಾದ ಸೋಫೋಕ್ಲಿಸ್, ಹೋಮರ್, ಶೇಕ್ಸ್‌ಪಿಯರ್, ಮಿಲ್ಟನ್ ಮೊದಲಾದ ಹಿರಿಯ ಕವಿಗಳಲ್ಲಿ ಪ್ರಮುಖನಾಗಿದ್ದಾನೆ. ಅಭಿಜ್ಞಾನ ಶಾಕುಂತಲ ನಾಟಕವು ಇಂಗ್ಲಿಷ್, ಫ್ರೆಂಚ್, ಜರ್ಮನ್, ರಷ್ಯನ್, ಜಪಾನ್ ಮೊದಲಾದ ವಿಶ್ವದ ಅನೇಕ ಭಾಷೆಗಳಿಗೂ

ಅನುವಾದವಾಗಿದೆ. ಅದರಲ್ಲೂ ಮುಖ್ಯವಾಗಿ ಈ ನನ್ನ ಅಧ್ಯಯನದ ಉದ್ದೇಶ ಪ್ರಮುಖವಾಗಿ ಕನ್ನಡ ಭಾಷೆಯಲ್ಲಿ ಭಾಷಾಂತರವಾಗಿರುವುದನ್ನು ಗಮನಿಸುವುದಾಗಿದೆ.

ಈ ನಾಟಕದ ವಸ್ತುವಿನ್ಯಾಸ, ಪಾತ್ರಸೃಷ್ಟಿ, ರಸಪೋಷಣೆ, ನಾಟಕೀಯ ತಂತ್ರ ಮತ್ತು ಸುಮಧುರ ಶೈಲಿ ಇವು ಕನ್ನಡ ಭಾಷೆಯ ಸಹೃದಯರ ಮನಸ್ಸನ್ನು ಸೂರೆಗೊಂಡಿವೆ.

**ನಾಟಕಗಳು**

ಮಹಾಭಾರತ, ರಾಮಾಯಣ ಅಥವಾ ಬೃಹತ್ಕಥೆ ಮೊದಲಾದ ಆಕರಗಳಿಂದ ವಸ್ತುವನ್ನು ಆರಿಸಿಕೊಂಡ ಮಾತ್ರಕ್ಕೆ ಕಾವ್ಯರಚನಾ ಕೌಶಲ್ಯವು ಕೆಳಮಟ್ಟದ್ದೆಂದು ಸಿದ್ಧವಾಗುವುದಿಲ್ಲ. ಇದಕ್ಕೆ ಶಾಕುಂತಲದ ನಿದರ್ಶನವೊಂದೇ ಸಾಕು. ಆರಿಸಿಕೊಂಡ ಕಥಾವಸ್ತುವನ್ನು ರಂಗಭೂಮಿಯ ಸೌಕರ್ಯ, ಪಾತ್ರರಚನೆ, ರಸಪರಿಪೋಷಗಳಿಗನುಗುಣವಾಗಿ ಮಾರ್ಪಡಿಸುವುದರಲ್ಲಿ ಕವಿಯ ಕೌಶಲ್ಯವು ಗೋಚರವಾಗುವುದು. ಅಂತು ಈ ರೀತಿ ಪರಿಚಿತವಾದ ವಸ್ತುವನ್ನು ಉಪಯೋಗಿಸಿಕೊಳ್ಳುವುದರಲ್ಲಿ ಕವಿಗೆ ಸ್ವಲ್ಪ ಅನುಕೂಲವುಂಟು. ಹೆಚ್ಚು ಪಾಂಡಿತ್ಯವಿಲ್ಲದವರನ್ನು ಇಂತಹ ವಸ್ತುವಿನಿಂದ ಆಕರ್ಷಿಸಬಹುದು. ಪರಿಚಿತ ಪಾತ್ರಗಳೇ ಕವಿಯು ಸೃಷ್ಟಿಸಿದ ಹೊಸ ಸನ್ನಿವೇಶದಲ್ಲಿ ಸಂಚರಿಸುವುದನ್ನು ನೋಡಿದಾಗ ಪ್ರೇಕ್ಷಕರಿಗೆ ಹೆಚ್ಚು ಸಂತೋಷವಾಗುವುದಕ್ಕೆ ಅವಕಾಶವಿದೆ. ಹೊಸ ವಸ್ತುವನ್ನು ಗ್ರಹಿಸುವುದಕ್ಕೆ ಬೇಕಾಗುವ ಬುದ್ಧಿಯ ಅವಶ್ಯಕತೆಯು ಇದೆ. ಕವಿಯ ಚಾತುರ್ಯವು ಸುಲಭವಾಗಿ ಹೊರಬೀಳುವುದು. ಇದಲ್ಲದೆ ಪುರಾಣಪ್ರಸಿದ್ಧರಾದ ದೇವತೆಗಳ ಅಥವಾ ವೀರರ ಕತೆಯನ್ನು ಬರೆದರೂ, ಕೇಳಿದರೂ ಪುಣ್ಯವನ್ನು ಗಳಿಸಬಹುದೆಂಬ ಭಾವನೆಯಿದ್ದುದರಿಂದ ಕವಿ ಮತ್ತು ಸಮಾಜ ಇಬ್ಬರಿಗೂ ಇವು ಆಕರ್ಷಕವಾಗಿದ್ದವು. ಒಟ್ಟಿನಲ್ಲಿ, ರಸವಿಭಾವವೇ ಕವಿತೆಯ ಮುಖ್ಯೋದ್ದೇಶವೆಂಬ ಭಾವನೆಯಿದ್ದುದರಿಂದ ಕಥಾವಸ್ತುವನ್ನು ಹೊಸದಾಗಿ ನಿರ್ಮಿಸಿಕೊಳ್ಳುವ ಅವಶ್ಯಕತೆಯೊದಗಲಿಲ್ಲ ಎನ್ನಬಹುದು.

ಅಭಿಜ್ಞಾನ ಶಾಕುಂತಲದ ವಸ್ತುವನ್ನು ಮಹಾಭಾರತದ ಆದಿಪರ್ವದ ಶಕುಂತಲೋಪಾಖ್ಯಾನದಿಂದ ಆರಿಸಿದೆ. ಆದರೆ ಅಲ್ಲಿನ ಕತೆಗೂ ಕಾಳಿದಾಸನು ನಿರೂಪಿಸುವ ಕತೆಗೂ ಬಹಳ ವ್ಯತ್ಯಾಸ, ದೂರ್ವಾಸರ ಶಾಪ, ಉಂಗುರದ ವೃತ್ತಾಂತ ಇವೇ ಮೊದಲಾದ ನೂತನ ಸಂವಿಧಾನಗಳನ್ನೂ ಅದಕ್ಕೆ ಬೇಕಾದ ಪಾತ್ರವರ್ಗವನ್ನೂ ಮನೋಭಾವವನ್ನೂ ಕಾಳಿದಾಸನು ತಕ್ಕಮಟ್ಟಿಗೆ ಬದಲಾಯಿಸಿರುತ್ತಾನೆ. ಇದು ಹೇಗೆ ಮತ್ತು ಏಕೆ ಎಂಬ ವಿಚಾರಗಳು ಕತೆಯನ್ನು ಅನುವಾದ ಮಾಡಿ ಮೂಲಕತೆಗೂ ಕಾಳಿದಾಸನ ಕತೆಗೂ ಇರುವ ತಾರತಮ್ಯವನ್ನು ನಿರೂಪಿಸುವಾಗ ಸ್ಪಷ್ಟಪಡುತ್ತದೆ.

ಪ್ರಪಂಚದ ಮಹಾಕವಿಗಳಲ್ಲಿ ಒಬ್ಬನಾದ ಕಾಳಿದಾಸನ ಉತ್ತಮೋತ್ತಮ ಗ್ರಂಥವಾದ ಅಭಿಜ್ಞಾನ ಶಾಕುಂತಲ ನಾಟಕದ ಆಧಾರದಿಂದ ಕನ್ನಡದಲ್ಲಿ ಹುಟ್ಟಿದ ಪರಿವರ್ತನಾದಿ ಗ್ರಂಥಗಳು ಈಗ ಸುಮಾರು ೨೦ಕ್ಕಿಂತ ಅಧಿಕವಾಗಿ ಕಂಡುಬರುತ್ತವೆ. ಇವುಗಳಲ್ಲಿ ಮೊಟ್ಟ ಮೊದಲು(೧೮೪೭ರಲ್ಲಿ) ರಚಿತವಾದುದು. ಆಳಿದ ಮಹಾಸ್ವಾಮಿಯವರಾದ ಶ್ರೀಮನ್ ಮಹಾರಾಜ ಮುಮ್ಮಡಿ ಶ್ರೀಕೃಷ್ಣರಾಜ

ಒಡೆಯರು ರಚಿಸಿದ "ಶಾಕುಂತಲ ನಾಟಕದ ನವೀನಟೀಕೆ" ಅಥವಾ "ಕೃಷ್ಣರಾಜವಾಣೀ ವಿಳಾಸರತ್ನಾಕರ" ಎಂಬುದು ಇದರಲ್ಲಿ ಶ್ರೀಮನ್ ಮಹಾಭಾರತದಲ್ಲಿ ಕಂಡುಬರುವ ಶಕುಂತಲೋಪಾಖ್ಯಾನವೂ ಕಾಳಿದಾಸನ ನಾಟಕದ ಕಥೆಯೂ ಮಿಳಿತವಾಗಿ, ಅನೇಕ ಕಡೆಗಳಲ್ಲಿ ಭಾವಗಳನ್ನು ವಿಸ್ತಾರವಾಗಿ ವಿಶಾದಪಡಿಸುವಂತೆ ವಿಷಯವು ಪ್ರತಿಪಾದಿತವಾಗಿರುವುದು.

ನವೀನಟೀಕೆಯಾದ ಬಳಿಕ ಕನ್ನಡ ಭಾಷೆಯಲ್ಲಿ ಹುಟ್ಟಿದ ಶಾಕುಂತಲ ನಾಟಕಗ್ರಂಥವೆಂದರೆ, ಧಾರವಾಡದ ಪ್ರಾಂತದಲ್ಲಿ ಸುಮಾರು ೧೮೮೭ಕ್ಕೆ ಸ್ವಲ್ಪ ಮುಂಚೆ ಶೇಷೋರಾಮಚಂದ್ರ ಚುರಮರಿಯವರಿಂದ ವಿರಚಿತವಾದ "ಶಾಕುಂತಲ ನಾಟಕ." ಈ ನಾಟಕದ ಭಾಷೆಯು ನಾನಾವಿಧವಾದ ಪ್ರಾಂತೀಯ ವೈಲಕ್ಷಣ್ಯಗಳಿಂದ ಕೂಡಿದೆ. ಬಿ.ವೆಂಕಟಾಚಾರ್ಯರು ೧೮೮೭ರಲ್ಲಿ "ಶಕುನ್ತಳಾ" ಎಂಬ ಕೃತಿಯನ್ನು ಪ್ರಕಟಿಸಿದರು. ಈ ಕೃತಿಯು ಈಶ್ವರಚಂದ್ರ ವಿದ್ಯಾಸಾಗರರು ವಂಗಭಾಷೆಯಲ್ಲಿ ರಚಿಸಿರುವ ಕಾಳಿದಾಸನ ಶಾಕುಂತಲದ ಸಾರಾಂಶದ ಪರಿವರ್ತನರೂಪವಾದುದು. ಇದರಲ್ಲಿ ಆಯಾ ಪಾತ್ರಗಳ ಸಂಭಾಷಣೆಯು ಪ್ರತ್ಯೇಕವಾಗಿಯೂ ವಿಶಾದವಾಗಿಯೂ ಗೊತ್ತಾಗುವಂತೆ ಇಲ್ಲ. ಈ ಗ್ರಂಥವು ಆಚಾರ್ಯರ ಮೊದಲಿನ ಗ್ರಂಥವಾದುದರಿಂದ ಭಾಷೆಯೂ ಶೈಲಿಯೂ ಸಾಧಾರಣವಾಗಿದೆ.

ಈ ಗ್ರಂಥವಾದ ಬಳಿಕ ಕನ್ನಡದಲ್ಲಿ ರಚಿತವಾದ ಪುಸ್ತಕವು ಪ್ರಸಿದ್ಧರಾದ ಬಸವಪ್ಪಶಾಸ್ತ್ರಿಗಳ ಶಾಕುಂತಲವು ಮೊದಲನೆಯ ಮುದ್ರಣದಲ್ಲಿ ಮೂಲಗ್ರಂಥದ ಕೆಲವು ಭಾಗಗಳು ಲುಪ್ತವಾಗಿವೆ. ಎರಡನೆಯ ಮುದ್ರಣವು ೧೮೯೦ರಲ್ಲಿ ಮುದ್ರಿತವಾಯಿತು. ಇದು ಸಮಗ್ರವಾಗಿದ್ದರೂ ಅಚ್ಚಿನ ತಪ್ಪುಗಳೂ ಪ್ರಮಾದದಿಂದ ಉಂಟಾಗಿದ್ದ ಕೆಲವು ಲೋಪದೋಷಗಳನ್ನು ಸರಿಪಡಿಸಿ ನಂತರ ಮೂರನೇ ಮುದ್ರಣವನ್ನು ಹೊರತಂದರು.

ಬಿ.ಕೃಷ್ಣಪ್ಪನವರು ಹೇಳುವಂತೆ, ಬಸವಪ್ಪ ಶಾಸ್ತ್ರಿಗಳ ಶಾಕುಂತಲ ನಾಟಕವು ಆಂಧ್ರಲಿಪಿಯ ಸಂಸ್ಕೃತದ ಮೂಲಗ್ರಂಥಕ್ಕೆ ಮಾತ್ರ ಅನುಗುಣವಾದ ಪರಿವರ್ತನೆಯಾಗಿರುವುದೆಂದೂ ಬಹುಜನಾದರಣೀಯವಾಗಿರುವುದೆಂದೂ ಧಾರಾಳವಾಗಿ ಹೇಳಬಹುದು ಎಂದು ತಮ್ಮ ನಾಟಕ ಅನುವಾದದ ಮುನ್ನುಡಿಯಲ್ಲಿ ಹೇಳಿದ್ದಾರೆ. ಹಾಗೆಯೇ ಮುಂದುವರಿದು ಇವರ ಪರಿವರ್ತನೆಯಲ್ಲಿ ನಾಟಕಾಭಿನಯಕ್ಕೆ ಬೇಕಾದ ಹಾಡುಗಳನ್ನು ರಚಿಸಿ ಸೇರಿಸಿರುವರು ಎಂದು ಸಹ ಹೇಳಿಕೊಂಡಿದ್ದಾರೆ.

ಬಸವಪ್ಪಶಾಸ್ತ್ರಿಗಳ ಶಾಕುಂತಲದ ಮೊದಲನೆಯ ಮುದ್ರಣದ ಸಮಯದಲ್ಲಿ ಕುಣಿಗಲ್ಲಿನ ಸಂಸ್ಕೃತ ಪಾಠಶಾಲೆಯಲ್ಲಿ ಅಧ್ಯಕ್ಷರಾಗಿದ್ದ ಬೇಟೆರಾಯ ದೀಕ್ಷಿತರೆಂಬುವರು "ಶಾಕುಂತಲ ನಾಟಕಂ" ಎಂಬ ಹೆಸರಿನಿಂದ ಮತ್ತೊಂದು ಭಾಷಾಂತರ ನಾಟಕವನ್ನು ರಚಿಸಿದರು.

ಈ ಭಾಷಾಂತರ ಕೃತಿಯು ತಕ್ಕಮಟ್ಟಿಗೆ ಚೆನ್ನಾಗಿರುವುದು. ಇದರಲ್ಲಿ ಪದ್ಯಗಳು ಅಭಿನೇತೃಗಳಿಗೆ ಅವಶ್ಯವಾಗುವ ಗುಣಗಳು ಕಂಡುಬರುವವು. ಆದರೆ ಬಸವಪ್ಪಶಾಸ್ತ್ರಿಗಳ ಗ್ರಂಥದ ಲಾಲಿತ್ಯವಾಗಲಿ ಮೂಲಗ್ರಂಥಾನುಸರಣವಾಗಲಿ ಈ ಭಾಷಾಂತರದಲ್ಲಿ ಕಂಡುಬರುವುದಿಲ್ಲ.

ಸೆಂಟ್ರಲ್ ಕಾಲೇಜಿನಲ್ಲಿ ಅಧ್ಯಾಪಕರಾಗಿದ್ದ ಎಸ್.ಶ್ರೀನಿವಾಸರಾಯರೆಂಬುವರು ಕಾಳಿದಾಸನ ನಾಟಕತ್ರಯಗಳ ಕಥಾಸಂಗ್ರಹಗಳನ್ನು "ನಾಟಕ ಕಥಾರತ್ನಮಾಲೆ" ಎಂಬ ಹೆಸರಿನಿಂದ ೧೮೯೦ರಲ್ಲಿ ಪ್ರಕಟಿಸಿದರು. ಇವುಗಳಲ್ಲಿ ಶಾಕುಂತಲ ನಾಟಕದ ಸಂಗ್ರಹವು ೩೯ ಪುಟಗಳಷ್ಟಿರುವುದು. ಈ ಗ್ರಂಥದಲ್ಲಿ ನಾಟಕಕಥಾಭಾಗವನ್ನು ಅಲ್ಲಲ್ಲಿ ವ್ಯತ್ಯಾಸಪಡಿಸಿದ್ದಾರೆ.

"ಕೇಡು ತಂದ ಉಂಗುರ"ವೆಂಬ ನಾಮಧೇಯದಿಂದ ಶಾಕುಂತಲದ ಕಥೆಯನ್ನು ೧೮೯೫ರಲ್ಲಿ ಶೇಷಗಿರಿರಾವ್ ಕೊಣ್ಣೂರು ಬಿ.ಎ. ಎಂಬುವರು ಕರ್ನಾಟಕ ಗದ್ಯರೂಪವಾಗಿ ಬರೆದು "ಭಾಷಾಸೇವಕ" ಎಂಬ ಪತ್ರಿಕೆಯಲ್ಲಿ ಪ್ರಕಟಿಸಿದರು. ಇದರಲ್ಲಿ ಸ್ವಕಪೋಲಕಲ್ಪಿತವಾದ ಕೆಲವು ವರ್ಣನಾಭಾಗಗಳು ಅಲ್ಲಲ್ಲಿ ಕಂಡುಬರುತ್ತವೆ.

ಆಯಾ ಪಾತ್ರಗಳ ಮಾತುಗಳು ಪ್ರತ್ಯೇಕ ಪ್ರತ್ಯೇಕವಾಗಿ ತಿಳಿಯುವಂತೆ ಈ ಗ್ರಂಥದಲ್ಲಿ ಇಲ್ಲ. ಈ ಗ್ರಂಥವು ಬಂದ ನಂತರ ಈಚೆಗೆ ಮ॥ರಾ॥ಗಳಾದ ಸೂಲಿಬೆಲೆಯ ಡಿ.ಶಾಮರಾವ್ ಎಂಬುವವರೂ ಬೆಳ್ಳಾವೆಯ ನರಹರಿಶಾಸ್ತ್ರಿಯವರೂ, ಗದ್ಯಪದ್ಯ ರೂಪವಾಗಿ ಮತ್ತೆರಡು ಗ್ರಂಥಗಳನ್ನು ಭಾಷಾಂತರಿಸಿರುವರು(ರಚಿಸಿರುವರು). ಇವುಗಳಲ್ಲಿಯೂ ಅಭಿನೇತೃಗಳಿಗೆ ಬೇಕಾದ ಗುಣಗಳು ಇವೆ ಎಂದು ಬಿ. ಕೃಷ್ಣಪ್ಪನವರ ಮುನ್ನುಡಿಯಿಂದ ಅರ್ಥೈಸಿಕೊಳ್ಳಬಹುದು.

ಕನ್ನಡ ಭಾಷೆಯಲ್ಲಿ ಇಷ್ಟೊಂದು ಗ್ರಂಥಗಳು ಹುಟ್ಟಿದ್ದರೂ ಈಗ ಶಾಕುಂತಲದ ಮತ್ತೊಂದು ಪ್ರವರ್ತನಕ್ಕೆ ಅವಕಾಶವೆಲ್ಲಿರುವುದೆಂದು ಕೆಲವರಿಗೆ ತೋರಬಹುದು. ವಿದೇಶಿಯ ಭಾಷೆಗಳಾದ ಇಂಗ್ಲಿಷ್, ಜರ್ಮನ್ ಭಾಷೆಗಳಲ್ಲಿ ಪ್ರತಿಯೊಂದರಲ್ಲೂ ಹದಿನೈದಕ್ಕಿಂತಲೂ ಹೆಚ್ಚಾಗಿ ಪರಿವರ್ತನೆಗಳು ಹುಟ್ಟಿರುವಾಗ ಸಂಸ್ಕೃತ ಭಾಷೆಯಿಂದ ಕನ್ನಡ ಭಾಷೆಗೆ ಕಾವ್ಯರತ್ನವಾದ ಶಾಕುಂತಲದ ಮತ್ತೊಂದು ಕೃತಿಯನ್ನು ಅನುವಾದಿಸಿದ್ದಾರೆ.

ಮಹಾಭಾರತದಲ್ಲಿ ಶಕುಂತಲೋಪಾಖ್ಯಾನವು ಪ್ರಾಸಂಗಿಕವಾಗಿ ಬರುವ ನೂರಾರು ಕತೆಗಳಲ್ಲೊಂದು. ಇದರಲ್ಲಿ ರಚನೆಯ ವೈಶಿಷ್ಟ್ಯಕ್ಕಿಂತ ಕತೆಯ ವಿಷಯಕ್ಕೆ ಪ್ರಾಧಾನ್ಯವಿದೆ. ಇದು ನಿಸರ್ಗಸುಂದರವಾದ ಒಂದು ಪ್ರಕೃತಿ ಸನ್ನಿವೇಶ. ಶಾಕುಂತಲವು ನಿರ್ಮಿಸಿದ ಸುಂದರ ಪ್ರತಿಮೆ. ಒಂದು ಪ್ರಕೃತಿಸೌಂದರ್ಯ, ಇನ್ನೊಂದು ಕಲಾಸೌಂದರ್ಯ. ಮೊದಲಿನದರಲ್ಲಿ ನೈಸರ್ಗಿಕತೆ, ಸ್ವಾಭಾವಿಕತೆ ಎದ್ದು ಕಾಣುತ್ತದೆ. ಅಲ್ಲಿನ ದುಷ್ಯಂತ ಶಕುಂತಲೆಯರು ಸ್ವಾಭಾವಿಕವಾದ ಮನುಷ್ಯ ಸಹಜವಾದ ಆಶೆ ಆಕಾಂಕ್ಷೆಗಳನ್ನುಳ್ಳವರು. ಅದಕ್ಕೆ ತಕ್ಕಂತೆ ಒಂದು ವಿಧವಾದ ಸಾಮಾಜಿಕ ಔಚಿತ್ಯ, ಕಾಲಕ್ಕೆ ತಕ್ಕಂತೆ ವರ್ತಿಸುವುದು ಇವನ್ನು ತಿಳಿದು ತಮ್ಮ ತಮ್ಮ ಅಂತಃಸ್ಫೂರ್ತಿಯ ಪ್ರಚೋದನೆಗನುಸಾರವಾಗಿ ವರ್ತಿಸುವವರು. ಅವರಲ್ಲಿ ಧರ್ಮಾಧರ್ಮಗಳ ಹೋರಾಟವಷ್ಟಿಲ್ಲ. ಅದಕ್ಕೆ ಬದಲು ದೇವತೆಗಳ ಕೃಪೆಯೇ ಈ ವಿಷಯದಲ್ಲಿ ಹೆಚ್ಚು ಸಹಕಾರಿಯಾಗಿ ನಿರ್ಣಾಯಕವಾಗುವುದು. ಆದರೆ ಶಾಕುಂತಲದ ವ್ಯಕ್ತಿಗಳು ಈ ದೆಶೆಯನ್ನು ಮೀರಿದವರು. ಇಲ್ಲಿನ ನಾಯಕ ನಾಯಿಕೆಯರು ಹೆಚ್ಚು ಆದರ್ಶಪ್ರಾಯರಾದವರು. ಇವರಲ್ಲಿ ಅಸಾಧಾರಣವಾದ ದೈವಾಂಶವಿದೆ. ಸಂದಿಗ್ಧವಾದ

ವಿಷಯಗಳಲ್ಲಿ ಅಂತಃಕರಣ ಪ್ರವೃತ್ತಿಯೇ ಪ್ರಮಾಣವಾಗುವಷ್ಟು ಸತ್ತ್ವವಿದೆ, ಶಾಕುಂತಲದ ದುಷ್ಯಂತನಲ್ಲಿ ಸಾಮಾನ್ಯವಾಗಿ ಹೇಳಬಹುದಾದರೆ ನಾಟಕದ ಒಟ್ಟು ಸನ್ನಿವೇಶದಲ್ಲೇ ಹೆಚ್ಚು ಕಾಲ್ಪನಿಕ ಆದರ್ಶತೆಯಿದೆ. ಇದಲ್ಲದೆ, ಮಹಾಭಾರತದ ಕತೆಯನ್ನೋದುವಾಗ ನಮ್ಮ ಗಮನವು ಧರ್ಮದ ಕಡೆಗೆ ಹೋಗುತ್ತದೆ. ದುಷ್ಯಂತ ಮಾಡಿದ್ದು ಸರಿಯೇ? ಶಕುಂತಲೆಯನ್ನು ಅವನು ನಿರಾಕರಿಸಿದ ಮೇಲೆ ಒಂದು ಪಕ್ಷ ದೇವತೆಗಳು ಮಧ್ಯೆ ಬಂದು ಅವಳನ್ನು ಸ್ವೀಕರಿಸುವಂತೆ ರಾಜನನ್ನು ಒತ್ತಾಯಪಡಿಸದೆ ಇದ್ದಿದ್ದರೆ ಅವಳ ಗತಿಯೇನು? ಎಂಬ ಪ್ರಶ್ನೆಗಳು ಏಳುವುವು. ಮತ್ತೊಂದು ಕಡೆ ಶಕುಂತಲೆಯ ಪ್ರೇಮದ ನೈಜತೆಯ ವಿಷಯವಾಗಿಯೂ ಆ ಶಂಕೆಗಳೇಳುವುವು ನಿಜವಾಗಿಯೂ ಪ್ರೇಮದಿಂದ ಮದುವೆಗೊಪ್ಪಿದಳೆ? ಅಥವಾ ರಾಜ್ಯದ ಆಸೆಯಿಂದಲೇ? ಎಂದು. ಧರ್ಮದ ದೃಷ್ಟಿಯಿಂದ ಇವರ ನಡವಳಿಕೆಗೆ ಸಮಂಜಸವಾದ ಉಪಪತಿಯನ್ನು ಕೊಡಲು ಸಾಧ್ಯವಾಗದೆ ಹೋಗಬಹುದು.

'ಇದೊಂದು ಕತೆ. ಸ್ವಾಭಾವಿಕವಾಗಿ ನಡೆಯತಕ್ಕದ್ದು. ಸಾಧಾರಣವಾದ ಮಾನವೀಯ ಪ್ರವೃತ್ತಿಯುಳ್ಳ ಇಲ್ಲಿನ ವ್ಯಕ್ತಿಗಳನ್ನು ನೋಡಿ ಧರ್ಮಾಧರ್ಮವಿವೇಕವನ್ನು ಹೊಂದಬೇಕು ಎನ್ನಿಸುವುದು. ಆದರೆ ಶಾಕುಂತಲದಲ್ಲಿ ಧರ್ಮದ ಬದಲು ಪ್ರೇಮವು ನಮ್ಮ ದೃಷ್ಟಿಯನ್ನು ಸೆಳೆಯುತ್ತದೆ. ಆದರ್ಶವ್ಯಕ್ತಿಗಳಾದ ದುಷ್ಯಂತ ಶಕುಂತಲೆಯರ ಪ್ರೇಮವು ಹೇಗೆ ಅಂಕುರಿಸಿತು? ಬೆಳೆಯಿತು? ಪರಿಶುದ್ಧಿ ಹೊಂದಿತು? ಇದೇ ಶಾಕುಂತಲದ ವಸ್ತು. ಇಲ್ಲಿ ದಾಂಪತ್ಯಪ್ರೇಮಕ್ಕೂ ಧರ್ಮಕ್ಕೂ ಒದಗುವ ಸಂಘರ್ಷವು ಚಿತ್ರಿತವಾಗಿ ಪ್ರೇಮವು ಆದರ್ಶವಾಗಿ ಮಂಗಳಕರವಾಗಬೇಕಾದರೆ ಯಾವ ರೀತಿ ಪರಿಪಕ್ವವಾಗಬೇಕೆಂಬುದೂ ಸೂಚಿತವಾಗಿದೆ. ಒಟ್ಟಿನಲ್ಲಿ ಪ್ರೇಮ, ಧರ್ಮಗಳ ಸಮನ್ವಯ ಅಥವಾ ಸಮಂಜಸ ಪ್ರಕೃತಿಪ್ರೇಮ, ಅಪಥ್ಯಪ್ರೇಮ, ಧರ್ಮಪ್ರೇಮ, ಇವುಗಳ ಮಿಲನದಲ್ಲಿರಬೇಕಾದ ಹೊಂದಿಕೆಗಳೇ ಶಾಕುಂತಲದಲ್ಲಿ ನಿರೂಪಿಸಲ್ಪಟ್ಟವೆಯೆಂದು ತಿಳಿಯಬಹುದು.

ದುಷ್ಯಂತ ಶಕುಂತಲೆಯರ ಪ್ರೇಮದ ಅಂಶಕ್ಕೆ ಪ್ರಾಧಾನ್ಯವಿರುವುದರಿಂದ ನಾಟಕದ ರಸವು ಶೃಂಗಾರವೆಂದು ಹೇಳಲಾಗಿದೆ. ಮಿತ್ರಾಲಂಭದಿಂದ ಸಂಭೋಗ ಶೃಂಗಾರದ ಪರಿಪೋಷಕ್ಕೂ ಪರಿಶುದ್ಧಿಗೂ ಸಹಾಯಕವಾಗಿದೆ. ಕವಿಯು ಈ ನಾಟಕವನ್ನು ಶಿವಸ್ತೋತ್ರಾತ್ಮಕವಾದ ನಾಂದೀ ಪದ್ಯದಿಂದ ಪ್ರಾರಂಭಿಸಿರುವನು. ಹಿಂದಿನ ನಾಟಕಗಳ ನಾಂದಿ ಶ್ಲೋಕಗಳಲ್ಲಿ ಶಿವನ ವಿಶ್ವ ವ್ಯಾಪಿತ್ವ, ನಿವೃತ್ತಿ ಮಾರ್ಗಾತ್ಮಕವಾದ ದೇಹವನ್ನು ತಾಳಿದುದು ಮಾತ್ರ ನಿರ್ದಿಷ್ಟವಾಗಿದೆ. ಅನಂತರ ನಟೀಸೂತ್ರಧಾರರು, ಪ್ರಸ್ತಾವನೆಯನ್ನು ಪ್ರಾರಂಭಿಸಿದರು. ಇಲ್ಲಿ ಬರುವ ಅತಿ ಪರಿಚಿತವಾದ 'ಅ ಪರಿತೋಕ್ಷಾದ್ವಿದುಷಾಂ..' ಎಂಬುದು ಶ್ಲೋಕವೆಂದು ಪರಿಗಣಿಸಲ್ಪಟ್ಟಿದ್ದರೂ ಇಲ್ಲಿನ ಗ್ರೀಷ್ಮಋತುವರ್ಣನೆಯು ರಮ್ಯವಾಗಿದೆ. ಉಪಭೋಗಪರತೆಯನ್ನು ಸೂಚಿಸುವುದರಿಂದ ಕಾವ್ಯಾರ್ಥ. ವ್ಯಂಜಕವಾಗಿಯೂ ಇದೆ. ಪ್ರೇಕ್ಷಕರನ್ನು ಪ್ರಾಪಂಚಿಕ ವಾತಾವರಣದಿಂದ ಸಾಹಿತೀಯ ವಾತಾವರಣಕ್ಕೆ ಒಯ್ಯಲು ಪ್ರಸ್ತಾವನೆಯು ಬಹಳಮಟ್ಟಿಗೆ ಸಹಕಾರಿಯಾಗಿದೆ.

ಮೂರನೆಯ ಅಂಕ: ತಣ್ಣಗಿರುವ ಚಪ್ಪಡಿಯ ಮೇಲೆ ಹರಡಿದ್ದ ಹೂಹಾಸಿಗೆಯಲ್ಲಿ ಶಕುಂತಲೆ ಮಲಗಿರುವಳು. ಸಖಿಯರು ಅವಳನ್ನು ಉಪಚರಿಸುತ್ತಿರುವರು. ದುಷ್ಯಂತನು ಹತ್ತಿರದ ಮರದ ಹಿಂದೆ ನಿಂತು ಅವರ ಸಲ್ಲಾಪವನ್ನು ಕೇಳತೊಡಗುವನು. ಸಖಿಯರು ತಾವರೆ ಎಲೆಯಿಂದ ಬೀಸುತ್ತ ಆಗಾಗ "ತಾಪವು ಈಗ ಕಡಿಮೆಯೇ?" ಎಂದು ಕೇಳುವರು. ಶಕುಂತಲೆಗೆ ಅವರು ಬೀಸುತ್ತಿರುವುದೇ ಗೊತ್ತಿಲ್ಲ. ಸ್ನೇಹಿತೆಯರಿಬ್ಬರೂ ಗಾಬರಿಗೊಂಡು ಒಬ್ಬರನ್ನೊಬ್ಬರು ನೋಡುತ್ತ "ಇದು ಬಿಸಿಲಿನ ತಾಪವೊ? ಅಥವಾ ಬೇರೆ ವಿಧವಾದ ತಾಪವೋ?" ಎಂದು ಸಂಶಯಪಡುವರು. "ಆ ರಾಜರ್ಷಿಯನ್ನು ನೋಡಿದಂದಿನಿಂದ ಶಕುಂತಲೆಯು ಅಸ್ವಸ್ಥಳಾಗಿರುವಳು. ಅದೇ ಇವಳ ವ್ಯಾಧಿಗೆ ಕಾರಣವಿರಬಹುದೇ?" ಎಂಬ ಪ್ರಿಯಂವದೆಯ ಊಹೆಯನ್ನು ಅನಸೂಯೆಯೂ ಸಮರ್ಥಿಸುವಳು. ಹೇಗೋ ವ್ಯಾಧಿಯು ಇಂತಹುದೆಂದು ತಿಳಿದುಕೊಳ್ಳದೆ ಚಿಕಿತ್ಸೆಗಾರಂಭಿಸಬಾರದೆಂದು ಅನಸೂಯೆಯು ಶಕುಂತಲೆಯನ್ನೇ ಪ್ರಶ್ನಿಸುವಳು. ಶಕುಂತಲೆಗೆ ತಾಪವು ದುಸ್ಸಹವಾಗಿದ್ದರೂ ಕಾರಣವನ್ನು ಬಾಯ್ದೆರೆದು ಹೇಳಲು ಮನಸ್ಸುಬಾರದು. ಪ್ರಿಯಂವದೆಯೂ ಕೂಡ ಉಪಚಾರೋಕ್ತಿಗಳಿಂದ ಅವಳನ್ನು ಒತ್ತಾಯ ಪಡಿಸುವಳು. ಕಡೆಗೆ ಸ್ನೇಹಿತೆಯರೊಡನೆ ಹಂಚಿಕೊಂಡಲ್ಲಿ ಕ್ಲೇಶದ ವೇದನೆಯು ಕಡಿಮೆಯಾಗಬಹುದೆಂದು ಶಕುಂತಲೆಯು ತನ್ನ ಇಂಗಿತವನ್ನು ಹೊರಗೆಡಹಲು ನಿಶ್ಚಯಿಸುವಳು. "ತಪೋವನವನ್ನು ರಕ್ಷಿಸುತ್ತಿರುವ ಆ ರಾಜರ್ಷಿಯನ್ನು ಕಂಡಾರಭ್ಯ..." ಎನ್ನುವಳು. ನಾಚಿಕೆಯಿಂದ ಮಾತು ಮುಂದೆ ಹೊರಡದು, ಪುನಃ ಸಖಿಯರ ಪ್ರೇರಣೆಯಾದ ಮೇಲೆ "ಅವನನ್ನಾಶಿಸಿ ಹೀಗಾಗಿರುವೆನು, ಅದು ನಿಮಗೂ ಸಮ್ಮತವಾಗಿದ್ದರೆ ನನ್ನ ಆಸೆಯನ್ನು ಬಿಡಿ" ಎಂದು ಮುಗಿಸುವಳು. ಮರೆಯಲ್ಲಿ ನಿಂತು ಕೇಳುತ್ತಿರುವ ದುಷ್ಯಂತನಿಗೆ ಈ ಮಾತು ಕೇಳಿಸುವುದು. ಸಖಿಯರಿಗೆ ವಿಷಯ ತಿಳಿಯುತ್ತದೆ. ಶಕುಂತಲೆ ಕಾಮಾರ್ತಳು, ಇವಳ ಪ್ರೇಮವು ಉತ್ತಮ ಪಾತ್ರವನ್ನೇ ಆರಿಸಿರುವುದು. ಆದುದರಿಂದ ಕಾಲಹರಣ ಮಾಡದೆ ಗುಟ್ಟಾಗಿ ಇವಳ ಇಚ್ಛೆಯನ್ನು ಸಲ್ಲಿಸಬೇಕಾದ್ದು ಕರ್ತವ್ಯ. ಇದಲ್ಲದೆ ರಾಜರ್ಷಿಯ ಸ್ನೇಹಪೂರ್ಣವಾದ ದೃಷ್ಟಿಯಿಂದ ತನಗೆ ಶಕುಂತಲೆಯಲ್ಲಿರುವ ಅನುರಾಗವನ್ನು ವ್ಯಕ್ತಪಡಿಸಿ ಕೊರಗಿ ಕಂಗೆಡುತ್ತಿರಬೇಕು. ಆದುದರಿಂದ ಅವನನ್ನೊಪ್ಪಿಸಲು ವಿಳಂಬವಾಗದು. ಎಂದು ಎಲ್ಲವನ್ನು ಪರಿಗಣಿಸಿ ಪ್ರಿಯಂವದೆಯು ದೇವತಾಪ್ರಸಾದದ ಹೂಗಳಲ್ಲಿ ಮರೆಸಿ ಒಂದು ಪ್ರಣಯಲೇಖನವನ್ನು ಕಳುಹಿಸಬೇಕೆಂದು ಸಲಹೆ ಕೊಡುವಳು. ಒಕ್ಕಣೆಯನ್ನು ಯೋಚಿಸುವಷ್ಟರಲ್ಲಿ ಪುನಃ ದುಷ್ಯಂತನು ಸಮ್ಮತಿಸದಿರಬಹುದೆಂಬ ಸಂದೇಹವು ತಲೆದೋರುವುದು.

ಇತ್ತ ದುಷ್ಯಂತನು "ಯಾರು ನಿನ್ನನ್ನು ಒಲ್ಲೆನೆನ್ನಬಹುದೆಂದು ಶಂಕಿಸುತ್ತಿರುವೆಯೋ ಅವನೇ ಸಂಗಮೋತ್ಸುಕನಾಗಿರುವನು, ಬೇಕೆನ್ನುವವರಿಗೆ ಲಕ್ಷ್ಮಿಯು ಸಿಕ್ಕದಿರಬಹುದು, ಲಕ್ಷ್ಮಿಗೆ ಬೇಕಾದವರು ಸಿಕ್ಕದಿರುವುದುಂಟೆ?" ಎಂದುಕೊಳ್ಳುತ್ತಿರುವನು. ಆಗ ಸಖಿಯರು ಶಕುಂತಲೆಯನ್ನು ಕುರಿತು "ಸ್ವ ಗುಣಗಳನ್ನು ಅಲ್ಲಗಳೆಯುವವಳೇ! ಶರೀರವನ್ನು ತಣಿಸುವ ಶರಚ್ಚಂದ್ರಿಕೆಯನ್ನು ಬಟ್ಟೆಯನ್ನಡ್ಡಗಟ್ಟಿ ತಡೆಯುವರೇ?" ಎಂದು ಹೇಳಿ ಅವಳಿಗೆ ಬುದ್ಧಿ ಕಲಿಸುವರು. ಶಕುಂತಲೆಯು ತಾವರೆಯ ಎಲೆಯ ಮೇಲೆ ಉಗುರಿನಿಂದ ಪ್ರಣಯ ವಚನವನ್ನು ಬರೆದು ಸಖಿಯರಿಗಾಗಿ ಅದನ್ನು ಓದುವಳು.

ಪತ್ರವನ್ನು ಕಳುಹಿಸುವಷ್ಟರಲ್ಲಿ ತೊಂದರೆಯನ್ನು ತಪ್ಪಿಸಿ ದುಷ್ಯಂತನು ಅಲ್ಲಿಗೇ ಬರುವನು. ಪ್ರಣಯವಚನಕ್ಕೆ ಪ್ರಣಯಪೂರ್ವಕವಾದ ಉತ್ತರವನ್ನು ಕೊಡುತ್ತಲೇ ಇವರಿಗೆ ಕಾಣಿಸಿಕೊಳ್ಳುವನು. ತಡವಿಲ್ಲದೆ ಕೈಗೂಡಿದ ತಮ್ಮ ಮನೋರಥಕ್ಕೆ(ದೊರೆಗೆ) ಸಖಿಯರು ಸ್ವಾಗತವನ್ನರ್ಪಿಸುವರು. ಶಕುಂತಲೆಯೂ ಕೂಡ ಗೌರವವನ್ನು ಸೂಚಿಸುವುದಕ್ಕಾಗಿ ಏಳಲು ಪ್ರಯತ್ನಿಸುವಳು. ಆದರೆ ದೊರೆಯು ಇದನ್ನು ತಡೆಯುವನು. ಅನಸೂಯೆಯು ದುಷ್ಯಂತನನ್ನು ಹಾಸುಗಲ್ಲಿನ ಒಕ್ಕಡೆಯಲ್ಲೇ ಕುಳ್ಳಿರಿಸುವಳು. ಶಕುಂತಲೆಗೆ ಮತ್ತೂ ನಾಚಿಕೆಯಾಗುವುದು. ಪ್ರಿಯಂವದೆಯು ಪೀಠಿಕೆಯನ್ನು ಪ್ರಾರಂಭಿಸುವಳು.

"ನಿಮ್ಮಿಬ್ಬರ ಅನುರಾಗವು ಪ್ರತ್ಯಕ್ಷವಾಗಿರುವುದು. ಆದರೂ ಸಖೀಸ್ನೇಹಕ್ಕಾಗಿ ಹೇಳಬೇಕಾಗಿದೆ" ಎಂದು ದೊರೆಯಿಂದ ಪ್ರೋತ್ಸಾಹ ಹೊಂದಿದ ಮೇಲೆ "ತನ್ನ ದೇಶದ ಪ್ರಜೆಗಳಲ್ಲಿ ಪೀಡಿತರಾದವರ ಕ್ಲೇಶಗಳನ್ನು ಪರಿಹರಿಸುವುದು ರಾಜನ ಧರ್ಮ(ಅದಕ್ಕಿಂತ ಹೆಚ್ಚಿನ ಧರ್ಮವಿಲ್ಲ). ಆದುದರಿಂದ ನಿನ್ನನ್ನಾಶಿಸಿ ಮದನಕೃಶಳಾಗಿರುವ ನಮ್ಮ ಸಖಿಯನ್ನು ಬದುಕಿಸಬೇಕು" ಎಂದು ನಿವೇದಿಸುವಳು. ಅಂತಃಪುರವಿರಹದಿಂದ ಕ್ಲೇಶಪಡುತ್ತಿರುವ ರಾಜರ್ಷಿಯನ್ನು ನಿರ್ಬಂಧಪಡಿಸಿ ಪ್ರಯೋಜನವಿಲ್ಲವೆಂದು ಶಕುಂತಲೆಯೆನ್ನುವಳು. ಇದರಲ್ಲಿ ಅನಸೂಯೆಯೂ ಜೊತೆಯಾಗುವಳು. ಆಗ ದುಷ್ಯಂತನು ಶಪಥಪೂರ್ವಕವಾಗಿ ಶಕುಂತಲೆಯೇ ತನ್ನ ಕುಲದ ಏಳ್ಗೆಗೆ ಕಾರಣಳೆಂದೊಪ್ಪುವನು. ಇದರಿಂದ ಸಖಿಯರು ಸಂತುಷ್ಟರಾಗಿ ತಾಯಿಯನ್ನು ಹುಡುಕುತ್ತ ಅತ್ತಿತ್ತ ನೋಡುತ್ತಿದ್ದ ಜಿಂಕೆಮರಿಯೊಂದನ್ನು ತಾಯಿಯ ಹತ್ತಿರಕ್ಕೆ ಸೇರಿಸುವ ನೆಪದಿಂದ ಸರಿಯುವರು. ಒಬ್ಬರಾದರೂ ಜೊತೆಯಲ್ಲಿರಬೇಕೆಂದು ಶಕುಂತಲೆ ಕೂಗುವಳು. ಆದರೂ "ಭೂಪನೇ ನಿನ್ನೊಡನೆ ಇರುವಾಗ ಬೇರೆ ರಕ್ಷಕರು ಬೇಕೆ?" ಎನ್ನುತ್ತ ಇಬ್ಬರೂ ಹೊರಟೇ ಹೋಗುವರು.

ಸಖಿಯರು ಮಾಡುತ್ತಿದ್ದ ಉಪಚಾರಗಳನ್ನು ದೊರೆಯೇ ಮಾಡಲು ಉಕ್ರಮಿಸಲು ಶಕುಂತಲೆಯು "ಪೂಜ್ಯರ ವಿಷಯದಲ್ಲಿ ಅಪರಾಧಕ್ಕೆ ಗುರಿಯಾಗುವುವಳಲ್ಲ" ಎಂದು ಹೇಳಿ ಹೊರಡುವುದಕ್ಕೆ ಉದ್ಯುಕ್ತಳಾಗುವಳು. ದೊರೆಯು ಅವಳನ್ನು ತಡೆಯುವನು. ಆದರೂ ಶಕುಂತಲೆಯೂ ಇವನ ಪ್ರಣಯೋಪಚಾರಗಳಿಗೆ ಒಡಂಬಡದೆ "ಪೌರವನೇ! ಕಾಮಾರ್ತಳಾದರೂ ನಾನು ಸ್ವಾತಂತ್ರ್ಯವನ್ನು ಅವಲಂಬಿಸುವವಳಲ್ಲ" ಎಂದು ಆಕ್ಷೇಪಿಸಲು ದುಷ್ಯಂತನು "ಎಲೆ ಭೀರು! ಹಿರಿಯರಿಗೆ ಏತಕ್ಕೆ ಭಯಪಡುವೆ? ಧರ್ಮಜ್ಞರಾದ ಕುಲಪತಿಗಳು ನಿನ್ನವಸ್ಥೆಯನ್ನರಿತು ಕೋಪಿಸಿಕೊಳ್ಳರು, ಇದೂ ಅಲ್ಲದೆ ಅನೇಕ ರಾಜರ್ಷಿಕನ್ಯೆಯರು ಗಾಂಧರ್ವವಿಧಿಯಿಂದ ಮದುವೆಯಾದುದನ್ನು ಒಪ್ಪುವುದನ್ನು ಪುರಾಣದಲ್ಲಿ ನೋಡಬಹುದು" ಎಂದು ಹೇಳಿ ಸಮಾಧಾನ ಪಡಿಸುವವನು.

ಸ್ವಲ್ಪ ಹೊತ್ತು ಏಕಾಂತದಲ್ಲಿ ಪ್ರಣಯವು ಮುಂದುವರಿಯುವುದು. ಅನಂತರ ಸಖಿಯರು ಚಾತುರ್ಯದಿಂದ ಗೌತಮಿಯ ಆಗಮನವನ್ನು ತಿಳಿಸುವರು. ರಾಜನು ಇಷ್ಟವಿಲ್ಲದಿದ್ದರೂ ಹೊರಡಬೇಕಾಗುವುದು. ಗೌತಮಿಯೂ ಸಖಿಯರೂ ಪುನಃ ಶಕುಂತಲೆಯನ್ನು ಉಪಚರಿಸುವರು. ಅನಂತರ ಶಕುಂತಲೆಯು ವಕ್ರೋಕ್ತಿಯಿಂದ(ಇತರರಿಗೆ ತಿಳಿಯದಂತೆ) ದೊರೆಯನ್ನು ಪುನಃ

ಆಹ್ವಾನಿಸಿ ಸಖಿಯರೊಡನೆ ಆಶ್ರಮಕ್ಕೆ ಹೋಗುವಳು. ದೊರೆಯು ಅದರಂತೆ ಪುನಃ ಅಲ್ಲಿಗೆ ಬಂದು ಲತಾವಲಯವನ್ನು ಬಿಟ್ಟುಹೋಗಲು ಮನಸ್ಸುಬಾರದೆ ಚಿಂತಿಸುತ್ತಿರುವಷ್ಟರಲ್ಲಿ ರಾಕ್ಷಸರು ಯಾಗಕ್ಕೆ ಅಡ್ಡ ಬಂದಿರುವರೆಂಬ ಆರ್ತನಾದವು ಕೇಳಿ ಬಂದು ಅವನನ್ನೂ ಕಾರ್ಯೋನ್ಮುಖನನ್ನಾಗಿ ಮಾಡುವುದು.

**ಚುರಮುರಿ ಶೇಷಗಿರಿರಾಯ – ಕರ್ನಾಟಕ ಶಾಕುಂತಲ ನಾಟಕಂ.**

ಶಾಕುಂತಲ ನಾಟಕವನ್ನು ಅನೇಕರು ಅನುವಾದಿಸಿದ್ದಾರೆ. ಆದರೆ ಮುಖ್ಯವಾಗಿ ಚುರಮುರಿ ಶೇಷಗಿರಿರಾಯರ ಮತ್ತು ಬಸವಪ್ಪಶಾಸ್ತ್ರಿಗಳ ಅನುವಾದ ಇಲ್ಲಿ ಗಮನಿಸಲಾಗಿದೆ. ಕ್ರಿ.ಶ.೧೮೬೯ರಲ್ಲಿ ಚುರಮುರಿ ಶೇಷಗಿರಿರಾಯರ ಅನುವಾದವೂ, ಕ್ರಿ.ಶ.೧೮೮೧ರಲ್ಲಿ ಬಸವಪ್ಪಶಾಸ್ತ್ರಿಗಳ ಅನುವಾದವೂ ಹೊರಬಂದವು. ಭಿನ್ನ ಪ್ರಾದೇಶಿಕ ಹಿನ್ನೆಲೆಯಲ್ಲಿ ಮೂಡಿಬಂದ ಈ ಎರಡೂ ಅನುವಾದಗಳ ಔಚಿತ್ಯ ಪ್ರಶ್ನೆಗಿಂತ ಸಾಂದರ್ಭಿಕತೆಯ ನೆಲೆಗಟ್ಟು ಚರ್ಚಾಸ್ಪದ ವಿಷಯವೆನಿಸಿ, ತೌಲನಿಕ ಅಧ್ಯಯನಕ್ಕೊಂದು ಬಗೆಯ ಸಾರ್ಥಕತೆಯನ್ನು ತಂದುಕೊಡುತ್ತದೆ ಎಂದರೆ ಆಶ್ಚರ್ಯವೇನಿಲ್ಲ. ಬಸವಪ್ಪಶಾಸ್ತ್ರಿಗಳಿಗಿಂತ ಮೊದಲು ಶೇಷಗಿರಿರಾಯರು ಶಾಕುಂತಲವನ್ನು ಭಾಷಾಂತರಿಸಿದರು. ಆದರೆ ಅದು ವ್ಯಾಖ್ಯಾನಾತ್ಮಕ ಅನುವಾದವಾಯಿತೇ ಹೊರತು ಸಾಹಿತ್ಯಕ, ಭಾಷಿಕ ಅನುವಾದವಾಗಿ ಬರಲಿಲ್ಲ. ಸ್ವತಂತ್ರ ನಿರ್ಮಿತಿಯಲ್ಲಿ ಇಲ್ಲದಿದ್ದ ಅವಕಾಶಗಳನ್ನು ಅನುವಾದ ಕ್ರಿಯೆಯಲ್ಲಿ ತೊಡಗಿಸಿಕೊಂಡ ಶ್ರೇಯಸ್ಸು ಬಸವಪ್ಪಶಾಸ್ತ್ರಿಗಳದ್ದು. ಬಸವಪ್ಪಶಾಸ್ತ್ರಿಗಳ "ಕರ್ಣಾಟಕ ಶಾಕುಂತಲ ನಾಟಕಂ" ಸೃಜನಾತ್ಮಕವಾದ ಕೃತಿಯೆನಿಸಿದರೂ ಕಾಳಿದಾಸನನ್ನು ಕನ್ನಡಕ್ಕೆ ಭಾಷಾಂತರಿಸುವ ಅವರ ಪ್ರಯತ್ನ ತುಂಬಾ ಮುಖ್ಯವಾಗಿದೆ. ಈ ಅಂಶವನ್ನು ಕನ್ನಡ ವಿಮರ್ಶೆ ತಕ್ಕಷ್ಟು ಗುರುತಿಸಿದೆ. ಕಾಳಿದಾಸನಿಗೆ ನಿಷ್ಠರಾಗಿದ್ದುಕೊಂಡೇ ಮೂಲಕ್ಕಿಂತ ಹೆಚ್ಚು ಪರಿಣಾಮಕಾರಿಯಾಗುವಂತೆ ಅನುವಾದಿಸಿದ್ದಾರೆ.

ಚುರಮುರಿ ಶೇಷಗಿರಿರಾಯರ "ಶಾಕುಂತಲ" ೧೮೬೯ರಲ್ಲಿ ಪ್ರಕಟವಾಗಿತ್ತು. ಇದು ಹೊಸಗನ್ನಡದ ಮೊಟ್ಟಮೊದಲ ನಾಟಕ. ಸಿಂಗಾರಾರ್ಯನ 'ಮಿತ್ರವಿಂದಾ ಗೋವಿಂದ' ನಾಟಕ ರೂಪದಲ್ಲಿ ಬರೆದ ಕಾವ್ಯವಾಗಿದ್ದರೆ, ಇದು ನಾಟಕ, ರಂಗಭೂಮಿಯ ಸಂಭಾವ್ಯತೆಯನ್ನಿಟ್ಟುಕೊಂಡು ಬಂದಿರುವ ನಾಟಕ ಇದೊಂದೇ. ಬಸವಪ್ಪಶಾಸ್ತ್ರಿಗಳು ರಂಗಪಠ್ಯ, ಓದಪಠ್ಯ ಎಂಬುದಾಗಿ ಎರಡು ರೀತಿಯ ಅನುವಾದಗಳನ್ನು ಕೊಟ್ಟರು. ಒಂದೇ ಅನುವಾದ ನಮ್ಮ ಮುಂದಿದೆ.

ಚುರಮುರಿ ಶೇಷಗಿರಿರಾಯರ 'ಶಾಕುಂತಲ' ಆಡುಭಾಷೆಯಲ್ಲಿನ ಅನುವಾದ. ಕಾಳಿದಾಸ ವಿದೂಷಕ ಮಾಢವ್ಯ ಬ್ರಾಹ್ಮಣನಾದರೆ, ಶೇಷಗಿರಿರಾಯರು ಹನುಮನಾಯಕನನ್ನಾಗಿಸಿದ್ದಾರೆ. ಹನುಮನಾಯಕನು ಆಡುವ ಹಳ್ಳಿ ಭಾಷೆ ಕಾಳಿದಾಸನ ಪ್ರಾಕೃತ ಭಾಷೆಗೆ ಸರಿಯಾಗಿದೆ. ಚುರುಮುರಿ ಶೇಷಗಿರಿರಾಯರ ಅನುವಾದ ಎಂದಿನಂತೆ ಸಾಂಸ್ಕೃತಿಕ ಅನುವಾದ, ರಂಗಭೂಮಿ ಪರಿಸರಕ್ಕನುಗುಣವಾದ ಅನುವಾದ. ಅದು ಕಾಳಿದಾಸನನ್ನು ಅನುಸರಿಸಿದೆಯಾದರೂ ಭಾಷಿಕವಾಗಿ

ಸಾಮಾನ್ಯ ಹಳ್ಳಿ ಜನರನ್ನು ದೃಷ್ಟಿಯಲ್ಲಿರಿಸಿಕೊಂಡಿದೆ. ಪ್ರಾಕೃತ ಸಂಭಾಷಣೆಗಳನ್ನು ಈ ಆಡುಭಾಷೆ ಒಲೈಸಿದೆಯಾದರೂ ಸಂಸ್ಕೃತ ಶಿಷ್ಟ ಪಾತ್ರವರ್ಗವನ್ನು ಈ ಆಡುಭಾಷೆ ಒಲೈಸಲು ಸಮರ್ಥವಾಗಿಲ್ಲ.

ಸಂಸ್ಕೃತದಲ್ಲಿಯ ವೃತ್ತಗಳನ್ನು ಕೆಲವು ಕಡೆ ಗೀತೆಗಳಲ್ಲಿಯೂ ಅನುವಾದಿಸಿದ್ದಾರೆ. ವೃತ್ತಗಳಿಗಿಂತ ಗೀತೆಗಳು ಸಮರ್ಥವಾಗಿ ಅನುವಾದಿಸಲ್ಪಟ್ಟಿವೆ. 'ಮುನಿಗಳ ಮಗಳಲ್ಲಿ ತಿಳಿಯೇ', 'ಪೊಡಲಾರೆ ಬಾಣವ' ಇವೆಲ್ಲಾ ಕಾಳಿದಾಸನ ವೃತ್ತಗಳಿಗೆ ಸಂವಾದಿಯಾಗಿ ಬರೆಯಲ್ಪಟ್ಟ ಪದ್ಯಗಳಲ್ಲ. ನಾಟಕದ ಸನ್ನಿವೇಶಕ್ಕೆ ತಕ್ಕುದಾದ ಭಾವವನ್ನು ತೋರಿಸಲು ಬಳಸಿದ ಪದ್ಯಗಳು. ಅಂದು ಉತ್ತರ ಕರ್ನಾಟಕದ ಪರಿಸರದಲ್ಲಿ ಪ್ರಚಲಿತವಿದ್ದ ಬಯಲಾಟಗಳಲ್ಲಿ ಈ ಬಗೆಯಾದ ಹಾಡುಗಳನ್ನು ಹೇಳುವ ರೂಢಿಯಿತ್ತು. ಶ್ರೀಕೃಷ್ಣ ಪಾರಿಜಾತದಲ್ಲಿ ಈ ಬಗೆಯ ಹಾಡುಗಳನ್ನು ನೋಡಬಹುದಾಗಿದೆ. ಉತ್ತರ ಕರ್ನಾಟಕದ ಪರಿಸರದಿಂದ ಈ ಬಗೆಯ ಗೀತೆಗಳು ಹುಟ್ಟುತ್ತವೆ. ಚುರಮರಿಯವರ ಶಾಕುಂತಲ ವಸಾಹತುಶಾಹಿ ಕಾಲಘಟ್ಟದ ಸಾಹಿತ್ಯ ಪ್ರಪಂಚಕ್ಕೆ ಹೇಗೆ ಹೊಸ ಪರಿಕಲ್ಪನೆ ತಂದುಕೊಟ್ಟಿತೊ. ಅದೇ ರೀತಿ ರಂಗಭೂಮಿಯ ಇತಿಹಾಸದಲ್ಲೂ ಹೊಸ ಅಧ್ಯಾಯವೊಂದನ್ನು ತೆರೆಯಿತು. ಶಾಕುಂತಲದ ಈ ಅನುವಾದ ಸಾಹಿತ್ಯಕ ಕ್ಷೇತ್ರದಲ್ಲೂ ರಂಗಭೂಮಿ ಕ್ಷೇತ್ರದಲ್ಲೂ ತನ್ನ ಸ್ಥಾನವನ್ನು ಭದ್ರಪಡಿಸಿಕೊಂಡ ಹಿನ್ನೆಲೆಯಲ್ಲಿ ನೋಡಬಹುದಾಗಿದೆ.

ನಂತರ ಬಂದ ಪ್ರತಿಯೊಂದು ಅನುವಾದವೂ ಸಾಹಿತ್ಯಕೃತಿಯೋ, ರಂಗಕೃತಿಯೋ ಎಂದು ನಿರ್ಧರಿಸಲು ಬಾರದಂತಹ ಸನ್ನಿವೇಶವೊಂದು ನಿರ್ಮಾಣಗೊಂಡಿದೆ. ಹೇಗೆ ಬಸವಪ್ಪ ಶಾಸ್ತ್ರಿಗಳು ಅಭಿನವ ಕಾಳಿದಾಸನೆಂದು ಪ್ರಖ್ಯಾತರಾಗಿದ್ದರೋ ಅದೇ ರೀತಿ ಚುರಮುರಿಯವರು ಕನ್ನಡದ ಕಾಳಿದಾಸ ಎಂದು ಪ್ರಖ್ಯಾತರಾಗಿದ್ದರು ಎಂಬುದು ಅವರ ಪದ್ಯವೊಂದರಿಂದ ತಿಳಿದುಬರುತ್ತದೆ. ತಮ್ಮ ಕೃತಿ ಕಾಳಿದಾಸನ ಶಾಕುಂತಲದ ರಂಗಕೃತಿಯಾಗಿ ಅನುವಾದಗೊಂಡಿದೆ ಎಂಬುದನ್ನು ಅವರು ತಿಳಿಸಿದ್ದಾರೆ.

"ಸುಲಭಸಲಿಲಾವಗಾಹಾಃ
ಪಾಟಲಸಂಸರ್ಗಿ ಸುರಭಿವನವಾತಾಃ।
ಪ್ರಚ್ಛಾಯ ಸುಲಭನಿದ್ರಾ
ದಿವಸಾಃ ಪರಿಣಾಮರಮಣೀಯಾಃ॥"[೮]

ಹೀಗೆ ಅನುವಾದಿಸಿದ್ದಾರೆ.

ಬಸವಪ್ಪಶಾಸ್ತ್ರಿಗಳ ಅನುವಾದವನ್ನು ಸಾಹಿತ್ಯಕ ಅನುವಾದವೆಂದು ಕರೆಯುವುದು ಯೋಗ್ಯವಾಗಿ ೧೮-೧೯ನೇ ಶತಮಾನಕ್ಕೆ ಬಂದ ಅನುವಾದಗಳೆಲ್ಲವೂ ತೀರಾ ಸಾಹಿತ್ಯ ಪಠ್ಯದ ಅನುವಾದವಾಗಿದೆ. ಕೇವಲ ವಸ್ತುವನ್ನು ಬಳಸಿ ಸ್ವತಂತ್ರ ವಹಿಸಲು ಸಾಧ್ಯವಾಗಿಲ್ಲ. ಚುರಮುರಿ ಶೇಷಗಿರಿರಾಯರದು ಈ ಹಂತದಲ್ಲಿ ಸ್ವಲ್ಪ ಭಿನ್ನವೆನಿಸಿದರೂ ಅದು ರಂಗಭೂಮಿಯ ಅದ್ಯತೆಗೋಸ್ಕರ ಅನುವಾದಿತವಾದ

ಕೃತಿಯಾದ್ದರಿಂದ ಅದು ರಂಗಪಠ್ಯವೆನಿಸಿಕೊಂಡಿದೆ. ಅದು ಆ ಕಾಲದ ರಂಗಭೂಮಿಯ ಅಗತ್ಯತೆಗೋಸ್ಕರ ಮೂಡಿಬಂದುದು. ಬಸವಪ್ಪಶಾಸ್ತ್ರಿಗಳು ರಂಗಭೂಮಿಯ ಅವಶ್ಯಕತೆಗೋಸ್ಕರವೇ ಅನುವಾದಿಸಿದರೂ ಅದು ಓದುಪಠ್ಯವಾಗಿಯೂ ತನ್ನ ವ್ಯಾಪ್ತಿಯನ್ನು ವಿಸ್ತರಿಸಿಕೊಂಡಿದೆ. ಹಾಗಾಗಿ ಆಸ್ಥಾನ ಪಂಡಿತರ ಸಮ್ಮುಖದಲ್ಲಿ ನಾಟಕ ನಡೆಯಬೇಕಾದ್ದರಿಂದ ಅಭಿಜಾತತೆಗೆ ಹೆಚ್ಚಿನ ಮಹತ್ವವಿರುವುದು ಕಂಡುಬರುತ್ತದೆ. ಸಾಹಿತ್ಯವು ಅಭಿಜಾತತೆಗೆ ಹೆಚ್ಚು ಒತ್ತು ಕೊಟ್ಟಿರುವುದರಿಂದ ಅನುವಾದ ಪಾಂಡಿತ್ಯ ಪೂರ್ಣ ಅನುವಾದವಾಗಿ ಅಭಿನವ ಕರ್ತೃತ್ವ ಶಕ್ತಿಯನ್ನು ಪಡೆದಿದೆ.

ಯಾಸೃಷ್ಟಿಃ ಸೃಷ್ಟುರಾದ್ಯಾವಹತಿ ವಿಧಿಹುತಂಯಾ ಹವಿರ್ಯಾ ಚಹೋತ್ರೀ ಯೇ ದ್ವೇಕಾಲಂ ವಿಧತ್ತಃ ಶೃತಿ ವಿಷಯ ಗುಣಾ ಯಾ ಸ್ಥಿತಾ ವ್ಯಾಪ್ಯಶಿವಮ್! ಯಾಮಾಹುಃ ಸರ್ವಬೀಜ ಪ್ರಕೃತಿ ರೀತಿಯಯಾ ಪ್ರಾಣಿನಃ ಪ್ರಾಣವಂತಃ! ಪ್ರತ್ಯಕ್ಷಾಭಿಃಪ್ರಪನ್ನೆಸ್ತನುಭಿರವತು ವಸ್ತಾಭಿರಷ್ಟಾಭಿರೀಶಃ!! ಎಂಬುದು ಈ ಕೆಳಕಂಡಂತಿದೆ.

"ಅವುದು ಧಾತೃಸೃಷ್ಟಿಗೆ ಮೊದಲ್ ಹರಿತಹದ್ಯಮನಾಂ ಪುದಾವುದಿ
ನ್ನಾವುದು ಹೋತೃ ಶಬ್ದಗುಣ ಮಾವುದವಾದವು ಕಾಲಕರ್ತೃಗಳ್
ಆವುದು ಸಿರ್ ಜಗಕ್ಕುಸಿರ್ವರಾವುದ ಭುತಕುಲ ಪ್ರಧಾನಮೆಂ
ದಾ ವೊಡಲೆಂಟರಿಂದ ಮರೆವೀಶನೋಡರ್ಚುಗೆ ನಿಮ್ಮ ಭೀಷ್ಟವಂ

ಎಂದು ಬಸವಪ್ಪಶಾಸ್ತ್ರಿಗಳು ಅನುವಾದಿಸಿದ್ದಾರೆ. ಜೀವನವನ್ನೇ ಸಾಂಕೇತಿಕ ಯಜ್ಞವಾಗಿ ಮಾಡಿ ವರ್ಣಿಸಿದ ಕಾಳಿದಾಸನಿಗೆ ಹತ್ತಿರವಾಗುವಂತೆ ವರ್ಣಿಸಿದ್ದಾರೆ. ಬಸವಪ್ಪಶಾಸ್ತ್ರಿಗಳು ನಾಂದಿ ಪದ್ಯಕ್ಕೆ ಬದಲಾಗಿ ರಂಗಭೂಮಿಯ ಅಗತ್ಯಕ್ಕೆ ತಕ್ಕಂತೆ ಮಂಗಲಾಚರಣೆಯನ್ನು ಹಾಕಿದ್ದಾರೆ. ಶೇಷಗಿರಿರಾಯರು ಸ್ವಂತ ಪದ್ಯವನ್ನು ರಚಿಸಿದ್ದಾರೆ.

ತಳೆದಿಹ ಪರಾತಪಾರನು ಹರಿ। ನಾಟ್ಯರೂಪಂ॥
ಜಲ ಮೆಲರುಮಿಳಿಯು। ತಿಳಿವು ಬೆಳಕು ಬಾಂ
ದಳಂಗಳು ತಾನೆಯಾಗಿ ॥ಪಲ್ಲವಿ॥
ಮೋಸ ಮಾಡಿ ಪೋದನಮ್ಮಾ। ಆರಾಜ ಋಷಿಯು
ಮೋಸ ಮಾಡಿ ಪೋದನಮ್ಮಾ॥ ವನವಾಸಿ ನಿಮ್ಮ ॥ಪಲ್ಲವಿ॥
ಈ ಸಖಿಯಳ ಮೆರೆವ ಭರಿದ
ಮೀಸಲು ಯೌವನವ ಕಂಡು।
ಆ ಸಮಯಕ್ಕೆ ತನ್ನ ಕೆಲಸ
ತಾ ಸಾಧಿಸಿಕೊಂಡು ಎಮ್ಮೊಳು ॥ಅನುಪಲ್ಲವಿ॥"[೯]

ಮೈಸೂರು ಮಹಾರಾಜ ಕಾಲೇಜಿನಲ್ಲಿದ್ದ ಬಿ.ಕೃಷ್ಣಪ್ಪನವರು ಶಾಕುಂತಲ ನಾಟಕವನ್ನು ಹೊಸಗನ್ನಡದಲ್ಲಿ ಪಠ್ಯಪುಸ್ತಕ ರೂಪದಲ್ಲಿ ಅನುವಾದಿಸಿದ್ದಾರೆ. ಶ್ಲೋಕಗಳನ್ನು ಸರಳವಾಗಿ ಸಾಮಾನ್ಯರಿಗೂ

ಅರ್ಥವಾಗುವಂತೆ ಗದ್ಯಾನುವಾದ ಮಾಡಿದ್ದಾರೆ. ಮೂಲ ಪ್ರಕೃತಿಯಲ್ಲಿ ಇದ್ದಕ್ಕಿದ್ದಂತೆಯೇ ಸುಮನೋಹರವಾಗಿ ಕನ್ನಡಿಸಿದ್ದಾರೆ.

ಮೊದಲನೆಯ ಅಂಕದಲ್ಲಿ ಶಕುಂತಲೆಯನ್ನು ಅಗಲುವಾಗ ಕಾಳಿದಾಸನ ದೃಷ್ಟಾಂತವನ್ನು ಹೀಗೆ ಹೇಳುತ್ತಾನೆ.

"ಗಚ್ಛತಿ ಪುರ ಶರೀರಧಾವತಿ ಪಶ್ಚಾತ್ ಅಸಂಸ್ತುತಂ ಚೇತಃ
ಚೀನಾಂಶುಕಮಿದ ಕೇತೋಃ ಪ್ರತಿವಾತಃ ನೀಯಮಾನಸ್ಯ॥
ಮುಂದಕ್ಕೆ ಪೋಪುದು ತನುವಿದು
ಪಿಂದೆಸೆಗೋಡುವುದು ಬಳಿಕೆಗೈಯ್ಯದ ಮನವೇ॥
ನೆಂದಪೆನೋ ಪವನನಿದಿರೊಳ್।
ತಂದ ಪತಾಕಿಕೆಯ ಚೀನವಸನ ಮಿದೆಂದೊಲ್॥"೧೦

ಎಂದಿದ್ದಾರೆ. ಬಿ.ಕೃಷ್ಣಪ್ಪನವರು ಇದನ್ನೇ ಗಾಳಿಗೆ ಇದಿರಾಗಿ ಚಲಿಸುತ್ತಿರುವ ಧ್ವಜಸ್ತಂಭದ ಹಾಗೆಯೇ ನನ್ನ ಶರೀರವು ಮುಂದೆ ಮುಂದಕ್ಕೆ ಚಲಿಸುತ್ತಿರುವುದು(ಧ್ವಜಸ್ಥವಾದ) ಚೀನಾಂಶುಕದಂತೆಯೇ ನನ್ನ ಮನಸ್ಸು ಅಸಂಸ್ತುತವಾಗಿ ಬಂದು ಹಿಂದಕ್ಕೆ ಓಡುತ್ತಿದೆ ಎಂದು ಗದ್ಯದಲ್ಲಿ ಹೇೕಟೆರಾಯದೀಕ್ಷಿತರು ಬೇಟೆರಾಯ ಆನಂದ ಭೈರವಿ ರಾಗದಲ್ಲಿರುವ ಎಂತು ಪೋಗುವನೀಗನಗರಕ್ಕೆ ।ಸನ್ನಿವೇಶಕ್ಕೆ। ಕಂತುಸರಾಳಿಯ ಚಿಂತೆಯೊಳಿನ್ನು ॥ಪ॥ ಕುಟಿಲನೇತ್ರೆಯ ಭಾವರೀತಿಯಂ। ಚಿತ್ತ ರೀತಿಯಂ॥ ದಿಟ್ಟವಾಗಿಯೆನ್ನೊಳು ಘಟಿಸಿದ ಪರಿಯಂ ॥೧॥ ಮತ್ತ ಸಾಮಜಹಂಸ ಗತಿಯನ್ನು। ಸ್ಮರಿಸುತಲಿ। ಚಿತ್ತವು ಬಹುತರದ ಮಾಗಿಹುದು ॥೨॥ ರಾಮಣೀಯಕ ಕಾಂತಿರಾಗಿಣಿ। ಮನೋಹರಿಣಿ॥ ಶ್ಯಾಮ ಸುಂದರಿದಿವ್ಯಾ ಲೋಕನಚತುರೆ॥

ಇಂಥ ಸುಂದರಿಯನ್ನು ಬಿಟ್ಟು ನಾನೆಂತು ನಗರಕ್ಕೆ ಹೋಗುವೆನು. ಶಕುಂತಲ ವ್ಯಾಪಾರದಿಂದ ಚಿತ್ತವನ್ನು ಹಿಂತಿರುಗಿಸಲು ಅಸಾಧ್ಯವು॥ ಈ ರೀತಿಯಾಗಿ ಗದ್ಯ ರೂಪದಲ್ಲಿ ಕನ್ನಡಿಸಿದ್ದಾರೆ.

"ಕಾವ್ಯೇಷು ನಾಟಕಂ ರಮ್ಯಂ ತತ್ರಾಪಿಚ ಶಕುಂತಲಾ" ಎಂಬುದು ಭಾರತದಲ್ಲಿ ಎಂದಿನಿಂದಲೂ ನಡೆದುಬಂದ ಮನೆಮಾತು. ಅದನ್ನು ಬರೆದವ ಕಾಳಿದಾಸ. ನಾಟಕದ ವಸ್ತು ಹೊಸದಲ್ಲ. ಮಹಾಭಾರತದಲ್ಲಿ ಬಂದಿರುವ ದುಷ್ಯಂತ ಶಕುಂತಲೆಯರ ಕಥೆ. ಆದರೂ ಕವಿ ತನ್ನ ಪ್ರತಿಭಾರೂಪಿ ಯಕ್ಷಿಣಿ ದಂಡದಿಂದ ಯುಕ್ತ ಬದಲಾವಣೆಗಳೊಂದಿಗೆ ಅದನ್ನು ಅಮರವಾಗಿಸಿರುವರು. ನಾಟಕದಾದ್ಯಂತ ನಾಯಿಕೆ ಶಕುಂತಲೆ ಮುಗ್ಧೆ, ಪ್ರೇಮಾಸಕ್ತ ತರುಣಿ, ಪ್ರಗಲ್ಭೆ, ಪತ್ನಿ, ಪರಿತ್ಯಕ್ತ ಗರ್ಭಿಣಿ, ಪತಿ ವಿರಹದಿಂದ ಕೊರಗುತ್ತಿರುವ ತಾಯಿ, ಹೀಗೆ ದೃಶ್ಯದಿಂದ ದೃಶ್ಯಕ್ಕೆ ಬದಲಿಸುವ ರಸ-ಭಾವ ಭಂಗಿಗಳನ್ನು ಆತ್ಮ ಸ್ವತ್ತಾಗಿಸಿಕೊಂಡು ಪ್ರೇಕ್ಷಕರ ಚಿತ್ತವನ್ನು ಅತ್ತಿತ್ತ ಅಲುಗಾಡದಂತೆ ಸೆರೆಹಿಡಿದುಕೊಂಡಿರುತ್ತಾಳೆ.

ಕಥೆ ಮುಂದುವರಿದಂತೆ ಒದಗುವ ದಾರುಣ ಸನ್ನಿವೇಶಕ್ಕೆ ಋಷಿ ಶಾಪವನ್ನು ನಿಮಿತ್ತ ಮಾಡಿ ಕವಿ ಅದಕ್ಕೊಂದು ದೈವೀ ಮೆರುಗನ್ನು ಕೊಟ್ಟಿರುವನು. ಅದು ಒದಗಿದ್ದಾದರೂ ಪತಿ ವಿರಹದಿಂದ ಅನ್ಯಮನಸ್ಕಳಾದ ಶಕುಂತಲೆಯಿಂದ ಘಟಿಸಿದ, ನವವಿವಾಹಿತ, ತರುಣಿಗೆ ಅಸಹಜವಲ್ಲದ, ಒಂದು ಕ್ಷುಲ್ಲಕ ಪ್ರಮಾದದಿಂದ. ಅದರ ವಿಮೋಚನೆಯಿಂದ ಖಳನಾಯಕನಂತೆ ಅವಳೊಂದಿಗೆ ವರ್ತಿಸಿದ ದುಷ್ಯಂತನನ್ನು ದೋಷಮುಕ್ತಗೊಳಿಸಿ ಪತಿ–ಪತ್ನಿ ಮತ್ತು ಮಧ್ಯಂತರದಲ್ಲಿ ಜನಿಸಿದ ಪುತ್ರ ಮೂವರ ಮಧುರ ಸಮ್ಮಿಲನಕ್ಕೆ ಕಾರಣವಾಗಿರುವುದು ನಾಟಕದ ಇನ್ನೊಂದು ವೈಶಿಷ್ಟ್ಯವಾಗಿದೆ.

ಮಾನವ ಮತ್ತು ನಿಸರ್ಗ ಎರಡನ್ನೂ ಒಂದಾಗಿಸಿ ಸಮನ್ವಯಿಸಿರುವುದು ಕೃತಿಯ ಮತ್ತೊಂದು ವೈಶಿಷ್ಟ್ಯ. ನಾಯಕಿಯ ಸಾಕುತಂದೆ ಕಣ್ವಋಷಿಯ ಆಶ್ರಮದಲ್ಲಿ ಮಾನವರಷ್ಟೇ ಅಲ್ಲ, ಅವರೊಂದಿಗೆ ಗಿಡಬಳ್ಳಿ, ಮೃಗಪಕ್ಷಿಗಳು ಕೂಡ ನಾಟಕದ ಪಾತ್ರಗಳಂತೆ ವರ್ತಿಸಿವೆ. ಮಧ್ಯದ ಎರಡು(೫–೬) ಅಂಕಗಳನ್ನು ಬಿಟ್ಟರೆ ಉಳಿದ ಐದು ಅಂಕಗಳಲ್ಲಿನ ಘಟನೆಗಳು ತಮ್ಮ ಆಧ್ಯಾತ್ಮಿಕ ತಪೋಬಲದಿಂದ ಎಲ್ಲಾ ಜೀವರಾಶಿಗಳಲ್ಲಿನ ಸಾಮರಸ್ಯವನ್ನು ಸಾಕ್ಷಾತ್ಕರಿಸಿಕೊಂಡ ಋಷಿಗಳ ಆಶ್ರಮಗಳಲ್ಲಿ ನಡೆದಿರುವುದು ಸಮಗ್ರ ನಾಟಕಕ್ಕೊಂದು ಬಗೆಯ ನಿಶಾಂತ ರಮ್ಯ ಆವರಣವನ್ನು ಕಲ್ಪಿಸಿಕೊಂಡಿದೆ.

ಅನುವಾದದ ಬಗ್ಗೆ: ಪ್ರಾಸ್ತಾವಿಕ ಪದ್ಯಗಳಲ್ಲಿ ಸ್ವಯಂ ಚುರಮರಿ ಅವರಿಗೆ ಬೇರೆ ಭಾಷೆಗಳಲ್ಲಿ ಪ್ರಸಿದ್ಧವಾದ ಕಾಳಿದಾಸನ ಈ ಕೃತಿ ಶಾಕುಂತಲದ ಅನುವಾದಗಳೊಂದಿಗೆ "ಸವಿಯೊಳು ಹಚ್ಚಿ ನೋಡಿ ನೇರೆ ಕನ್ನಡಿ ನನ್ನದು ಪೆಚ್ಚದಿರ್ದೊಡೆ ಕವಿತೆಯ ಗಂಡು ಮೆಟ್ಟು ಕರನಾಟಕ ಬಿಟ್ಟು ತೆರಳು ಪೋಗುವೆಂ" ಎಂದು ಹೇಳಿಕೊಂಡಿದ್ದಾರೆ. ಮರುಕ್ಷಣದಲ್ಲಿಯೇ ಮೂಲದ ಘನತೆ, ಅದನ್ನು ರಚಿಸಿದ ಕವಿಯ ಘನತೆ ಅವೆಲ್ಲಿ ತಾವೆಲ್ಲಿ, ಎಂಬುದರ ಅರಿವು ಮರುಕಳಿಸಿ: ಬಡ ಕವಿಗೆ ಅಂದರೆ ತಮಗೆ ಈ ಕುರೂಪಿ ಕೃತಿಕನ್ನಿಕೆ ಪುಟ್ಟಿರುವಳು. ಜಾಣರ ಅಡಿದಾಸಿಯಾಗಿ ಬಾಳೆಂದು ಅವಳನ್ನು ಕಳಿಸಿದ್ದೇನೆ; ಅವಳ ಯೋಗ್ಯತೆ ಅಷ್ಟೇನೆ; ಇದಕ್ಕೆ ತಪ್ಪಿ ನಡೆದರೆ ಡೊಂಬರ ದಾಸರೊಳ್ ಸಾಯ್‌ನಡೆ" ಎಂದು ಅವಳನ್ನು ಮರಳಿಸಿ ಕಳಿಸಿಬಿಡಿ, ತೊಂದರೆ ಬೇಡ, ಎಂದು ಯಾಚಿಸಿರುವರು. ಸಾಂಪ್ರದಾಯಕವೆನಿಸಿದರೂ ಸ್ವಲ್ಪದರಲ್ಲಿ ರಸಾಸ್ವಾದನವೇ(ಸವಿಯೊಳ್) ತಮ್ಮ ಮುಖ್ಯಧ್ಯೇಯ ಉಳಿದೆವಲ್ಲ, ಅವುಗಳ ಗುಣಗಳೇ ಇರಲಿ ದೋಷಗಳೇ ಇರಲಿ, ಗೌಣ ಎಂಬುದು ಅವರ ಈ ಮಾತುಗಳ ಮಥಿತಾರ್ಥ ಎಂಬುದು ಸ್ಪಷ್ಟ. ಪ್ರಕೃತದಲ್ಲಿರುವ ಈ ಮುಖ್ಯಧ್ಯೇಯ, ರಸಾಸ್ವಾದನ, ಅದೆಷ್ಟು ಮಟ್ಟಿಗೆ ಕೈಗೂಡಿದೆಯೆಂಬುದನ್ನು ಕಾಣಲೆತ್ನಿಸಿದೆ, ಜೊತೆಗೆ ಅವರು ಗೌಣವೆಂದು ಬಗೆದ ಅನ್ಯ ಗುಣದೋಷಗಳನ್ನು ಎತ್ತಿ ತೋರಿಸಿದೆ.

ಚುರಮರಿಯವರು ನೈಸರ್ಗಿಕ ಪ್ರತಿಭೆ, ಸ್ವಯಂ ಪ್ರಯತ್ನದಿಂದ ಗಳಿಸಿದ ಪಾಂಡಿತ್ಯ ಇವೆರಡೇ ಮೂಲ ಬಂಡವಾಳವೆಂಬುದು ಪ್ರಕೃತ ಮೌಲ್ಯಮಾಪನದ ಹಿನ್ನೆಲೆಯಾಗಿದ್ದರೆ, ಈ ಹಿಂದೆ ಪ್ರಸ್ತಾಪಿಸಿದ ತಮ್ಮ "ಗೀತ ಶಾಕುಂತಲದಲ್ಲಿ ಡಿ.ವಿ.ಜಿ. ಅವರು ವ್ಯಕ್ತಪಡಿಸಿದ ಕಲಾಕೃತಿ, ಸಾಹಿತ್ಯಶಿಲ್ಪ, ಯಾವುದೇ ಇರಲಿ, ಅದರ ಮೌಲ್ಯಮಾಪನದಲ್ಲಿ ತಾತ್ಪರ್ಯ ದೃಷ್ಟಿ ಹೆಚ್ಚು ವಿಧಾಯಕ: ಮೌಲ್ಯಮಾಪನ

ದೃಷ್ಟಿ ಕೃತಿಯ ಒಟ್ಟಾರ್ಥದ ಕಡೆಗೆ ಇರಬೇಕೇ ಹೊರತು ಅಕ್ಷರಕ್ಷರದ ಮೇಲೆ ಗರೆಗರೆಯ ಮೇಲೆ ಅಲ್ಲ. ವಾಚಕರ ಅಥವಾ ಶಕುಂತಲೆಯ ಮೂಲಕ ಲೇಖಕರೇ ಸ್ವರಚಿತವಾದ ಪದ್ಯವನ್ನು ಹಾಡಿಸಿದ್ದಾರೆ.

ಉದಾಹರಣೆಗೆ:

ದಾಟಿ:– "ಯಾಕೆ ತಡಾ ಸುಂದರಾಂಗಾ। ನ್ಯಾಕೆ ಕರೆತಾರೆ॥ ಬೇಕಾದಂಥಾ
ವಸ್ತುನೀವೆ ಬ್ಯಾಗ ಪೋಗಿಬಾರೆ"॥ ಎಂಬ ಪದದಂತೆ
"ನೀರು ಚಿಮ್ಮಡಿಸುವ ಬನ್ನಿರೆ ಬನದೊಳು॥ಪ॥
ಸಾರಸ ಸಖಿನುರೆ ಮೀರಿದ ಬಿಸಲೊಳು ॥ಅ.ಪ॥
ಜುಳು ಜುಳು ಹರಿಯುವ। ಖುರಿಗಳ ನಿರ್ಮಲ।
ಜಲಗಳು ಪೊಳೆವವು ।ಕಲಶವ ತುಂಬಿಕೋ।
ಮಲಕಿಸಲಯಗಳು ।ನಳನಳಿಸುವ ಓಲು ॥೧॥
ಶಾವಂತಿಗೆ ಮೊಲ್ಲೆ ।ಸೌರಿಡಲೆಳೆಯೆಳೆ।
ಹೂವಿನ ಗಿಡಗಳು। ಹಾದಿಯ ಕೆಲದೊಳು।
ಲೇಪಿರೆ ಮೊಗ್ಗೆಗಳು। ತೆರೆದರಳುವ ಓಲು ॥೨॥
ತಳಿ ಹಾಕಿರೆ ಬನ। ದೊಳು ಬಿಳಿ ಮಳಲಿನ।
ಥಳಥಳಿಸುವ ಪಥ। ದೊಳು ಬಲು ದಣಿಯುತ।
ನೆಳಲೊಳತಿಥಿಗಳು ಬರಲು ಸುಖಿಪ ಓಲು ॥೩॥"[೧೧]

ಮೂಲದಲ್ಲಿಲ್ಲ. ಬಾಲೆ ಓರ್ವಳು ಗೆಳತಿಯರೊಂದಿಗೆ ಗಿಡಗಳಿಗೆ ನೀರುಣಿಸುವ ಸನ್ನಿವೇಶದ ಸಾಮಾನ್ಯ ಬಣ್ಣನೆಯಾಗಿದೆ.

ಹಾಗೆಯೇ ಭಾಷಾಂತರದ ದೃಷ್ಟಿಯಿಂದ ಈ ಕೆಳಗಿನಂತೆ ನೋಡಲಾಗಿದೆ.

ಸಾರಥಿ:– (ಪು.ಸಂ.೫) (ಕಿವಿಗೊಟ್ಟು ಕೇಳಿ) "ದೊರೆಯೇ, ನಮ್ಮ ಬಾಣದಳತೆಯಲ್ಲಿಯೆ ಚಿಗರಿ ಬಂದಿದೆ; ಪರಂತು ನಡುವೆ ಮೂವರು ತಪಸ್ವಿಗಳು ಬಂದು ನಿಂತಿದ್ದಾರೆ.

ಅರಸು:– (ಗಾಬರಿಗೊಂಡು) ಹಾಗಾದರೆ ರಥವನ್ನು ನಿಲ್ಲಿಸು ಬೇಗ ನಿಲ್ಲಿಸು!

ಸಾರಥಿ:– ಮಹದಾಜ್ಞಾ(ರಥವನ್ನು ನಿಲ್ಲಿಸುತ್ತಾನೆ)

(ಇಷ್ಟರಲ್ಲಿ ಮೂವರು ಋಷಿ ಶಿಷ್ಯರು ಬರುತ್ತಾರೆ)

ಋಷಿ:– ಹೇ ರಾಜನ್, ಆಶ್ರಮದೊಳಗಣ ಚಿಗುರೆ ಕಂಡೆಯಾ? ಹೊಡೆಯತಕ್ಕದ್ದಲ್ಲ,

ನೋಡು:– ಮಾಲಿನೀ

ಅರಳುಗಳಲಿ ಕಿಚ್ಚಂ ಚುಚ್ಚಿದೊಲ್ ವಜ್ರಪೋಲ್ವ
ಸರಳನೆಸೆಯ ಬೇಡೈ ಕೋಮಲಾಂಗಕ್ಕೆ ಚೆಲ್ವ॥
ಎರಳೆಯ ಮೃದುಜೀವಕ್ಕಲ್ಲ ನಿನಸ್ತ್ರ ವ್ಯರ್ಥ।
ದುರುಳರಿನುರೆ ಪೀಡಾ ಪಟ್ಟರಂ ಪಾಲನಾರ್ಥ ॥೧೦॥

(ಪು.ಸಂ.೬) ಆದ್ದರಿಂದ ಬಾಣವನ್ನು ಹಿಂದಕ್ಕೆ ತೆಗೆ ಕಂಡೆಯಾ ನಿನ್ನಂಥ ಧರ್ಮಿಷ್ಟನಾದ ರಾಜನಿಗೆ ಇದು ಉಚಿತವಲ್ಲ.

ಅರಸು:– ಇಕ್ಕೋ ನೋಡಿ, ಹಿಂದಕ್ಕೆ ತೆಗೆದಿದ್ದೇನೆ.(ಬಾಣವನ್ನು ಬತ್ತಳಿಕೆಯಲ್ಲಿ ಸೇರಿಸುತ್ತಾನೆ)

ಋಷಿ:– ಭಾಪುರೆ ರಾಜನ್, ಪುರುವಂಶ ಪ್ರದೀಪನಾದಂಥ ಪುರುಷನಿಗೆ ಇದು ಯೋಗ್ಯವೇ ಸರಿ.

॥ಕಂದ॥ ಪುರುವಂಶ ದೀಪಕನೆ ನಿನ।
ಗಿರುತಿಹದು ಚಿತಮಿದೇ ನಡತೆಯು ಕೇಳಿನ್ನ॥
ಸರಿಗುಣತಾಳುವ ಸುಂದರ।
ತರಪುತ್ರಂ ಪುಟ್ಟಿ ಚಕ್ರವರ್ತಿಯೆನಿಸುವಂ ॥೧೦॥

ಉಳಿದ ಇಬ್ಬರು: (ಎರಡೂ ಕೈಗಳನ್ನು ಮುಂದಕ್ಕೆ ಚಾಚಿ) ಸರ್ವದೈವ ಚಕ್ರವರ್ತಿ ಪುತ್ರನ ಪ್ರಾಪ್ತಿಯಾಗಲಿ

ಅರಸು: ತಥಾಸ್ತು, ತಮ್ಮ ಆಶೀರ್ವಾದವನ್ನು ನಾನು ಶಿರಸ್ಸಿನಲ್ಲಿ ಧಾರಣ ಮಾಡಿದ್ದೇನೆ".[೨]

ಹೀಗೆ ಚುರಮುರಿಯವರ ಶಾಕುಂತಲ ಅನುವಾದ ನಾಟಕದಲ್ಲಿ ಬಳಸಿರುವ ಭಾಷೆ ಪ್ರಾದೇಶಿಕತೆಯಿಂದ ಕೂಡಿದೆ.

**ಬಸವಪ್ಪಶಾಸ್ತ್ರಿ: ಕರ್ಣಾಟಕ ಶಾಕುಂತಲ ನಾಟಕಂ**

'ಅಭಿಜ್ಞಾನ ಶಾಕುಂತಲ'ವನ್ನು ಹಲವಾರು ಲೇಖಕರು ಅನುವಾದಿಸಿದ್ದರೂ ಐತಿಹಾಸಿಕ ಮಹತ್ವವಿರುವುದು ಚುರಮುರಿ ಶೇಷಗಿರಿರಾಯರು ಮತ್ತು ಬಸವಪ್ಪಶಾಸ್ತ್ರಿಗಳಿಗೆ ಮಾತ್ರ. ಇವರಿಬ್ಬರ ಕೃತಿಗಳೂ ಭಿನ್ನ ಮನೋಧರ್ಮದಿಂದ ಕೂಡಿವೆ. "ಬಸವಪ್ಪಶಾಸ್ತ್ರಿಯು ಮೂಲವನ್ನು ಅನುಸರಿಸುವುದರ ಕಡೆಗೆ ಹೆಚ್ಚು ಗಮನವಿತ್ತು ತನ್ನ ಪ್ರೌಢ ಕವಿತ್ವ ರಚನೆಯಿಂದ ಕನ್ನಡಕ್ಕೆ ಶ್ರೇಷ್ಠ ಸಾಹಿತ್ಯ ಕೃತಿಯೊಂದನ್ನು ನೀಡಿದ್ದಾರೆ. ಶೇಷಗಿರಿರಾಯರ ಅನುವಾದದಲ್ಲಿ ಮೂಲಭಾವದ ವಿಸ್ತರಣೆ, ಪ್ರೇಕ್ಷಕರನ್ನು ಮೆಚ್ಚಿಸುವ ದೃಷ್ಟಿ ಮತ್ತು ಸಂಗೀತಪ್ರಿಯತೆ– ಇವು ಮುಖ್ಯ ಲಕ್ಷಣಗಳಾಗಿವೆ" (ಶ್ರೀನಿವಾಸ ಹಾವನೂರ, ಹೊಸಗನ್ನಡ ಅರುಣೋದಯ, ೧೯೭೪, ಪು.೩೯೪).

'ಕರ್ಣಾಟಕ ಶಾಕುಂತಲ ನಾಟಕಂ' ಕೃತಿಗೆ ಐತಿಹಾಸಿಕ ಮಹತ್ವವಿರುವುದು ಮಾತ್ರವಲ್ಲದೆ: ಕನ್ನಡ ಅನುವಾದಗಳಲ್ಲಿ ಬಸವಪ್ಪಶಾಸ್ತ್ರಿಗಳದ್ದೇ ಮೊದಲ ಶ್ರೇಣಿಯದ್ದಾಗಿದೆ. ಇದು ಅವರಿಗೆ

ಅಪಾರವಾದ ಕೀರ್ತಿ ಯಶಸ್ಸುಗಳನ್ನು ತಂದುಕೊಟ್ಟಿತು. ಬಹಳ ಕಾಲದಿಂದ ಕನ್ನಡ ಸಾಹಿತ್ಯದಲ್ಲಿ ಮರೆಯಾಗಿದ್ದ ನಾಟಕ ರಚನೆ ಇದರಿಂದ ಚುರುಕಾಯಿತು. "ಬಸವಪ್ಪಶಾಸ್ತ್ರಿಗಳ ಭಾಷಾಂತರ ಕನ್ನಡದಲ್ಲಿ ಮಾತ್ರವಲ್ಲ ಅನ್ಯ ಭಾಷೆಗಳ ಇತರ ಭಾಷಾಂತರಗಳೊಡನೆಯೂ ಸ್ಪರ್ಧಿಸಿ ಮೇಲಾದ ಸ್ಥಾನ ಪಡೆಯಬಲ್ಲದೆಂದು ವಿದ್ವಾಂಸರು ಭಾವಿಸಿದ್ದಾರೆ. ಮೂಲಾನುಸರಣೆಗೆ ಬಸವಪ್ಪಶಾಸ್ತ್ರಿಗಳು ತಮ್ಮ ಭಾಷಾಂತರದಲ್ಲಿ ಹೆಚ್ಚು ಮಹತ್ವ ಕೊಟ್ಟಿರುವರಾದರೂ ಕನ್ನಡ ಜಾಯಮಾನಕ್ಕೆ ಸಂಸ್ಕೃತದ ನುಡಿಗಟ್ಟನ್ನು ರೀತಿನೀತಿಗಳನ್ನು ಅವರು ಹೊಂದಿಸಿಕೊಂಡಿರುವ ವಿಧಾನ ಸ್ವಂತಿಕೆಯಿಂದ ಕೂಡಿದೆ" (ಮರುಳಸಿದ್ಧಪ್ಪ ಕೆ., ಆಧುನಿಕ ಕನ್ನಡ ನಾಟಕ, ೧೯೮೩, ಪು.೯೦). ಮಹಾಕವಿ ಕಾಳಿದಾಸನ ನಾಟಕಗಳನ್ನು ಪರಿವರ್ತಿಸುವುದು ಅಷ್ಟು ಸುಲಭವಲ್ಲ. ಅಲ್ಲಿನ ವಸ್ತು ಗಾಂಭೀರ್ಯ, ಭಾಷಾಭಿವ್ಯಕ್ತಿಗಳನ್ನು ಅನುಕರಿಸುವುದು ಕಷ್ಟ. ಇಂಥ ಸವಾಲಿನ ಕೆಲಸವನ್ನು ಬಸವಪ್ಪಶಾಸ್ತ್ರಿಗಳು ಅತ್ಯಂತ ಜವಾಬ್ದಾರಿಯಿಂದ ನಿರ್ವಹಿಸಿದ್ದಾರೆ. ಮುಖ್ಯವಾಗಿ ಅದು 'ಕರ್ಣಾಟಕ ಶಾಕುಂತಲ ನಾಟಕಂ'ನಲ್ಲಿ ಸಾಧಿತವಾಗಿದೆ. ಕಾಳಿದಾಸ ಮಹಾಭಾರತದ ಶಕುಂತಲೋಪಾಖ್ಯಾನದಲ್ಲಿ ಕೆಲವು ಅಂಶಗಳನ್ನು ಮಾರ್ಪಡಿಸಿ ಉಜ್ವಲವಾದ ಕಥಾನಕವೊಂದನ್ನು ಒದಗಿಸಿದ್ದಾರೆ. ಅದನ್ನು ಭಾಷಾಂತರಿಸುವಾಗ ಬಸವಪ್ಪಶಾಸ್ತ್ರಿಗಳು ಮೂಲಪಠ್ಯದ ಘನತೆಗೆ ಚ್ಯುತಿ ಬರೆದಂತೆ ಎಚ್ಚರ ವಹಿಸಿದ್ದಾರೆ. ಸಂಸ್ಕೃತವು ದೇಶಿ ಶಬ್ದರೂಪಗಳೊಂದಿಗೆ ಬೆರೆತುಹೋಗಿದೆ. ಒಟ್ಟು ಏಳು ಅಂಕಗಳಲ್ಲಿ ವಿಸ್ತಾರವಾಗಿ ನಿರೂಪಿತವಾಗಿರುವ ಪ್ರಸಂಗಗಳು, ಸನ್ನಿವೇಶಗಳು ರಸಸ್ವಾದನೆಯ ದೃಷ್ಟಿಯಿಂದ ಉತ್ಕೃಷ್ಟ ಭಾಗಗಳಾಗಿವೆ.

ಹಸ್ತಿನಾಪುರದ ದೊರೆಯಾದ ದುಷ್ಯಂತಮಹಾರಾಜನು ಬೇಟೆಯಾಡುತ್ತ ಮಾಲಿನೀ ತೀರದಲ್ಲಿರುವ ಕಣ್ವಾಶ್ರಮದ ಸಮೀಪಕ್ಕೆ ಬರುತ್ತಾನೆ. ಆಗ ತನ್ನನ್ನು ಅಟ್ಟಿ ಬರುತ್ತಿರುವ ರಾಜನನ್ನು ಕಂಡು ಬೆದರಿ ಬೆದರಿ ಓಡುವ ಜಿಂಕೆಯ ಚಿತ್ರ ಶಾಸ್ತ್ರಿಯವರ ಭಾಷಾಂತರ ಶಕ್ತಿಗೆ ಒಂದು ಉತ್ತಮ ನಿದರ್ಶನ.

"ಕೊರಲಂ ತಾಂ ಕೊಂಕುಗೆಯ್ಯುತ್ತಡಿಗಡಿಗೊಡನೈತರ್ಪ ತೇರಲ್ಲಣಂ ನ
ಟ್ಟಿರೆ ನೋಟಂ ಬಾಣಪಾತಕ್ಕಗಿದಿರುಕಿಸುತಂ ಪೃಷ್ಠಮಂ ಮಾರ್ಗದೊಳ್ ತೀ
ವಿರೆ ನೀಡುಂ ಬಿಟ್ಟ ಬಾಯಿಂ ಶ್ರಮದುದಿರ್ವರೆ ಮೆಲ್ದಿರ್ದ ದರ್ಭಾಂಕುರಂಗಳ್
ಧರೆಯಲ್ಲೋರೊರ್ಮೆ ಕಾಲಿಟ್ಟಹಹ ನಿರುಕಸ್ಯೆ ಬಾನೊಳೇ ಪಾರಿಪೋಕುಂ।(೧-೭)"[೧೩]

ಅಷ್ಟರಲ್ಲಿ ಅಡ್ಡಲಾಗಿ ವೈಖಾನಸರು ಬರುತ್ತಾರೆ. ಅವರು 'ದೀನರಂ ಪೊರೆವುದಕಲ್ಲದೆ ನಿರಪರಾಧ ಜಂತುವ ಸದೆಯಲ್ ನಿಮಗಲ್ತು ಶಸ್ತ್ರಮವನೀತಳದೊಳ್' (ಅಂಕ೧) ಎಂದು ಹೇಳಿದಾಗ ದುಷ್ಯಂತನು ಬಾಣಪ್ರಯೋಗವನ್ನು ನಿಲ್ಲಿಸುತ್ತಾನೆ. ಅವಕಾಶವಿದ್ದಲ್ಲಿ ಕಣ್ವರ ಆಶ್ರಮದಲ್ಲಿ ಆತಿಥ್ಯವನ್ನು ಸ್ವೀಕರಿಸಬಹುದೆಂದು ವೈಖಾನಸರು ತಿಳಿಸುತ್ತಾರೆ. ಅಲ್ಲಿಗೆ ಬಂದ ದುಷ್ಯಂತ ಆಶ್ರಮದಲ್ಲಿ ಪ್ರಿಯಂವದೆ, ಅನಸೂಯರ ಜೊತೆ ಇದ್ದ ಶಕುಂತಲೆಯಲ್ಲಿ ಅನುರಕ್ತನಾಗುತ್ತಾನೆ. ತಪೋವನದ ವಧುಗಳ ಲಾವಣ್ಯ ಅಂತಃಪುರದಲ್ಲಿ ಇರುವವರಿಗಿಂತ ಮಿಗಿಲಾಗಿ ಕಾಣುತ್ತದೆ. ತುಂಬು ಯೌವನಸ್ಥಳಾದ ಶಕುಂತಲೆಯನ್ನು ಕಂಡು ಹೀಗೆ ನುಡಿಯುತ್ತಾನೆ:

"ಶೈವಲದಿಂದೆ ತಾವತೆ ಮುಸುಂಕಿದೊಡಂ ರಮಣೀಯಮಿಂದುವಿಂ
ಗೀವುದು ಕಾಂತಿಯಂ ಮಲಿನಮಾದೊಡಮೇಂ ಕರೆ ವಲ್ಕದಿಂದಿವಳ್।
ಪ್ರಾವೃತೆಯಾದೊಡಂ ಬಹುಮನೋಜ್ಞೆ ಮನೋಹರವಾದ ರೂಪುಗ
ಳ್ಗಾವುದುತಾನೆ ತಾಳಿದೊಡೆ ಭೂಷಣವರಾಗದೆ ಪೋಪುದುರ್ವಿಯೊಳ್॥ (೧-೨೦)"[೧೪]

ತಾವರೆಯು ಪಾಚಿಯಿಂದ ಮುಸುಕಿದ್ದರೂ ರಮಣೀಯವಾಗಿರುವಂತೆ, ಕಪ್ಪುಕಲೆಯು ಚಂದ್ರನಿಗೆ ಕಾಂತಿಯನ್ನು ನೀಡುವಂತೆ, ನಾರುಬಟ್ಟೆಯನ್ನು ಧರಿಸಿದ್ದರೂ ಶಕುಂತಲೆ ಮನೋಜ್ಞವಾಗಿ ಕಾಣುತ್ತಿದ್ದಳು. ಮನೋಹರವಾದ ರೂಪನ್ನು ಹೊಂದಿರುವವರಿಗೆ ಯಾವುದು ತಾನೇ ಅಲಂಕಾರವಾಗುವುದಿಲ್ಲ ಎಂದು ದುಷ್ಯಂತ ಆಶ್ಚರ್ಯಚಕಿತನಾಗುತ್ತಾನೆ. ಅನಸೂಯ-ಪ್ರಿಯಂವದೆಯಿಂದ ಶಕುಂತಲೆಯ ಜನ್ಮವೃತ್ತಾಂತವನ್ನು ತಿಳಿಯುತ್ತಾನೆ.

ಶಕುಂತಲೆಯೂ ಪ್ರಥಮದರ್ಶನದಲ್ಲೇ ದುಷ್ಯಂತನಿಗೆ ಮಾರು ಹೋಗಿರುವಳು. ಆದರೂ ಅವಳಿಗೆ 'ತಪೋವನಕ್ಕೆ ವಿರೋಧಿಯಾದ ವಿಕಾರಕ್ಕೆ ಒಳಗಾದೆನು'(ಅಂಕ೧) ಎನಿಸುತ್ತದೆ. ಮನಸ್ಸು ದುಷ್ಯಂತನನ್ನು ಬಿಟ್ಟು ಬರಲು ಹಿಂಜರಿಯುತ್ತಿದೆ; "ಎಲೆ ಅನಸೂಯೆ, ಸೂಜಿಯಂತಿರುವ ದರ್ಭೆಯ ತುದಿಯು ನನ್ನ ಕಾಲಿಗೆ ಚುಚ್ಚಿತು; ಇದಲ್ಲದೆ ಈ ಗೋರಂಟಿ ಮರದ ಕೊನೆಗೆ ನನ್ನ ನಾರುಸೀರೆಯ ಸೆರಗು ಸಿಕ್ಕಿತು; ಬಿಡಿಸಿಕೊಂಡು ಬರುವ ಪರ್ಯಂತ ನನ್ನನ್ನು ಕಾದಿರಿ" ಎಂದು ನೆವದ ನುಡಿಯನ್ನು ಆಡಿ, ದುಷ್ಯಂತನನ್ನು ನೋಡಲು ತವಕಿಸುತ್ತಾಳೆ. ಈ ಸಾಲುಗಳಲ್ಲಿ ಶಕುಂತಲೆಯ ಮನಸ್ಥಿತಿಯನ್ನು ತುಂಬಾ ಸ್ವಾರಸ್ಯಕರವಾಗಿ ಹಿಡಿದಿಡಲಾಗಿದೆ. 'ಶಕುಂತಲೆಯ ಅನುರಾಗಚೇಷ್ಟೆಯ ದೆಸೆಯಿಂದ'(ಅಂಕ೧) ದುಷ್ಯಂತನ ಮನಸ್ಸೂ ಚಂಚಲಗೊಂಡಿದೆ:

"ಮುಂದಕೆ ಪೋಪುದು ತನುವಿದು
ಪಿಂದೆಸೆಗೋಡುವುದು ಬಳಕೆಗೈದದ ಮನವೇ।
ನೆಂದಪೆನೊ ಪವನನಿದಿರೊಳ್
ತಂದ ಪತಾಕಿಕೆಯ ಚೀನವಸನಮಿದೆಂಬೊಲ್ (೧-೩೪)"[೧೫]

ದುಷ್ಯಂತನಿಗೆ ಹಸ್ತಿನಾಪುರಕ್ಕೆ ಹಿಂದಿರುಗುವ ಮನಸ್ಸಿಲ್ಲ; ಅದು ವಿದೂಷಕ ಮಾಢವ್ಯನಿಗೆ ಸ್ಪಷ್ಟವಾಗಿದೆ: "ನೆನ್ನೆಯ ದಿವಸ ನಮ್ಮನ್ನು ಹಿಂದೆ ಬಿಟ್ಟು ಹುಲ್ಲೆಯನ್ನು ಅಟ್ಟಿಕೊಂಡು ಆಶ್ರಮವನ್ನು ಹೊಕ್ಕ ನಮ್ಮ ರಾಯನಿಗೆ ನನ್ನ ದುರದೃಷ್ಟವು ಶಕುಂತಲೆಯೆಂಬುವಳನ್ನು ಬೇರೆ ತೋರಿಸಿತು. ಈಗ ನಮ್ಮ ರಾಯನು ಊರಿಗೆ ಹೋಗುವ ಸಮಾಚಾರವನ್ನೇ ಎತ್ತುವುದಿಲ್ಲ"(ಅಂಕ೨) ಎಂದು ವಿದೂಷಕನಿಗೆ 'ಆಕೆಯನ್ನು ನೀನು ನೋಡಿದ್ದರೆ ಹೀಗೆ ಹೇಳುತ್ತಿರಲಿಲ್ಲ'(ಅಂಕ೨) ಎಂದು ಶಕುಂತಲೆಯ ರೂಪ ವರ್ಣನೆ ಮಾಡುತ್ತಾನೆ.

"ಪ್ರಾಣಂಬೊಯ್ದನೊ ಚಿತ್ರಿಸುತ್ತುಮವಳಂ ಸೌಂದರ್ಯಸಾರಂಗಳಿಂ
ವಾಣೀವಲ್ಲಭನೋವೊ ನಿರ್ಮಿಸಿದನೋ ಮೇಣ್ ಚಿತ್ತದಿಂ ಗೆಯ್ದನೊ!

ಜಾಣಂ ಬ್ರಹ್ಮನ ಮತ್ತ ಮಾಕೆಯೊಡಲಂ ನೋಡಲ್ಕದೇನೆಂದಪೆಂ

ಕ್ಷೋಣೀಭಾಗದೆ ಬೇರೆ ತೋರ್ಕುಮೆನಗಾಸ್ತ್ರೀರತ್ನ ಸೃಷ್ಟಿಕ್ರಮು॥ (೨–೪೪)"[೧೬]

ಬ್ರಹ್ಮ ಮೊದಲು ಅವಳ ಚಿತ್ರ ಬರೆದು ಬಳಿಕ ಜೀವಕಳೆಯನ್ನು ತುಂಬಿದನೋ ಅಥವಾ ಸೌಂದರ್ಯದ ರಾಶಿಯಿಂದ ಸೃಷ್ಟಿಸಿದನೋ ತಿಳಿಯದು. ಸೃಷ್ಟಿಕರ್ತನ ಎಲ್ಲಾ ಸಾಮರ್ಥ್ಯವನ್ನು ಅವಳ ನಿರ್ಮಾಣದಲ್ಲೇ ಕಾಣಬಹುದು. ಅವಳು ಅಪೂರ್ವ ಸ್ತ್ರೀರತ್ನ ಎನ್ನುವನು. ಆಶ್ರಮವಾಸಿಗಳು ರಾಜನ ಬಳಿಗೆ ಬಂದು, ಯಾಗಕ್ಕೆ ತೊಂದರೆ ಮಾಡುತ್ತಿರುವ ರಾಕ್ಷಸರಿಂದ ನಮ್ಮನ್ನು ರಕ್ಷಿಸಬೇಕೆಂದು ಕೋರುತ್ತಾರೆ. ಅದೇ ವೇಳೆಗೆ 'ಪುತ್ರಪಿಂಡಪಾಲನ ವ್ರತ'ದಲ್ಲಿ ಭಾಗವಹಿಸಬೇಕೆಂದು ರಾಜಮಾತೆಯಿಂದ ಆಜ್ಞಾಪನೆ ಬರುತ್ತದೆ. ತಪಸ್ವಿಗಳಿಗೆ ನೀಡಿರುವ ಅನುಗ್ರಹ; ತಾಯಿಯ ಆಜ್ಞೆಯನ್ನು ಮೀರಲಾರದ ಸಂದಿಗ್ಧದಲ್ಲಿ 'ಎಲೈ ಮಿತ್ರನೆ, ಮಾತೃಶ್ರೀಯವರಿಗೆ ನಿನ್ನಲ್ಲಿ ಪುತ್ರವಾತ್ಸಲ್ಯವಿರುವುದು. ಆದುದರಿಂದ ಪೂಜ್ಯನಾದ ನೀನು ಇಲ್ಲಿಂದ ಹಿಂದಿರುಗಿ ತಪಸ್ವಿ ಕಾರ್ಯದಲ್ಲಿ ನನಗಿರುವ ತತ್ಪರತೆಯನ್ನು ತಿಳಿಸಿ ಅವರ ಪುತ್ರ ಕೃತ್ಯವನ್ನು ನೆರವೇರಿಸತಕ್ಕವನಾಗು'(ಅಂಕ೨) ಎಂದು ವಿದೂಷಕನನ್ನು ಕಳುಹಿಸಿ. ತಾನು ಆಶ್ರಮದ ರಕ್ಷಣೆಯಲ್ಲಿ ತೊಡಗುವನು. ಆಗ ದುಷ್ಯಂತನ ಅಭಿಲಾಷೆ ಈಡೇರುವ ಸಂದರ್ಭ ಒದಗಿಬರುತ್ತದೆ.

ದುಷ್ಯಂತ–ಶಕುಂತಲೆ ಒಬ್ಬರನೊಬ್ಬರು ಅಗಲಿರಲಾರದೆ ವಿರಹತಪ್ತರಾಗಿದ್ದಾರೆ. ಶಕುಂತಲೆಯ ಅವಸ್ಥೆಗೆ ಸಖಿಯರು ಮರುಗುತ್ತಾರೆ. ಅವರಿಗೆ ನಿಜಸಂಗತಿ ತಿಳಿಯುತ್ತದೆ. 'ಅದು ನಿಮಗೆ ಸಮ್ಮತವಾದರೆ, ನನ್ನಲ್ಲಿ ಆ ರಾಜಋಷಿಗೆ ದಯೆಯುಂಟಾಗುವಂತೆ ಯತ್ನಿಸಿರಿ. ಇಲ್ಲದ ಪಕ್ಷದಲ್ಲಿ, ಅವಶ್ಯವಾಗಿ ನನಗೆ ತಿಲೋದಕವನ್ನು ಬಿಡಿ'(ಅಂಕ೩) ಎಂಬ ಮಾತನ್ನು ಕೇಳಿ ಅನಸೂಯ–ಪ್ರಿಯಂವದೆ ಶಕುಂತಲೆಯ ಮನೋರಥವನ್ನು ನೆರವೇರಿಸಲು ನಿರ್ಧರಿಸಿ; ದುಷ್ಯಂತನಿಗೆ ಅನುರಾಗ ಪತ್ರವನ್ನು ಬರೆಯುವಂತೆ ಸಲಹೆ ಮಾಡುತ್ತಾರೆ. ಆ ಪತ್ರದ ಸ್ವಾರಸ್ಯವಿದು.

"ನಾನರಿದಳಲ್ತು ನಿನ್ನಯ

ಮಾನಸಮಂ ಮದನನಾದೊಡಿರುಳುಂ ಪಗಲುಂ।

ಹಾ ನಿರ್ದಯ ತಪಿಸುವನಕ

ಟಾ ನಿನ್ನೊಳ್ ಕೂಡಲೆಳಸಿದೆನ್ನಂಗಗಳಂ (೩–೬೭)"[೧೭]

ನಾನು ನಿನ್ನ ಮನಸ್ಸನ್ನು ಅರಿತಿಲ್ಲ; ನಿನ್ನನ್ನು ಕೂಡಲು ಬಯಸಿರುವ ನನ್ನನ್ನು ಮನ್ಮಥನು ಹಗಲಿರುಳೂ ಬಾಧಿಸುತ್ತಿರುವನು ಎಂದು ಶಕುಂತಲೆ ಅತೀವವಾದ ಅನುರಕ್ತಿಯನ್ನು ವ್ಯಕ್ತಪಡಿಸುತ್ತಾಳೆ. ಆಗ, ಸಮೀಪಕ್ಕೆ ಬಂದ ದುಷ್ಯಂತ ಮನಸಿಜನು ನನ್ನನ್ನು ಸುಟ್ಟು ಬಿಡುತ್ತಿದ್ದಾನೆ ಎನ್ನುತ್ತಾನೆ. ಸಾಮಾನ್ಯವಾಗಿ ಅರಸರು ಬಹುವಲ್ಲಭರು. ನಮ್ಮ ಪ್ರಿಯಸಖಿಯನ್ನು ವ್ಯಸನ ಪಡದ ಹಾಗೆ ನೋಡಿಕೊಳ್ಳಬೇಕೆಂದು ಅನಸೂಯೆ ಹೇಳಿದಾಗ, ದುಷ್ಯಂತ ಹೀಗೆ ನುಡಿಯುತ್ತಾನೆ:

"ಪಲವರಸಿಯರೆನಗಿರ್ದುಂ
ಕುಲದುತ್ಕರ್ಷಾಸ್ಪದಂಗಳೆನಿಸುಗುಮಿರ್ವರ್।
ಆಲನಿಧಿರಶನಾಂಚಿತೆಯಾ
ದಿಳೆಯಂ ನಿಮ್ಮಿರ್ವರಿಷ್ಟ ಸಖಿಯಾದಿವಳುಂ (೩–೭೧)"[೧೮]

ನನಗೆ ಹಲವು ಮಂದಿ ಪತ್ನಿಯರಿದ್ದರೂ, ಸಮುದ್ರದಿಂದ ಸುತ್ತುವರಿಯಲ್ಪಟ್ಟ ಭೂಮಿ ಮತ್ತು ನಿಮ್ಮಿಬ್ಬರ ಇಷ್ಟಸಖಿ ಮಾತ್ರ ನನ್ನ ಕುಲಕ್ಕೆ ಪ್ರತಿಷ್ಠೆಯನ್ನು ತರುವವರು ಎನ್ನುತ್ತಾನೆ. ಅವನ ಮಾತುಗಳಿಂದ ನಿಶ್ಚಿಂತರಾದ ಸಖಿಯರು ಶಕುಂತಲೆ–ದುಷ್ಯಂತರನ್ನು ಬಿಟ್ಟು ಹೋಗುವರು. ಸುಖಾಪೇಕ್ಷಿಗಳಾದ ಅವರಿಬ್ಬರೂ ಗಾಂಧರ್ವವಿವಾಹ ವಿಧಿಯಿಂದ ಮದುವೆಯಾಗುವರು. ಶಕುಂತಲೆಯ ಬೆರಳಿಗೆ ಜ್ಞಾಪಕಾರ್ಥವಾಗಿ ಉಂಗುರವನ್ನು ತೊಡಿಸಿ, ಕೆಲವು ದಿನಗಳಲ್ಲಿಯೇ ನಿನ್ನನ್ನು ಕರೆಯಿಸಿಕೊಳ್ಳುವುದಾಗಿ ಹೇಳಿ ದುಷ್ಯಂತನು ಹಸ್ತಿನಾವತಿಗೆ ಹಿಂತಿರುಗುತ್ತಾನೆ.

'ದೂರ್ವಾಸ ಶಾಪ ವೃತ್ತಾಂತ' ನಾಟಕಕ್ಕೆ ಹೊಸ ತಿರುವನ್ನು ನೀಡುತ್ತದೆ. ಕಾಳಿದಾಸನು ಸೃಷ್ಟಿಸಿರುವ ಈ ಪ್ರಸಂಗ ಶಾಕುಂತಲೋಪಾಖ್ಯಾನದಲ್ಲಿ ಇಲ್ಲ. ಆದರೆ, ಇದು ಕಥನದ ಗತಿಯನ್ನೇ ಬದಲಿಸಿ ದುಷ್ಯಂತನ ವಿಸ್ಮೃತಿ ಮತ್ತು ಮನಃಪರಿವರ್ತನೆಗೆ ದಾರಿ ಮಾಡಿಕೊಡುತ್ತದೆ. ಶಕುಂತಲೆ ದುಷ್ಯಂತನ ಚಿಂತೆಯಲ್ಲಿ ಎಲ್ಲವನ್ನೂ ಮರೆತಿದ್ದಾಳೆ. ಆಶ್ರಮಕ್ಕೆ ಬಂದ ದೂರ್ವಾಸ ಮುನಿಯ ಕಡೆ ಆಕೆಗೆ ಸ್ವಲ್ಪವೂ ಗಮನವಿಲ್ಲ. ತನ್ನನ್ನು ಗೌರವಿಸಲಿಲ್ಲವೆಂಬ ಒಂದೇ ಒಂದು ಕಾರಣದಿಂದ ಕೋಪಗೊಂಡ ದೂರ್ವಾಸಮುನಿ "ದುಷ್ಯಂತ ನಿನ್ನನ್ನು ಮರೆಯಲಿ" ಎಂದು ಶಾಪ ಕೊಟ್ಟು ತೆರಳಿದನು:

"ನೀನಾವನ ಚಿಂತಿಸುತೆ ತ
ಪೋನಿಧಿಯಾದೆನ್ನನರಿಯದಾದೆಯೊ ನಿನ್ನಂ।
ಏನರಿಪಿದೊಡಂ ಸ್ಮರಿಸಂ
ತಾನಾತಂ ಮುನ್ನ ಗೈದುದಂ ಮರುಳನವೋಲ್ (೪–೭೯)"[೧೯]

ತಪಸ್ವಿಯಾದ ನನ್ನನ್ನು ಸತ್ಕರಿಸದೆ, ನೀನು ಯಾರ ಬಗ್ಗೆ ಚಿಂತಿಸುತ್ತಿರುವೆಯೋ ಆ ವ್ಯಕ್ತಿಗೆ ಜೀವನದಲ್ಲಿ ನಡೆದಿರುವ ಘಟನೆಗಳು ಮರೆತು ಹೋಗಲು ನಿನ್ನ ನೆನಪು ಬರದಿರಲಿ ಎಂದು ಶಾಪ ನೀಡುತ್ತಾನೆ. ಶಕುಂತಲೆಯ ಸಖಿಯಾದ ಪ್ರಿಯಂವದೆ, 'ತಮ್ಮ ತಪಃ ಪ್ರಭಾವವನ್ನು ತಿಳಿಯದ ಪುತ್ರಿಯ ಇದೊಂದು ಪ್ರಥಮಾಪರಾಧವನ್ನು ಕ್ಷಮಿಸಬೇಕು' ಎಂದು ಕೇಳಿದರೂ ನಮ್ಮ ವಚನವು ತಪ್ಪತಕ್ಕದಲ್ಲ. ಆದರೆ ಅಭಿಜ್ಞಾನಾಭರಣ ದರ್ಶನದಿಂದ ಶಾಪ ವಿಮೋಚನೆಯಾಗುವುದು ಎಂದು ದೂರ್ವಾಸನು ಉತ್ತರಿಸುತ್ತಾನೆ. ಈ ವೃತ್ತಾಂತವನ್ನು ಅನಸೂಯ–ಪ್ರಿಯಂವದೆ ಯಾರಿಗೂ ಹೇಳುವುದಿಲ್ಲ. ಪತಿಯ ಚಿಂತೆಯಲ್ಲಿ ಮುಳುಗಿರುವ ಶಕುಂತಲೆಗೆ ಇದರ ಪರಿವೆಯಿಲ್ಲ.

ಸೋಮತೀರ್ಥದಿಂದ ಕಣ್ವರು ಹಿಂದಿರುಗಿದ್ದಾರೆ. ದುಷ್ಯಂತನನ್ನು ವರಿಸಿ ಶಕುಂತಲೆ ಗರ್ಭವತಿಯಾಗಿರುವಳೆಂಬ ವಿಷಯವನ್ನು ಹೇಗೆ ತಿಳಿಸುವುದೆಂದು ಅನುಸೂಯ ಚಿಂತಿಸುತ್ತಿದ್ದಾಳೆ. ಆದರೆ ಅಶರೀರವಾಣಿಯಿಂದ ಎಲ್ಲ ವಿಚಾರಗಳನ್ನು ತಿಳಿದ ಕಣ್ವರು ಸಂತಸದಿಂದ ಇದ್ದಾರೆ. ಅವರು ಶಕುಂತಲೆಯನ್ನು ಪತಿಗೃಹಕ್ಕೆ ಕರೆದುಕೊಂಡು ಹೋಗಲು ಗೌತಮಿ, ಶಾರ್ಙ್ಗರವ ಮತ್ತು ಶಾರದ್ವತನನ್ನು ನೇಮಿಸುವರು. ಶಕುಂತಲೆಯನ್ನು ಬೀಳ್ಕೊಡುವ ಭಾಗ ಕಾಳಿದಾಸನ ಉತ್ಕೃಷ್ಟ ಕಾವ್ಯಪ್ರತಿಭೆಗೆ ಸಾಕ್ಷಿಯಾಗಿದೆ. ಆ ಸಂಬಂಧವಾದ ಪ್ರಸಿದ್ಧ ಹೇಳಿಕೆಯಿದು:

"ಕಾವ್ಯೇಷು ನಾಟಕಂ ರಮ್ಯಂ, ತತ್ರ ರಮ್ಯಾ ಶಕುಂತಲಾ।
ತತ್ರಾಪಿಚ ಚತುರ್ಥೋಽಂಕಃ, ತತ್ರ ಶ್ಲೋಕ ಚತುಷ್ಟಯಂ॥"[೨೦]

ಕಾವ್ಯಗಳಲ್ಲಿ ನಾಟಕ; ಅವುಗಳಲ್ಲಿ ಕಾಳಿದಾಸನ ಶಾಕುಂತಲ, ಅದರಲ್ಲಿಯೂ ನಾಲ್ಕನೆಯ ಅಂಕ, ನಾಲ್ಕನೆಯ ಅಂಕದಲ್ಲಿ ನಾಲ್ಕು ಶ್ಲೋಕಗಳು ರಮಣೀಯವಾಗಿವೆ ಎಂಬುದು ವಿದ್ವಾಂಸರ ಅಭಿಮತ. ಆ ನಾಲ್ಕು ಶ್ಲೋಕಗಳನ್ನು ಬಸವಪ್ಪಶಾಸ್ತ್ರಿಗಳು ಅತ್ಯಂತ ಭಾವಪೂರ್ಣವಾಗಿ, ಅರ್ಥಗರ್ಭಿತವಾಗಿ ಅನುವಾದಿಸಿದ್ದಾರೆ. 'ಕಾಳಿದಾಸನ ಕಲಾಶಕ್ತಿ ಶಾಕುಂತಲ ನಾಟಕದಲ್ಲಿ ಪರಿಣತಿಗೊಂಡಿದ್ದರೆ, ಬಸವಪ್ಪಶಾಸ್ತ್ರಿಗಳ ಭಾಷಾಂತರ ಕಲೆ ಕನ್ನಡ ಶಾಕುಂತಲದಲ್ಲಿ ಪರಿಣತಿಗೊಂಡಿದೆ' (ಶಾಮರಾಯ ತ.ಸು., ಕನ್ನಡ ನಾಟಕ, ೧೯೬೨, ಪು.೧೦೨) ಎಂಬ ಮಾತು ಅನುವಾದಕನ ಕಲಾಭಿಜ್ಞತೆಯನ್ನು ಸೂಚಿಸಿದೆ. ಆ ನಾಲ್ಕು ಪದ್ಯಗಳ ಭಾವಸ್ವಾರಸ್ಯ ಹೀಗಿದೆ:

ಶಕುಂತಲೆಯನ್ನು ಅಗಲುವ ಪ್ರಸಂಗ ಬಂದಾಗ ಕಣ್ವರು ತಡೆಯಲಾರದ ಮೂಕವೇದನೆಗೆ ಒಳಗಾಗುತ್ತಾರೆ.

"ಕಳವಳವಾಂತುದೆನ್ನೆರ್ದೆ ಶಕುಂತಳೆ ಪೋದಪಳೆಂದು ಕಂಠಮು
ಮ್ಮಳಿಸುವುದೊತ್ತುವಶ್ರುಭರದಿಂ ಜಡಮಾದುದು ದೃಷ್ಟಿಚಿಂತೆಯಿಂ।
ದಳಲಿನಿತಾಗೆ ಕಾಡ ಮನುಜಂಗೆನಗಂ ಕಡುನೇಹದಿಂದಮಿ
ನ್ನುಳಿದ ಗೃಹಸ್ಥರಾತ್ಮಭವೆಯಂ ಕಳುಪತ್ತಕಟೆಂತಳಲ್ವರೋ॥ (೪-೮೪)"[೨೧]

ಶಕುಂತಲೆ ಹೋಗುವಳೆಂದು ನನ್ನ ಮನಸ್ಸು ಕಳವಳಪಡುತ್ತಿದೆ. ದುಃಖದಿಂದ ಕಂಠ ಗದ್ಗದಿತವಾಗಿದೆ; ಕಣ್ಣೀರನ್ನು ತಡೆದುಕೊಂಡಿದ್ದರಿಂದ ದೃಷ್ಟಿ ಮಸುಕಾಗಿದೆ. ಚಿಂತೆಯಿಂದ ಅರಣ್ಯವಾಸಿಯಾದ ನನಗೇ ಇಷ್ಟು ವ್ಯಥೆಯಾಗುವುದಾದರೆ, ಇನ್ನು ಗೃಹಸ್ಥರಾದವರು ತಮ್ಮ ಮಗಳನ್ನು ಕಳುಹಿಸುವಾಗ ಎಷ್ಟೊಂದು ದುಃಖಿಸುವರೋ ಎಂದು ಕಣ್ವರು ಮರುಗುತ್ತಾರೆ. ಲೌಕಿಕ ಬದುಕಿನಿಂದ ದೂರವಿದ್ದು ಆಶ್ರಮವಾಸಿಯಾಗಿದ್ದ ಋಷಿಗಳಿಗೆ ಸಾಕುಮಗಳ ಬಗ್ಗೆ ಅಪಾರವಾದ ಪ್ರೀತಿ, ಅನುಕಂಪ ಹುಟ್ಟುತ್ತದೆ. ಆಶ್ರಮದ ಸರ್ವಸ್ವವೇ ಬಿಟ್ಟು ಹೋಗುತ್ತಿರುವ ಭಾವ ಅವರನ್ನು ಆವರಿಸಿದೆ.

"ಜಲವನದಾವಳಿಂಟಳೆರೆದಲ್ಲದೆ ನಿಮ್ಮಯ ಪಾತೆಗಂಬುವಂ
ತಳಿರ್ಗಳ ಕೊಯ್ಯಳಾವಲೊಲವಿಂ ಮಿಗೆ ಸಿಂಗರದಾಸೆಯುಳ್ಳೊಡಂ।
ಅಲರ್ಗಳ ತಾಳೆ ನೀವು ಮೊದಲುತ್ಸವವಾಂತಪಳಾವಳಾ ಶಕುಂ
ತಳೆ ಪತಿಸದ್ಮಕೈದಿದಪಳಾಕೆಗನುಜ್ಞೆಯನೀವುದೆಲ್ಲರುಂ॥ (೪-೮೭)"[೨೨]

ಶಕುಂತಲೆಗಿದ್ದ ಪ್ರಕೃತಿಪ್ರೇಮ ಅಗಾಧವಾದುದು. ಅವಳು ಆಶ್ರಮದ ಗಿಡಗಳಿಗೆ ನೀರೆರೆಯದೆ ತಾನು ನೀರು ಕುಡಿಯುತ್ತಿರಲಿಲ್ಲ. ಅಲಂಕಾರ ಮಾಡಿಕೊಳ್ಳುವ ಆಸೆಯಿದ್ದರೂ ಚಿಗುರನ್ನು ಚಿವುಟುತ್ತಿರಲಿಲ್ಲ; ಹೂ ಬಿಡುವ ಲತೆಗಳನ್ನು ಕಂಡರೆ ಅವಳಿಗೆ ಎಲ್ಲಿಲ್ಲದ ಆನಂದ. ಇಂತಹ ಶಕುಂತಲೆ ಪತಿಗೃಹಕ್ಕೆ ಹೊರಟಿದ್ದಾಳೆ; ನೀವೆಲ್ಲ ಆಕೆಗೆ ಅನುಜ್ಞೆಯನ್ನು ಕೊಡಿರೆಂದು ಕಣ್ವರು ಎಲ್ಲರಲ್ಲೂ ಬಿನ್ನವಿಸಿಕೊಳ್ಳುವರು.

"ಪಿರಿದುಂ ಚಿಂತಿಸಿ ಸಂಯಮಾರ್ಥರೆನಿಪೆಮ್ಮಂ ಮೇಣ್ ಭವದ್ವಂಶದೆ
ೞ್ತರಮಂ ನಿನ್ನೊಳಗೀಕೆ ತಾನೆಯೊಲವೆತ್ತಾಪಾಂಗುಮ ಪೆಂಡಿರೊಳ್।
ಸರಿಗಂಡೀಕೆಯ ನೀಂ ಬರ್ದುಂಕಿಪುದು ಭಾಗ್ಯಾಧೀನಮಿನ್ನಿಂತರಿಂ
ಪೆರತೆಲ್ಲಂ ಬಗೆಯಲ್ಕದಂ ನುಡಿವುದಲ್ಲಂ ದಲ್ ವಧೂಬಂಧುಗಳ್ (೪-೯೫)"[೨೩]

ಕಣ್ವರು ಶಾರ್ಙ್ಗರವನ ಮೂಲಕ ದುಷ್ಯಂತನಿಗೆ ಕಳುಹಿಸಿದ ಸಂದೇಶದ ನುಡಿಗಳಿವು: ಸಂಯಮಶೀಲರಾದ ನಮ್ಮ ಬಗ್ಗೆ ಮತ್ತು ನಿನ್ನ ವಂಶದ ಉನ್ನತಿಯ ಬಗ್ಗೆ ಗಮನವಿರಲಿ. ಶಕುಂತಲೆ ನಿನ್ನಲ್ಲಿ ಒಲವನ್ನು ಹೊಂದಿದ್ದಾಳೆ. ಅವಳನ್ನು ನಿನ್ನ ಹೆಂಡತಿಯರೊಂದಿಗೆ ಸಮಾನವಾಗಿ ಕಾಣುವುದು. ಉಳಿದುದೆಲ್ಲಾ ಅದೃಷ್ಟಕ್ಕೆ ಅಧೀನವಾದುದು, ಹೆಣ್ಣಿನ ಬಂಧುಗಳಾಗಿ ಇದಕ್ಕಿಂತ ಹೆಚ್ಚು ನುಡಿಯುವುದು ಯೋಗ್ಯವಲ್ಲ.

"ಪಿರಿಯರ ಸೇವೆಗೆಯ್ ಸವತಿಯರ್ಕಳೊಳಿಷ್ಟವಯಸ್ಯೆಯಂದದಿಂ
ದಿರು ಪತಿಯೊರ್ಮೆ ಹೇವಗೊಳಿಸಲ್ ಮುಳಿಸಂ ಪ್ರತಿಕೂಲೆಯಾಗದಿರ್
ಪರಿಜನವಂ ಕರಂ ಸಲಹು ಭಾಗ್ಯದೆ ಬಾಗಿರು ಪೆಣ್ಗಳಿಂತಿರಲ್
ಗರತಿಯರಪ್ಪ ರಿಂತಿರದರನ್ವಯಕಾಧಿಯನುಂಟುಮಾಳ್ಪರೌ (೪-೯೬)"[೨೪]

ಪತಿಗೃಹದಲ್ಲಿ ಹೇಗೆ ನಡೆದುಕೊಳ್ಳಬೇಕು ಎಂಬ ಬಗ್ಗೆ ಹೇಳಿದ ಬುದ್ಧಿವಾದವಿದು. ಹಿರಿಯರ ಸೇವೆ ಮಾಡು. ಸವತಿಯರೊಂದಿಗೆ ಸಮಾನ ವಯಸ್ಕಳಂತೆ ಪ್ರೀತಿಯಿಂದಿರು; ಒಮ್ಮೊಮ್ಮೆ ಪತಿ ಕೋಪಗೊಂಡು ತಿರಸ್ಕರಿಸಿದರೂ ವಿರೋಧಿಸಬೇಡ, ಪರಿಜನರನ್ನು ಪೋಷಿಸು. ಭಾಗ್ಯ ಬಂತೆಂದು ಅಹಂಕರಿಸದೆ ವಿನಯವನ್ನು ಪ್ರಕಟಿಸು. ಹೆಣ್ಣುಗಳು ಹೀಗಿದ್ದರೆ ಅವರು ಗರತಿಯರು ಎನಿಸುತ್ತಾರೆ. ಹೀಗಿರದವರು ವಂಶಕ್ಕೆ ಹೆಸರನ್ನು ತರುವುದಿಲ್ಲ.

ಅನುವಾದದ ಸಂದರ್ಭದಲ್ಲಿ ಮೂಲ ಪದ್ಯಕ್ಕೆ ಬಸವಪ್ಪಶಾಸ್ತ್ರಿಗಳು ಎಷ್ಟು ನಿಷ್ಠರಾಗಿದ್ದಾರೆ ಎಂಬುದಕ್ಕೆ ಈ ನಾಲ್ಕು ಪದ್ಯಗಳು ಉತ್ತಮ ಉದಾಹರಣೆಗಳಾಗಿವೆ. ಕಾಳಿದಾಸನ ಶಬ್ದಸಂಪತ್ತು

ಮತ್ತು ಅರ್ಥವಂತಿಕೆಗೆ ಸಮಾನವಾದ ರೀತಿಯಲ್ಲಿ ಪದಸಂಯೋಜನೆಯನ್ನು ಮಾಡಿ, ಭಾವಸಾಂದ್ರತೆಯುಳ್ಳ ವಾಕ್ಯಸರಣಿಯನ್ನು ರೂಪಿಸಿರುವ ಕ್ರಮ ಅನನ್ಯವಾದುದಾಗಿದೆ.

"ಉದಾಹರಣೆಗಳಲ್ಲಿ ಮೇಲೆ ಬರುವ ಕೊರಲಂ ಕೊಂಕುಗೈಯುತ್ತ, ಒಡನೈತರ್ಪ, ನೀಡುಂಬಿಟ್ಟಬಾಯಿಂ, ಮೆಲ್ದಿರ್ದ, ಹೇವಗೊಳಿಸಲ್, ಗರತಿಯರಪ್ಪರ್, ಪೆಣ್ಗಳಿಂತಿರಲ್ ಇತ್ಯಾದಿ ಅನೇಕ ಪದಸಮುಚ್ಚಯಗಳು ಹಳಗನ್ನಡ ಗತ್ತಿನ ಅಚ್ಚಗನ್ನಡ ಪದಗಳು. ಶ್ಲೋಕಗಳನ್ನು ಕಂದಗಳಾಗಿ ಪರಿವರ್ತಿಸುವಾಗ ಶಾಸ್ತ್ರಿಗಳ ಶೈಲಿ ಪಾರದರ್ಶಕ ಮತ್ತು ಅತ್ಯಂತ ಸರಳ(ಬಸವಪ್ಪಶಾಸ್ತ್ರಿಗಳು, ಬಿ.ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನ, ೧೯೯೪, ಪು.೩೮) ಎಂಬ ಗ್ರಹಿಕೆ ಸರಿಯೆನಿಸುತ್ತದೆ.

'ಅಭಿಜ್ಞಾನ ಶಾಕುಂತಲ'ದಲ್ಲಿ ಕಾಳಿದಾಸ ಪ್ರಕೃತಿಯನ್ನು ವ್ಯಕ್ತಿಜೀವನದ ಅವಿಭಾಜ್ಯ ಅಂಗವೆಂಬಂತೆ ವರ್ಣಿಸಿದ್ದಾನೆ. ಅದು ಜನರ ಅವಶ್ಯಕತೆಗಳನ್ನು ಮಾತ್ರ ಪೂರೈಸುತ್ತಿರಲಿಲ್ಲ. ಅವರ ಭಾವಪ್ರಪಂಚವನ್ನು ತುಂಬಿತ್ತು ಎಂಬ ತಿಳಿವನ್ನು ಕಾವ್ಯದಲ್ಲಿ ಮೂಡಿಸಿದ್ದಾನೆ. ಶಕುಂತಲೆಯ ಪ್ರಕೃತಿ ಪ್ರೇಮ ಮತ್ತು ಜೀವಸಂಕುಲದೊಂದಿಗೆ ಅವಳಿಗಿದ್ದ ನಿಕಟಸಂಬಂಧದಲ್ಲಿ ಈ ಅಂಶ ಸ್ಫುಟಗೊಂಡಿದೆ. ಆಕೆ ಎಲ್ಲರನ್ನೂ ತೊರೆಯುವ ಸಂದರ್ಭದಲ್ಲಿ ಹೀಗೆ ನುಡಿಯುತ್ತಾಳೆ. 'ಎಲೆ ಪ್ರಿಯಂವದೆ, ಪತಿಯನ್ನು ನೋಡುವ ಕುತೂಹಲ ನನಗೆ ಬಲವಾಗಿದ್ದಾಗ್ಯೂ ಆಶ್ರಮವನ್ನು ಬಿಟ್ಟುಹೋಗುವ ನನ್ನ ಕಾಲುಗಳು ಅತಿ ಕಷ್ಟದಿಂದ ಮುಂದಕ್ಕೆ ಸಾಗುವವು'(ಅಂಕ೪). 'ತಪೋವನವನ್ನು ಬಿಟ್ಟು ಹೋಗಲಾರದ ದುಃಖ'(ಅಂಕ೪) ಅವಳನ್ನು ಆವರಿಸಿದ್ದರೆ. ಅವಳ ವಿಯೋಗದಿಂದ ಅಲ್ಲಿನ ಅವಸ್ಥೆಯೇ ಬದಲಾಗಿದೆ.

"ಕುಣಿವುದನುಳಿದುವು ಶಿಖಿಗಳ್
ತೃಣಕಬಳಂ ಜಗುಳೆ ಬಾಯಿನರಿಯದು ಹರಿಣೀ
ಗುಣಮುದಿರ್ವೆಲೆಯಿಂ ರಮಣೀ
ಮಣಿ ಕಣ್ಣೀರ್ವಿಡುವ ತೆರದೆ ತೋರ್ಪುವುಲತೆಗಳ್ (೪-೯೦)"[೨೫]

ಶಕುಂತಲೆಯ ಅಗಲುವಿಕೆಯಿಂದ ನವಿಲುಗಳು ನರ್ತಿಸುವುದನ್ನು ಬಿಟ್ಟಿವೆ. ಜಿಂಕೆಗಳ ಬಾಯಿಯಿಂದ ಹುಲ್ಲು ಜಾರುತ್ತಿದೆ. ಲತೆಗಳು ಕಣ್ಣೀರಿಡುವಂತೆ ಉದುರುವ ಎಲೆಗಳು ಕಾಣುತ್ತಿವೆ. ತನ್ನ ಸೀರೆಯ ಸೆರಗನ್ನು ಹಿಡಿದು ಎಳೆಯುವ ಜಿಂಕೆಮರಿಯನ್ನು ಸಂತೈಸುತ್ತ ಶಕುಂತಲೆ ರೋದಿಸುತ್ತಾಳೆ. 'ಎಲೆ ವತ್ಸ, ಸಹವಾಸವನ್ನು ಬಿಟ್ಟು ಹೋಗುವ ನನ್ನನ್ನು ಏತಕ್ಕೆ ಅನುಸರಿಸುವೆ? ಹುಟ್ಟಿದ ಕೂಡಲೆ ತಾಯನಗಲಿದ ನಿನ್ನನ್ನು ಬೆಳೆಸಿದೆನು. ಈಗಲೂ ನನ್ನನ್ನು ಅಗಲಿದ ನಿನ್ನ ಪೋಷಣೆಯ ವಿಷಯದಲ್ಲಿ ತಂದೆಗಳು ಚಿಂತಿಸುವರು. ಇನ್ನು ಹಿಂದಿರುಗಿ ಹೋಗು'(ಅಂಕ೪). ಎಲ್ಲರಿಂದ ಬೀಳ್ಕೊಂಡು ಪತಿಗೃಹಕ್ಕೆ ಹೊರಟಾಗ ಆಕೆಗೆ ಸಖಿಯರು 'ಆ ರಾಜನು ನಿನ್ನನ್ನು ಮರೆತಿದ್ದುದೇ ಆದರೆ ಆಗ ಆತನಿಗೆ ಅವನ ನಾಮಾಂಕಿತವಾದ ಈ ಉಂಗುರವನ್ನು ತೋರಿಸು'(ಅಂಕ೪) ಎಂದು ಸಲಹೆ ನೀಡುತ್ತಾರೆ. ದೂರ್ವಾಸನ ಶಾಪದ ವಿಷಯ ತಿಳಿದಿರುವುದು ಅನಸೂಯ-ಪ್ರಿಯಂವದೆಗೆ ಮಾತ್ರ. ಆದ್ದರಿಂದ ಅವರಿಗೆ ದುಷ್ಯಂತನ ಬಗ್ಗೆ ಸ್ವಲ್ಪಮಟ್ಟಿನ ಸಂದೇಹವಿದೆ.

ಶಕುಂತಲೆಯ ಜೊತೆ ಅರಮನೆಗೆ ಬಂದ ಶಾಙ್ಗ್ರರವ, ಶಾರದ್ವತರು ಕಣ್ವರ ಸಂದೇಶವನ್ನು ತಿಳಿಸುತ್ತಾರೆ. ದೂರ್ವಾಸನ ಶಾಪದಿಂದ ದುಷ್ಯಂತನಿಗೆ ಹಿಂದೆ ನಡೆದ ಘಟನೆಗಳೆಲ್ಲಾ ಮರುತುಹೋಗಿವೆ; ಶಕುಂತಲೆಯ ನೆನಪಿಲ್ಲ. ಆಕೆಯನ್ನು ತನ್ನ ಮಡದಿಯೆಂದು ಒಪ್ಪುವುದಿಲ್ಲ; ತಿರಸ್ಕರಿಸುತ್ತಾನೆ. 'ಎಷ್ಟು ಯೋಚಿಸಿದರೂ ಆಕೆಯನ್ನು ಸ್ವೀಕರಿಸಿದ ಸ್ಮರಣೆ ನನಗೆ ಬರುವುದಿಲ್ಲ. ಗರ್ಭಚಿಹ್ನೆಯುಳ್ಳ ಈಕೆಯನ್ನು ನನ್ನ ಪತ್ನಿಯೆಂದು ಹೇಗೆ ತಾನೆ ಪರಿಗ್ರಹಿಸಲಿ?'(ಅಂಕ೫) ಕಣ್ವರ ಶಿಷ್ಯರು ಮತ್ತು ರಾಜನ ನಡುವೆ ಈ ಸಂಬಂಧವಾದ ವಾಗ್ವಾದ ನಡೆಯುತ್ತದೆ. ಕೊನೆಗೆ, ನಿಜಸ್ಥಿತಿಯ ಅರಿವು ಮಾಡಿಕೊಡಲು ಶಕುಂತಲೆ ಮುಂದಾದಾಗ ಆಕೆಯ ಕೈಯಲ್ಲಿದ್ದ ಉಂಗುರ ಕಳೆದುಹೋಗಿರುತ್ತದೆ. ಅವಳ ಮಾತಿನಲ್ಲಿ ದುಷ್ಯಂತನಿಗೆ ನಂಬಿಕೆ ಮೂಡುವುದಿಲ್ಲ, ಆದರೂ ವ್ಯಾಕುಲಕ್ಕೆ ಒಳಗಾಗುತ್ತಾನೆ. ಉತ್ತರ ಪ್ರತ್ಯುತ್ತರಗಳಿಂದ, ಪ್ರಯೋಜನವಿಲ್ಲವೆಂದು ಭಾವಿಸಿ ಶಾರ್ಙ್ಗರವ, ಶಾರದ್ವತ ಹೊರಟುಹೋಗುವರು. ಅನಂತರ ದುಷ್ಯಂತ ಪುರೋಹಿತರ ಸಲಹೆಯನ್ನು ಕೇಳುತ್ತಾನೆ, ಅವರು ಹೀಗೆ ನುಡಿಯುತ್ತಾರೆ. "ಪೂಜ್ಯೆಯಾದ ಈಕೆಯು ಹೆರುವವರೆಗೂ ನನ್ನ ಮನೆಯಲ್ಲಿ ಇರಲಿ, ಹೀಗೇತಕ್ಕೆ ಹೇಳುವಿರೆಂದರೆ, ಮೊದಲಲ್ಲಿ ಚಕ್ರವರ್ತಿ ಲಕ್ಷಣವುಳ್ಳ ಪುತ್ರನು ಉದಿಸುವನೆಂದು ಋಷಿಗಳು ಹೇಳಿಯೇ ಇರುವರು. ಹಾಗೆ ಈ ಮುನಿಪುತ್ರಿಯಲ್ಲಿ ಹುಟ್ಟುವ ಮಗನು ಚಕ್ರವರ್ತಿ ಲಕ್ಷಣದಿಂದ ಕೂಡಿರುವನಾದರೆ ಆಮೇಲೆ ಅಭಿನಂದಿಸಿ ಈಕೆಯನ್ನು ನಿನ್ನ ರಾಣಿವಾಸಕ್ಕೆ ಸೇರಿಸು, ಹಾಗೆ ಆಗದೆ ಇರುವ ಪಕ್ಷಕ್ಕೆ ಈಕೆಯನ್ನು ತಂದೆಯ ಬಳಿಗೆ ಕಳುಹಿಸುವುದು ಸಿದ್ಧವಾಗಿರುವುದು'(ಅಂಕ೫). ಅದಕ್ಕೆ ರಾಜನು ಸಮ್ಮತಿಸುವನು. ಶಕುಂತಲೆ ತನಗೊದಗಿದ ದುರವಸ್ಥೆಗಾಗಿ ಅಳುತ್ತಿರುವಾಗ ಹೆಣ್ಣುರೂಪದ ಬೆಳಕೊಂದು ಬಂದು ಆಕೆಯನ್ನು ಎಳೆದೊಯ್ಯುತ್ತದೆ, ದುಷ್ಯಂತನೂ ಕಳವಳಕ್ಕೆ ಒಳಗಾಗುತ್ತಾನೆ.

ಉಂಗುರ ಪ್ರಸಂಗ ಇಡೀ ನಾಟಕದ ಜೀವಾಳ. ಅದನ್ನು ನೋಡುವವರೆಗೂ ದುಷ್ಯಂತನಿಗೆ ಶಕುಂತಲೆಯ ನೆನಪು ಬರುವುದಿಲ್ಲ. ಕೊನೆಗಳಿಗೆಯಲ್ಲಿ ಬೆಸ್ತನೊಬ್ಬನಿಂದ ಉಂಗುರ ರಾಜನ ಕೈ ಸೇರುತ್ತದೆ. ಅದನ್ನು ನೋಡಿದ ದುಷ್ಯಂತನಲ್ಲಿ ಹಳೆಯ ನೆನಪುಗಳು ಮರುಕಳಿಸುತ್ತವೆ. ಶಕುಂತಲೆಯನ್ನು ನಾನಾಗಿಯೇ ದೂರ ಮಾಡಿದೆನು ಎಂದು ದುಃಖಿಸುತ್ತಾನೆ. ಉಂಗುರದ ಮೂಲಕ ಆತನ ಮನಃಪರಿವರ್ತನೆಯಾಗುತ್ತದೆ, ಪಶ್ಚಾತ್ತಾಪಕ್ಕೆ ಒಳಗಾಗುತ್ತಾನೆ.

"ಕನಸಿನೊಳವಳಂ ಕೂಡುವೆ
ನೆನೆ ಬಾರದು ನಿದ್ರೆ ಚಿತ್ರಗತೆಯಾದಳುಮಂ।
ಮನವಾರೆ ನೋಳ್ಪೆನೆನೆ ಕಂ
ಬನಿಯೆಡೆಗುಡದಿರ್ಪುದಿನ್ನದೇಗೈದಪೆನಾಂ (೬-೧೫೩)"[೨೬]

ಅವಳನ್ನು ಕನಸಿನಲ್ಲಿ ಕೂಡಬೇಕೆಂದರೆ ನಿದ್ರೆ ಬರುವುದಿಲ್ಲ. ಚಿತ್ರದಲ್ಲಿರುವ ಅವಳನ್ನು ಮನಸಾರೆ ನೋಡಬೇಕೆಂದರೆ ಕಂಬನಿ ಅವಕಾಶ ನೀಡುವುದಿಲ್ಲ ಎಂದು ವಿದೂಷಕನಲ್ಲಿ ತನ್ನ ಅಳಲನ್ನು ತೋಡಿಕೊಳ್ಳುತ್ತಾನೆ.

ದುಷ್ಯಂತ ಇಂದ್ರನ ಆಹ್ವಾನದ ಮೇರೆಗೆ ಸ್ವರ್ಗಕ್ಕೆ ಹೋಗಿಬರುವಾಗ ಮಾರೀಚಮುನಿಗಳ ಆಶ್ರಮದಲ್ಲಿ ಉಳಿಯುವನು. ಅಲ್ಲಿ ಸಿಂಹದ ಮರಿಯೊಂದಿಗೆ ಆಡುತ್ತಿದ್ದ ಬಾಲಕನೊಬ್ಬನನ್ನು ಕಂಡು, ಆತ ತನ್ನ ಮಗನೆಂಬುದನ್ನು ತಿಳಿಯುತ್ತಾನೆ. ತಾಪಸಿಯರಿಂದ ವಿಷಯ ತಿಳಿದ ಶಕುಂತಲೆ ಅಲ್ಲಿಗೆ ಬರುತ್ತಾಳೆ, ಇಬ್ಬರ ಪುನರ್ ಸಮಾಗಮವಾಗುತ್ತದೆ:

"ರಾಹು ತೊರೆದೊಡನೆ ಶಶಿಯಂ
ರೋಹಿಣಿ ಬಳಿವೊರ್ದಿದಂತೆ ನೆನಪಿಂದಿರದಾ।
ಮೋಹತಮಮಳಿಯೆ ಸುಕೃತದೆ
ನೀಹಾರಕರಾಸ್ಯೆ ಸೇರ್ದೆಯೆನ್ನಯ ಬಳಿಯಂ (೭-೧೮೫)"[೨೭]

ಗ್ರಹಣ ಮುಗಿದೊಡನೆ ರೋಹಿಣಿಯು ಚಂದ್ರನ ಬಳಿಗೆ ಹೋಗುವಂತೆ, ನೆನಪಿನಿಂದ ಈಗ ಮೋಹವೆಂಬ ಕತ್ತಲೆ ಜಾರಿ, ಸುದೈವದಿಂದ ನೀನು ನನ್ನನ್ನು ಸೇರಿರುವೆ ಎಂದು ಪರಿತಪಿಸಿ, ಅವಳೆದುರು ಬಾಗಿ ನಿಂತು 'ಮತ್ಸರಿಸದಿರು" ಎಂದು ಕೇಳಿಕೊಳ್ಳುತ್ತಾನೆ. ಬಳಿಕ ಮಾರೀಚರ ದರ್ಶನ ಮಾಡಿದ ದುಷ್ಯಂತ ಪೂರ್ವವೃತ್ತಾಂತವನ್ನು ತಿಳಿಸುತ್ತಾನೆ: 'ಎಲೈ ಪೂಜ್ಯರೆ, ನಿಮ್ಮ ಆಜ್ಞಾಧಾರಿಣಿ ಯಾದ ಈಕೆಯನ್ನು ಗಾಂಧರ್ವ ವಿವಾಹದಿಂದ ಮದುವೆಯಾದೆನು. ಕೆಲವು ಕಾಲದ ಮೇಲೆ ಬಂಧುಗಳು ನನ್ನ ಸನ್ನಿಧಿಗೆ ಕರೆದುಕೊಂಡು ಬಂದಾಗ ಈಕೆಯನ್ನು ಮರೆವೆಯಿಂದ ತಿರಸ್ಕರಿಸಿ, ತಮಗೆ ಸಗೋತ್ರರಾದ ಕಣ್ವರಿಗೆ ಅಪರಾಧವನ್ನು ಮಾಡಿದೆನು. ಉಂಗುರವನ್ನು ಕಂಡಮೇಲೆ ಈಕೆಯನ್ನು ಪೂರ್ವದಲ್ಲಿ ನಾನು ಮದುವೆಯಾಗಿದ್ದೆನೆಂದರಿತೆನು. ಆದುದರಿಂದ ಇದು ನನಗೆ ಆಶ್ಚರ್ಯವಾಗಿ ಕಾಣುವುದು'(ಅಂಕ೭). ಕೊನೆಗೆ, ಮಾರೀಚರು 'ಪುತ್ರವತಿಯಾದ ಶಕುಂತಲೆಯನ್ನು ಶಾಪ ವಿಮೋಚನೆಯಿಂದ ಸ್ಮರಣೆಯನ್ನು ಹೊಂದಿದ ದುಷ್ಯಂತನು ಪರಿಗ್ರಹಿಸಿದನು'(ಅಂಕ೭) ಎಂಬ ವಿಷಯವನ್ನು ಕಣ್ವರಿಗೆ ತಿಳಿಸಲು ಶಿಷ್ಯನಾದ ಗಾಲವನನ್ನು ನಿಯೋಜಿಸಿ, ಪತ್ನೀ ಪುತ್ರ ಸಮೇತನಾಗಿ ರಾಜಧಾನಿಗೆ ತೆರಳುವಂತೆ ದುಷ್ಯಂತನಿಗೆ ಆಜ್ಞಾಪಿಸುತ್ತಾನೆ. ದುಷ್ಯಂತ–ಶಕುಂತಲೆಯರಲ್ಲಿ ಪ್ರೇಮಾಕಾಂಕ್ಷೆ ಉದ್ದೀಪನಗೊಂಡು, ಅಗಲಿಕೆ ಮತ್ತು ಯಾತನೆಯಿಂದ ಪಕ್ವಗೊಂಡ ಮನಸ್ಸುಗಳು ಸಮಾಗಮಗೊಳ್ಳುವ ಕ್ರಮದಲ್ಲಿ ಕಾಳಿದಾಸನ ಅದ್ವಿತೀಯ ಕಥನ ಕೌಶಲವಿದೆ. "ಕಾಳಿದಾಸನು ಅವರ ಪ್ರೇಮದ ಬೇರನ್ನು ಭದ್ರಪಡಿಸಿದ್ದಾನೆ. ಪತಿಯ ಸಮಾಗಮದಿಂದ ಶಕುಂತಲೆ ಇಂದು ನಿಜವಾದ ಸುಖಿ. ಅವಳ ಕಂಬನಿಯನ್ನು ಒರೆಸಿ ದುಷ್ಯಂತನು ಅವಳ ಸರ್ವಕ್ಲೇಶಗಳನ್ನು ಒರೆಸಿದ್ದಾನೆ. ದುಷ್ಯಂತ ಶಕುಂತಲೆಯರಿಬ್ಬರ ದೃಷ್ಟಿಯಿಂದಲೂ ನಾಟಕದ ಸಮಾಪ್ತಿಯು ಮಂಗಳಕರವಾಗಿರುವುದು ಉಚಿತವಾಗಿದೆ"(ಶ್ರೀಕಂಠಯ್ಯ ತೀ.ನಂ., ಆಯ್ದ ವಿಮರ್ಶಾ ಲೇಖನಗಳು, ೨೦೦೦, ಪು.೩೩).

ಕಾಳಿದಾಸನ 'ಅಭಿಜ್ಞಾನ ಶಾಕುಂತಲ' ಲೋಕಪ್ರಸಿದ್ಧ ಕೃತಿ. ಇಲ್ಲಿ ಆತ ಮಹಾಭಾರತದ 'ಶಕುಂತಲೋಪಾಖ್ಯಾನ'ದಲ್ಲಿನ ಮಿತಿಗಳನ್ನು ಗುರುತಿಸಿ, ವಸ್ತುವಿಸ್ತಾರ, ಪಾತ್ರಕಲ್ಪನೆ, ಸನ್ನಿವೇಶ ನಿರ್ಮಾಣಕ್ಕೆ

ಸಂಬಂಧಿಸಿದಂತೆ ಅನೇಕ ಮಾರ್ಪಾಟುಗಳನ್ನು ಮಾಡಿದ್ದಾನೆ. ಅನಸೂಯ, ಪ್ರಿಯಂವದೆ, ದೂರ್ವಾಸ, ಶಾರ್ಙ್ಗರವ, ಶಾರದ್ವತ, ಮೀನುಗಾರ, ಪುರೋಹಿತ ಮೊದಲಾದ ಪಾತ್ರಗಳು ಹಾಗೂ ಶಕುಂತಲೆಯ ಅಗಲಿಕೆ, ದೂರ್ವಾಸನ ಶಾಪ, ಅಭಿಜ್ಞಾನ ಮುಂತಾದ ಪ್ರಸಂಗಗಳ ಮೂಲಕ ಕಥಾವಸ್ತುವನ್ನು ಅರ್ಥಪೂರ್ಣವಾಗಿ ವಿಸ್ತರಿಸಿದ್ದಾನೆ. ಇಂಥ ಸಮಗ್ರ ಕಾವ್ಯಶಿಲ್ಪವುಳ್ಳ ಈ ನಾಟಕವನ್ನು ಬಸವಪ್ಪಶಾಸ್ತ್ರಿಗಳು ಅತ್ಯಂತ ಎಚ್ಚರಿಕೆಯಿಂದ ಭಾಷಾಂತರಿಸಿದ್ದಾರೆ. ಕಾಳಿದಾಸನ ಕೃತಿಯನ್ನು ಅನುವಾದ ಮಾಡುವುದು ಅಷ್ಟು ಸುಲಭವಲ್ಲ. ಅವನ 'ಅಭಿಜ್ಞಾನ ಶಾಕುಂತಲ'ವನ್ನು ಯಥಾವತ್ತಾಗಿ, ಮೂಲದ ಆಶಯವನ್ನು ಅತಿಕ್ರಮಿಸದೆ ಕನ್ನಡಕ್ಕೆ ತಂದ ಶ್ರೇಯಸ್ಸು ಶಾಸ್ತ್ರಿಗಳಿಗೆ ಸಲ್ಲುತ್ತದೆ. ಭಾಷಾಂತರದಲ್ಲಿಯ ಅವರ ಕವಿಪ್ರತಿಭೆಯೂ ಮೇಲ್ಮಟ್ಟದ್ದಾಗಿದೆ; ಅಲ್ಲಿ ಅರ್ಥಸ್ಪಷ್ಟತೆ, ಭಾಷಾಪ್ರೌಢಿಮೆಗಳು ಎದ್ದು ಕಾಣುತ್ತವೆ. "ಮೂಲ ಸಂಸ್ಕೃತ ಪದಗಳಿಗೆ ಕನ್ನಡ ಪದಗಳನ್ನು ಜೋಡಿಸುವಾಗ ಅವರು ತೋರಿಸಿರುವ ಜಾಣ್ಮೆ ಅನ್ಯಾದೃಶ್ಯವಾಗಿದೆ. 'ಕೊರಲಂತಾಂಕೊಂಕುಗೈಯ್ಯುತ್ತೆ', 'ನೆಟ್ಟರೆ ನೋಟಂ', 'ಇರುಕಿಸುತಂ', 'ಬಿಟ್ಟಬಾಯಂ', 'ಬಾನೊಳೇ ಪಾರಿಪೋಕುಂ', 'ಮುನಿಸು', 'ಉಮ್ಮಳವಾಂಪಳ್', 'ನಡೆಮಿಡುಕದ' ಮುಂತಾದ ಪದಗಳು ಭಾವಗರ್ಭಿತವಾದ ಮತ್ತು ಮೂಲಕ್ಕೆ ತಕ್ಕ ಪರಿಪಕ್ವ ಪದಗಳು. ಭಾಷಾಂತರ ಕಲೆಯಲ್ಲಿ ಶಾಸ್ತ್ರಿಗಳು ಸಿದ್ಧಹಸ್ತರು. ಆ ಸಿದ್ಧಿ ಶಾಕುಂತಲದಲ್ಲಿ ಅಮರವಾಗಿದೆ"(ನಂಜುಂಡಾರಾಧ್ಯ ಎಂ.ಜಿ., ಅಭಿನವ ಕಾಳಿದಾಸ ಬಸವಪ್ಪಶಾಸ್ತ್ರಿ, ೧೯೪೫, ಪು.೧೦೮) ಎಂಬ ಅಭಿಪ್ರಾಯ ನಿಜವೆನಿಸುತ್ತದೆ.

ಕಾಳಿದಾಸನ ಶಾಕುಂತಲ ಕನ್ನಡಕ್ಕೆ ಅನುವಾದಗೊಂಡ ಸಂದರ್ಭವೇ ಸಾಂಸ್ಕೃತಿಕ ದೃಷ್ಟಿಯಿಂದ ವಿಶಿಷ್ಟವಾದುದಾಗಿದೆ. ಕರ್ನಾಟಕದಾದ್ಯಂತ ಜನರಲ್ಲಿ ಸದಭಿರುಚಿಯನ್ನು ಉಂಟುಮಾಡುವ ನಾಟಕಗಳಾಗಲಿ, ಅವುಗಳನ್ನು ಪ್ರೋತ್ಸಾಹಿಸುವ ಸಂಘಸಂಸ್ಥೆಗಳಾಗಲಿ ಇರಲಿಲ್ಲ. ಅನುವಾದ, ಸ್ವತಂತ್ರ ನಾಟಕಗಳಿಗಾಗಿ ಹತ್ತೊಂಬತ್ತನೆಯ ಶತಮಾನದ ಕೊನೆಯ ಭಾಗದವರೆಗೆ ಕಾಯಬೇಕಾಯಿತು. ಚುರಮುರಿ ಶೇಷಗಿರಿರಾಯರು ಶಾಕುಂತಲವನ್ನು ೧೮೭೦ರ ಸುಮಾರಿನಲ್ಲಿ ಅನುವಾದಿಸಿದರು. ಈ ಕೃತಿ ಪ್ರಕಟಗೊಂಡ ಹದಿಮೂರು ವರ್ಷಗಳ ಅನಂತರ ಬಸವಪ್ಪಶಾಸ್ತ್ರಿಗಳು ಶಾಕುಂತಲವನ್ನು ಭಾಷಾಂತರಿಸಿದರು. ಅದು ೧೮೮೧ರಲ್ಲಿ ಅರಮನೆಯ ನಾಟ್ಯ ಸಿಬ್ಬಂದಿಯವರಿಂದ ಪ್ರದರ್ಶನಗೊಂಡಿತು. ಬಸವಪ್ಪಶಾಸ್ತ್ರಿಗಳ ವಿದ್ವತ್ಪೂರ್ಣ ಅನುವಾದಕ್ಕೂ, ಚುರಮುರಿಯವರ ಗ್ರಾಮ್ಯರೂಪಿ ಅನುವಾದಕ್ಕೂ ಸಾಕಷ್ಟು ಅಂತರವಿದೆ. ಶಾಸ್ತ್ರಿಗಳ ದೃಷ್ಟಿ ಮೂಲಕೃತಿಯ ಸಾಹಿತ್ಯಾಂಶಗಳ ಕಡೆಗಿದ್ದರೆ, ಚುರಮುರಿಯವರದ್ದು ರಂಗಪ್ರಯೋಗದ ಕಡೆಗೆ ಹೆಚ್ಚಿದೆ. ಆದರೂ, ಬಸವಪ್ಪಶಾಸ್ತ್ರಿಗಳು ಮುಖ್ಯ ಪದ್ಯಗಳನ್ನು ರಂಗಪ್ರಯೋಗದ ಅನುಕೂಲಕ್ಕಾಗಿ ಹಾಡಿನ ರೂಪಕ್ಕೂ ಪರಿವರ್ತಿಸಿದ್ದಾರೆ. ಅವುಗಳಲ್ಲಿ ಕೆಲವು ಓದುಗರ ಮನಸ್ಸಿನಲ್ಲಿ ಉಳಿಯುತ್ತವೆ. ಪ್ರೇಕ್ಷಕರ ಆಸಕ್ತಿಯನ್ನು ಕಾಯ್ದಿರಿಸುವ, ಕುತೂಹಲವನ್ನು ಮೂಡಿಸುವ ಲಲಿತ ಶೈಲಿಯಿದೆ:

ಪದ್ಯ: ಒಂದು

ರಾಗ: ಸುರಟಿ ರೂಪಕತಾಳ

ರಾಜಂ–ನಾಗವೇಣಿ ನಗರಿಗೆ ನಾಂ ಪೋಗಿ ಬರುವೆನೆ ॥ಪ॥
ಅರಸುತನದ ಕಾರ್ಯವೆನ್ನ। ತ್ವರಿತ ಗೊಳಿಪುದು।
ಹರುಷದಿಂದ ಕಳುಹಿಸು ನೀಂ ಮರುಗಲಾಗದು ॥೧॥
ಶಕುಂ–ತಡೆಯಲಾರೆ ನಿನ್ನ ನಾಂ। ಬಿಡಲು ಮಾರೆನು।
ಪೊಡೆವಿಯೊಡೆಯ ಪೋಪರೆ ಸಂ। ಗಡಲೆ ಬರುವೆನು।
ರಾಜಂ–ಅರಸಿ ನಿನ್ನನಗಲಿ ನಿಮಿಷ। ವಿರಲು ಬಲ್ಲನೆ।
ಕರೆಸಿಕೊಂಬೆ ಬೇಗನೆ ನಾಂ। ಸರಸಿ ಜಾನನೆ ॥೩॥
ಶಕುಂ–ಇಂತು ಪೇಳಿ ಪೋಗಿ ಸೇರ। ಲಂತಪುರವನು।
ಅಂತರಂಗವೆಂತಹದೊ। ಕಾಂತ ಕಾಣೆನು ॥೪॥
ರಾಜಂ–॥ ಅನುದಿನವೊಂದೊಂದಾಗಲೆ। ವನತಾಮಣಿಯೆಣಿಪುದೆನ್ನ ನಾಮಾಕ್ಷರಮಂ।
ಕೊನೆಮುಟ್ಟುವನಿತರೊಳ್ ನಿ। ನ್ನನು ಕರೆಯಿಪೆನೆನ್ನ ರಾಣಿವಾಸಕೆ ನಿಜದಿಂ॥ (ಅಂಕ೩)

ಪದ್ಯ: ಎರಡು

ರಾಗ: ದೇಶಿಕಾಪಿ ಆದಿತಾಳ

ಪೋಗಬೇಡವೆ ಸಖಿ ನೀಂ ಪೋಗಬೇಡವೆ ॥ಪಲ್ಲವಿ॥
ಆರ್ಯನು ಬರೆ ಪರಿ। ಚರ್ಯವ ಮಾಡದೆ
ಕಾರ್ಯವಾವುದನಿ। ವಾರ್ಯವೆಮಗೆ ಸಖಿ। ಪೋಗ ॥೧॥
ಅತಿಥಿವಿಶೇಷವ। ಪತಿಕರಿಸದ ಬಗೆ।
ಮತವೇನಾಶ್ರಮ। ಗತರಿಗೆ ಸಖಿ ನೀಂ। ಪೋಗ ॥೨॥
ಸಮ್ಮವಲ್ಲಿದು। ನಮ್ಮನುಳಿದು ನೀಂ।
ಸುಮ್ಮನೆ ಪೋಗದಿ। ರಮ್ಮ ಶಕುಂತಲೆ। ಪೋಗ ॥೩॥ (ಅಂಕ೧)

ಪದ್ಯ: ಮೂರು

ಶಕುಂತಲೆಯನ್ನು ನಿಷ್ಕಾರಣವಾಗಿ ತಿರಸ್ಕರಿಸಿದ ದುಷ್ಯಂತನು ಉಂಗುರವನ್ನು ನೋಡಿ ತನ್ನ ವ್ಯಥೆಯನ್ನು ವಿದೂಷಕನಲ್ಲಿ ಹೇಳಿಕೊಳ್ಳುತ್ತಾನೆ:

ರಾಗ: ಬೈರವಿ ರೂಪಕತಾಳ

ಎಂತು ಮರೆಯುವೆನು। ಕಾಂತೆಯನು ನಾ। ನೆಂತು ಮರೆಯುವೆನು ॥ಪ॥
ಅಂತಾಕೆ ದುಃಖವ। ನಾಂತು ಪೋದನುವ ನಾ। ನೆಂತು ಮರೆಯುವೆನು ॥ಅ॥

ಧಿಕ್ಕರಿಸಿದೊಡೆ। ಋಷಿ ಶಿಷ್ಯನ। ಪಕ್ಕವ ಸೇರೆ।
ಅವ ಹುಬ್ಬ ಗಂ। ಟಿಕ್ಕುತ ಗಜರೆ। ಮನದಲ್ಲಿ ತಾಂ।
ದುಕ್ಕಿಸುತರರೆ। ಅಕ್ಕಟ ಕಣ್ಣನೀ ರ್ಮುಕ್ಕುಳಿಸುತಲೆನ್ನ। ದಿಕ್ಕಿಲದವಳಂತೆ।
ದಿಟ್ಟಿಸಿದುದನು ನಾ। ನೆಂತು ಮರೆಯುವೆನು ॥೧॥"[೨೮] (ಅಂಕ೬)

ಕನ್ನಡದಲ್ಲಿ ಇದುವರೆಗೆ ಬಂದಿರುವ 'ಅಭಿಜ್ಞಾನ ಶಾಕುಂತಲ'ದ ರೂಪಾಂತರ, ಅನುವಾದಗಳಲ್ಲಿ ಬಸವಪ್ಪಶಾಸ್ತ್ರಿಗಳ ಕರ್ಣಾಟಕ ಶಾಕುಂತಲಕ್ಕೆ ಮೊದಲ ಆದ್ಯತೆಯನ್ನು ನೀಡಲಾಗಿದೆ. "ಸ್ವತಃ ಕವಿಗಳಾಗಿದ್ದರಿಂದ ಮಾತ್ರ ಇಷ್ಟು ಉತ್ತಮ ಮಾದರಿಯ ಭಾಷಾಂತರವು ಬಸವಪ್ಪಶಾಸ್ತ್ರಿಗಳಿಂದ ಸಾಧ್ಯವಾಯಿತೆಂದು ಹೇಳಬಹುದು"(ಮರುಳಸಿದ್ಧಪ್ಪ ಕೆ., ಆಧುನಿಕ ಕನ್ನಡ ನಾಟಕ, ೧೯೮೩, ಪು.೯೦). ಆ ಮೂಲಕ ಕನ್ನಡ ರಂಗಭೂಮಿಯ ಬೆಳವಣಿಗೆಯಾಯಿತು, ಸ್ವತಂತ್ರ ನಾಟಕಗಳ ರಚನೆಗೆ ಪ್ರೇರಣೆ ದೊರೆಯಿತು. "ಬಸವಪ್ಪಶಾಸ್ತ್ರಿಗಳು ಕಾಳಿದಾಸನನ್ನು ಅವನ ಎಲ್ಲ ಕಾವ್ಯ ಸೂಕ್ಷ್ಮತೆಗಳೊಂದಿಗೆ ಗ್ರಹಿಸಿದರು. ಕಾಳಿದಾಸನ ಎತ್ತರಕ್ಕೇರಿ ಅವನ ನಾಟಕದ ಅಂತಃಸತ್ವವನ್ನು ಅರ್ಥ ಮಾಡಿಕೊಂಡಿದ್ದ ಕಾರಣವೇ, ತಮ್ಮತನ, ತಮ್ಮ ವ್ಯಕ್ತಿತ್ವವನ್ನು ವಿಜೃಂಭಿಸದೆ 'ಅಭಿಜ್ಞಾನ ಶಾಕುಂತಲ'ದ ಅರ್ಥಸೌಂದರ್ಯ, ಭಾವಸೌಂದರ್ಯಗಳಿಗೆ ಭಂಗ ಬಾರದಂತೆ, ಅದರ ಲೋಕೋತ್ತರತೆಯನ್ನು ಅದಕ್ಕೆ ಉಳಿಸಿಯೇ ಕನ್ನಡಕ್ಕೆ ನೀಡಿದರು"(ಬಸವಪ್ಪಶಾಸ್ತ್ರಿಗಳು, ಬಿ.ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನ, ೧೯೯೪, ಪು.೩೬) ಎಂಬ ನಿಲುವು ಸಮಂಜಸವಾದುದಾಗಿದೆ. ಈ ಎಲ್ಲಾ ಪರಿಭಾವನೆಯ ಹಿನ್ನೆಲೆಯಲ್ಲಿ ಬಸವಪ್ಪಶಾಸ್ತ್ರಿಗಳಿಗೆ 'ಅಭಿನವ ಕಾಳಿದಾಸ' ಎಂಬ ಪ್ರಶಸ್ತಿ ಯುಕ್ತವಾದುದಾಗಿದೆ.

ಬಸವಪ್ಪಶಾಸ್ತ್ರಿಗಳು(೧೮೪೩-೯೧) ಕನ್ನಡ ಸಂಸ್ಕೃತ ಎರಡೂ ಭಾಷೆಗಳಲ್ಲಿ ಪಾಂಡಿತ್ಯವಿದ್ದ ಪ್ರತಿಭಾನ್ವಿತರು. ಮೈಸೂರು ಅರಮನೆಯಲ್ಲಿ ವಿದ್ವಾಂಸರೂ ರಾಜಪುರೋಹಿತರೂ ಆದ ಇವರು ೧೮೮೨ರಲ್ಲಿ ಸ್ಥಾಪಿತವಾದ ರಂಗಭೂಮಿಗೆ ಅಮೂಲ್ಯ ಸೇವೆ ಸಲ್ಲಿಸಿದ್ದಾರೆ. ಮುಖ್ಯವಾಗಿ ಕಾಳಿದಾಸನ 'ಅಭಿಜ್ಞಾನ ಶಾಕುಂತಲ'ದ ಕನ್ನಡ ರೂಪ "ಕರ್ಣಾಟಕ ಶಾಕುಂತಲ ನಾಟಕಂ" ಅನುವಾದಿಸಿದ್ದಾರೆ. ಇದು ಕನ್ನಡ ಭಾಷಾಂತರ ಸಾಹಿತ್ಯದಲ್ಲಿ ಒಂದು ಉತ್ತಮ ಭಾಷಾಂತರವೆಂದು ಪ್ರಸಿದ್ಧಿ ಪಡೆದಿದೆ. ಈ ಕೃತಿಯನ್ನು ಮೆಚ್ಚಿ ಅಂದಿನ ಮೈಸೂರು ಸಂಸ್ಥಾನದ ದಿವಾನರಾದ ದಿವಾನ್ ರಂಗಾಚಾರ್ಯರು ಶಾಸ್ತ್ರಿಗಳಿಗೆ 'ಅಭಿನವ ಕಾಳಿದಾಸ'ನೆಂಬ ಬಿರುದು ನೀಡಿ ಸನ್ಮಾನಿಸಿದರು. ಶ್ರೀ ಚಾಮರಾಜೇಂದ್ರ ಕರ್ಣಾಟಕ ನಾಟಕ ಸಭಾ" ಸಂಸ್ಥೆ ಪ್ರಾರಂಭವಾಗಿ ಕನ್ನಡದಲ್ಲಿ ನಾಟಕ ರಚನೆ ಮಾಡಬೇಕಾದಾಗ ಆಸ್ಥಾನ ವಿದ್ವಾಂಸರಾದ ಬಸವಪ್ಪಶಾಸ್ತ್ರಿಗಳಿಗೆ ಕಾಳಿದಾಸನ ಶಾಕುಂತಲವನ್ನು ಅನುವಾದಿಸಲು ಶ್ರೀ ಮನ್ಮಹಾರಾಜ ಪ್ರೇರೇಪಿಸಿದಾಗ 'ನುತಗುಣರಾಯ ಚಾಮಕ್ಷಿತಿಪತಿ' ಸನ್ನಿಧಿ ಸಚಿವರಾಜ 'ನೃಸಿಂಹಾರ್ಯೋತ್ಸಾಹಿ'ರಾಗಿ ಶಾಸ್ತ್ರಿಗಳು ಶಾಕುಂತಲದ ಭಾಷಾಂತರಕ್ಕೆ ತೊಡಗಿದರು. ಭಾಷಾಂತರವೇ ಕಷ್ಟ. ಅದರಲ್ಲೂ ಕಾಳಿದಾಸನಂತಹ ಮಹಾನ್ ಕವಿಯ ಕೃತಿಯನ್ನು ಅನುವಾದಿಸುವುದು ಅಷ್ಟು ಸುಲಭ ಕ್ರಿಯೆಯಲ್ಲ. ಆದರೂ ಬಸವಪ್ಪ ಶಾಸ್ತ್ರಿಗಳು ಅನುವಾದಿಸಿದರು. ಸ್ವತಃ ವಿದ್ವದ್‌ಗೋಷ್ಠಿಯಲ್ಲಿ

ಆ ಕಾಲದ ಪ್ರತಿಷ್ಠಿತರು ಉಪಸ್ಥಿತರಿದ್ದರು ತರ್ಕ ತೀರ್ಥಾಚಾರ್ಯ ಪಂಡಿತ ರತ್ನಂ ಕಸ್ತೂರಿ ರಂಗಾಚಾರ್ಯ, ಪಂಡಿತರತ್ನಂ ಸೀತಾರಾಮಶಾಸ್ತ್ರಿ, ಕುಂಭಕೋಣಂ ಶೇಷಾಚಾರ್ಯ, ಕಾಶಿರಾಮ ಶೇಷಶಾಸ್ತ್ರಿ, ಚಾಮರಾಜ ನಗರದ ರಾಮಶಾಸ್ತ್ರಿ, ನಂಜನಗೂಡು ಸುಬ್ಬಶಾಸ್ತ್ರಿ, ಜಯಾಚಾರ್ಯ, ರಾಜಕಾರ್ಯ ಪ್ರಸಕ್ತ ರಾವ್ ಬಹುದ್ದೂರ್ ಅಂಬಿಗಲ್ ನರಸಿಂಹಯ್ಯಾಚಾರ್ಯರು, ಸಿ.ಸುಬ್ಬರಾವ್, ಬಿ.ಎ.ರಾವ್ ಬಹದ್ದೂರ್ ಎಲೆ ಮಲ್ಲಪ್ಪಶೆಟ್ಟಿ, ಯಜಮಾನ ವೀರಸಂಗಪ್ಪ, ನೀಲಗಿರಿ ಪಾಪಣ್ಣ, ವೀಣೆ ಶೇಷಣ್ಣ ಮುಂತಾದ ವಿದ್ವನ್ಮಣಿಗಳ ಮುಂದೆ ಬಸಪ್ಪಶಾಸ್ತ್ರಿಗಳ ನಾಟಕವನ್ನು ಓದಿಸಿ ಅವರೆಲ್ಲಾ ಮೆಚ್ಚಿದ ನಂತರ ಶಾಸ್ತ್ರಿಗಳಿಗೆ 'ಅಭಿನವ ಕಾಳಿದಾಸ' ಎಂಬ ಬಿರುದನ್ನು ಕೊಡಲಾಯಿತು.

ಬಸವಪ್ಪ ಶಾಸ್ತ್ರಿ:ಉದಾಹರಣೆ(ಪು.ಸಂ.೫)

ಸೂತಂ: ಎಲೈ, ಆಯುಷ್ಮಂತನೆ! ನಿಲ್ಲು ನಿಲ್ಲು! ನಿನ್ನ ಬಾಣಕ್ಕೆ ಗುರಿಯಾದ ಈ ಮೃಗಕ್ಕೆ ಅಡ್ಡಲಾಗಿ ಮುನಿಗಳು ಬಂದರು.

ರಾಜಂ : (ತ್ವರೆಯಿಂದ ನೋಡಿ) ಹಾಗಾದರೆ ಕುದುರೆಗಳನ್ನು ನಿಲ್ಲಿಸು.

ಸೂತಂ : ಆಗಲಿ, (ಎಂದು ರಥವನ್ನು ನಿಲ್ಲಿಸುವನು)

(ಅನಂತರ ಮೂವರು ವೈಖಾನಸರು ಬರುವರು)

ಮೂರನೆಯ ವೈಖಾ: (ಕೈಯೆತ್ತಿ ಮೃಗವನ್ನು ತೋರಿಸಿ) "ಎಲೈ ರಾಯನೇ,

ವೃತ್ತ॥ ಸಲ್ಲದು ಸಲ್ಲದಬಿದನಿಸಲ್ಗಡ ಮೆಲ್ಲಿತರಿಂದೆ ಕೂಡಿದೀ

ಪುಲ್ಲೆಯ ಮೈಯ್ಯೊಳಕ್ಕಟಿಡುವಂತೆ ವೊಲಗ್ನಿಯ ತೂಲರಾಶಿಯೊಳ್।

ಎಲ್ಲಿ ಕುರಂಗಕಂಗಳ ತಿಚಂಚಲಮಪ್ಪ ಬರ್ದುಂಕು ಭೂಪ ಪೇ

ಳೆಲ್ಲಿ ಸಿಡಿಲ್ಗೆ ಸಾಟಿಯೆನೆ ಬಿರ‍್ರನೆ ಬೀಳ್ವ ಭವಚ್ಚಿಳೀಮುಖಂ॥೧೦॥

ಕಂದ॥ ಅದರಿಂದೆ ತೊಟ್ಟ ಬಾಣವ

ನಿದನಿಳುಹೈ ಜನಪ ದೀನರಂ ಪೊರೆವುದಕ

ಲ್ಲದೆ ನಿರಪರಾಧ ಜಂತುವ

ಸದೆಯಲ್ಲ ನಿಮಗಲ್ತು ಶಸ್ತ್ರಮವನೀತಳದೊಳ್॥೧೧॥

ರಾಜಂ : ಇದೋ, ಬಾಣವನ್ನು ಇಳಿಸಿದೆನು(ಎಂದು ಬಾಣವನ್ನು ಇಳಿಸುವನು)"೨೯

**ಬಿ.ಕೃಷ್ಣಪ್ಪನವರ ಗದ್ಯಾನುವಾದದ ಬಗ್ಗೆ**

ಬಿ.ಕೃಷ್ಣಪ್ಪನವರು ೧೯೨೨ರಲ್ಲಿ ಶಾಕುಂತಲ ನಾಟಕದ ಗದ್ಯಾನುವಾದ ಮಾಡಿದ್ದಾರೆ. ಇದುವರೆಗೂ ಬಂದ ಶಾಕುಂತಲ ನಾಟಕದ ಬಗ್ಗೆ ಇರುವ ಮಾಹಿತಿಗಿಂತ ಭಿನ್ನವಾಗಿ ಹೇಳುವಲ್ಲಿ ಮುಂದಾಗಿದ್ದಾರೆ. ಈ ಕೃತಿಯಲ್ಲಿ ಸ್ವಯಂ ಅಭಿಪ್ರಾಯವನ್ನು ಸೇರಿಸಿಲ್ಲ. ಮೂಲಗ್ರಂಥಕ್ಕೆ ಚ್ಯುತಿ ಬರದಂತೆಯೂ

ನೋಡಿಕೊಂಡಿದ್ದಾರೆ. ಮೂಲಕೃತಿಯಲ್ಲಿ ರಸವತ್ತಾದ ಅಂಶಗಳನ್ನು ಯಥಾವತ್ತಾಗಿ ತಂದಿದ್ದಾರೆ. ಮುಖ್ಯವಾಗಿ ಆಂಧ್ರಲಿಪಿಯನ್ನಾಗಲಿ ನಾಗರಲಿಪಿಯನ್ನಾಗಲಿ ಸಂಪೂರ್ಣವಾಗಿ ಅವಲಂಬಿಸದೇ, ರಸಭರಿತವಾಗಿ ತೋರಿದ ಪಾಠಾಂತರಗಳು ಯಾವ ಲಿಪಿಯ ಮಾತೃಕೆಗಳಲ್ಲಿ ಕಂಡುಬಂದರೂ ಅವುಗಳನ್ನು ಪರಿಗಣಿಸಿದ್ದಾರೆ. ಈ ಕೃತಿಯಲ್ಲಿ ಬರಿ ಮೂರು ಕಥೆಗಳಲ್ಲಿ ಹೊರತು ಉಳಿದ ಭಾಗಗಳಲ್ಲೆಲ್ಲಾ ಗದ್ಯವನ್ನೇ ಉಪಯೋಗಿಸಿದ್ದಾರೆ. ಈ ಮೂರು ಸಂದರ್ಭಗಳೊಳಗೆ ಎರಡು ಕಡೆಗಳಲ್ಲಿ ಗದ್ಯರೂಪವಾಗಿ ಪರಿವರ್ತನವನ್ನು ಕೊಡಲಾಗಿದೆ. ಮಿಕ್ಕ ಒಂದು ಕಡೆಯಲ್ಲಿ ಗೀತೆಯು ಸುಲಭವಾಗಿರುವುದೆಂದು ತೋರಿದುದರಿಂದ ಗದ್ಯಾನುವಾದವನ್ನು ಕೊಟ್ಟಿಲ್ಲ.

ಈ ಗ್ರಂಥಕ್ಕಾಗಿ ಮೇಲೆ ಹೇಳಿದ ಕೆಲವು ಕನ್ನಡ ಪರಿವರ್ತನ ಗ್ರಂಥಗಳನ್ನು ಮಾತ್ರವಲ್ಲದೆ ಕೆಲವು ಇಂಗ್ಲೀಷಿನ ಕೃತಿಗಳನ್ನು ಆಂಧ್ರಪರಿವರ್ತನಗಳನ್ನೂ ಕೆಲವು ಸಂಸ್ಕೃತಾಂಗ್ಲೇಯ ವ್ಯಾಖ್ಯಾನಗಳನ್ನೂ ನೋಡಲಾಗಿದೆ. ಇವುಗಳಲ್ಲಿ ಪ್ರೊಫೆಸರ್ ಶಾರದಾರಂಜನರಾಯ್, ಎಂ.ಎ. ಅವರ ಸಂಸ್ಕೃತಾಂಗ್ಲೇಯ ವ್ಯಾಖ್ಯಾನಗಳಿಂದಲೂ ಮೋನಿಯೇ ವಿಲಿಯಮ್ಸ್ ಅವರ ಆಂಗ್ಲೇಯ ವ್ಯಾಖ್ಯಾನದಿಂದಲೂ, ರಾಘವಭಟ್ಟರ ಮತ್ತು ಶ್ರೀನಿವಾಸಚಾರ್ಯರ ವ್ಯಾಖ್ಯಾನಗಳಿಂದಲೂ ಬಹಳ ಸಹಾಯವಾಗಿರುವುದೆಂದು ಅತ್ಯಂತ ಕೃತಜ್ಞತೆಯಿಂದ ಬಿ.ಕೃಷ್ಣಪ್ಪನವರು ಹೊಗಳಿದ್ದಾರೆ.

ಈ ಕೃತಿಯಲ್ಲಿ ರಂಗಸ್ಥಾನಕ್ಕೆ ಸಂಬಂಧಿಸಿದ ಸೂಚನೆಗಳನ್ನು ಸಣ್ಣ ಅಕ್ಷರಗಳಲ್ಲಿ ದೊಡ್ಡ ಆವರಣ ಚಿಹ್ನೆಗಳ ನಡುವೆ ಮುದ್ರಿಸಲಾಗಿದೆ. ಸಂಸ್ಕೃತ ಮಾತೃಕೆಗಳಲ್ಲಿರುವ ಪದ್ಯಭಾಗಗಳ ಪರಿವರ್ತನವನ್ನು ದೊಡ್ಡ ಅಕ್ಷರಗಳಲ್ಲಿ ಮುದ್ರಿಸಿರುವುದಲ್ಲದೆ ಇಂತಹವುಗಳ ಅಂತ್ಯಭಾಗದಲ್ಲಿ ಒಂದೊಂದು ಸಂಖ್ಯೆಯನ್ನು ಕೊಡಲಾಗಿದೆ. ಸಂಸ್ಕೃತ ನಾಟಕದಲ್ಲಿ ಕಂಡುಬರುವ ಒಂದೊಂದು ಸಂಖ್ಯೆಯನ್ನು ಕೊಡಲಾಗಿದೆ. ಸಂಸ್ಕೃತ ನಾಟಕದಲ್ಲಿ ಕಂಡುಬರುವ ಗದ್ಯಭಾಗಗಳನ್ನು ಅಷ್ಟು ದೊಡ್ಡವೂ ಅಲ್ಲದೆ ಅಷ್ಟು ಸಣ್ಣವೂ ಅಲ್ಲದ ಅಕ್ಷರಗಳಲ್ಲಿ ಮುದ್ರಿಸಿದ್ದಾರೆ.

ಅಲ್ಲಲ್ಲಿ ನಕ್ಷತ್ರ ಚಿಹ್ನೆಗಳ ನಡುವೆ ಮುದ್ರಿತವಾಗಿರುವ ಭಾಗಗಳೂ ಈ ಕೃತಿಯಲ್ಲಿ ಕಂಡುಬರುತ್ತವೆ. ಇಂತಹವುಗಳು ಎಲ್ಲಾ ಮಾತೃಕೆಗಳಲ್ಲೂ ಕಂಡುಬರದ ಭಾಗಗಳೆಂದು ವಾಚಕರು ಗ್ರಹಿಸಬೇಕು. ಇಷ್ಟು ಮಾತ್ರವಲ್ಲದೇ ಮೂಲದ ಭಾವವು ಸುಲಭವಾಗಿ ಗೋಚರವಾಗುವುದಕ್ಕಾಗಿಯೂ ಭಾಷೆಯು ಪೆಡಸಾಗದಿರುವುದಕ್ಕಾಗಿಯೂ ಕೆಲ ಕೆಲವು ಕಡೆಗಳಲ್ಲಿ ಒಂದೆರಡು ಹೆಚ್ಚು ಶಬ್ದಗಳನ್ನು ಸೇರಿಸಿರುವುದರಿಂದ ಮೂಲದಲ್ಲಿ ಕಂಡುಬಾರದ ಇಂತಹ ಶಬ್ದಗಳನ್ನು ಪ್ರಾಯಶಃ ಸರ್ವತ್ರ ಸಣ್ಣ ಆವರಣ ಚಿಹ್ನೆಗಳ ನಡುವೆ ತೋರಿಸಿದೆ. ಈ ಕೃತಿಯಲ್ಲಿ ಅನೇಕ ಲೋಪದೋಷಗಳು ಕಂಡುಬಂದರೂ ಓದುಗರು ಮನ್ನಿಸಬೇಕೆಂದು ಧನ್ಯತೆಯಿಂದ ತಿಳಿಸಿದ್ದಾರೆ. ಉದಾಹರಣೆ:(ಮು.ಸಂ.೬)

ಸೂತ : ಹಾಗೆಯೇ ಆಗಲಿ(ಎಂದು ರಥವನ್ನು ನಿಲ್ಲಿಸುವನು)

(ಬಳಿಕ ಮೂವರು ವೈಖಾನಸರು ಬರುವರು)

ಮೂರನೆಯ ವೈಖಾನಸ : (ಕೈಯನ್ನು ಎತ್ತಿ) ಎಲೈ ರಾಜನೇ!

"ಪುಷ್ಪರಾಶಿಯಲ್ಲಿ ಬೆಂಕಿಯನ್ನಿಡುವುದು ಆಯುಕ್ತವಾಗಿರುವಂತೆ, ಈ ಮೃದು ಶರೀರದ ಜಿಂಕೆಯ ಮೈಯಲ್ಲಿ ನಿನ್ನ ಬಾಣವನ್ನು ಪ್ರಯೋಗಿಸುವುದು ತಕ್ಕುದಲ್ಲ! ತಕ್ಕುದಲ್ಲ॥ ಅಯ್ಯೋ। ಅತಿಚಂಚಲವಾದ ಜೀವಿತಗಳುಳ್ಳ ಹರಿಣಗಳಲ್ಲಿ? ಸಿಡಿಲಿಗೆ ಸಮಾನವೆನಿಸುವ ತೀಕ್ಷ್ಣಾಗ್ರಗಳುಳ್ಳ ಈ ನಿನ್ನ ಬಾಣಗಳೆಲ್ಲಿ?

ಇದೂ ಅಲ್ಲದೆ–

ನಿಮ್ಮ ಶಸ್ತ್ರಗಳು ಆರ್ತರನ್ನು ರಕ್ಷಿಸುವುದಕ್ಕಾಗಿ ಇವೆಯೇ ಹೊರತು, ನಿರಪರಾಧಿಗಳ ಮೇಲೆ ಪ್ರಯೋಗಿಸುವುದಕ್ಕಾಗಿ ಅಲ್ಲ, ಆದುದರಿಂದ, (ರಾಜನೇ) ನೀನು ತೊಟ್ಟಿರುವ ಈ ಸಾಯಕವನ್ನು ಉಪಸಂಹರಿಸು. ಇದು ನ್ಯಾಯವಾದುದು.

ರಾಜ : ಇಗೋ ಬಾಣವನ್ನು ಇಳಿಸಿದೆನು(ಎಂದು ಹಾಗೆಯೇ ಮಾಡುವನು)"[೩೦]

ಹೀಗೆ ಬಿ.ಕೃಷ್ಣಪ್ಪ ೧೯೨೨ರಲ್ಲಿ ಕನ್ನಡಕ್ಕೆ ಭಾಷಾಂತರಿಸಿದ್ದಾರೆ. ಈ ಭಾಷಾಂತರದ ನಾಟಕವು ಓದುಗರಿಗೆ ಅರ್ಥವಾಗುವಂತೆ ಹಳೆಗನ್ನಡದ ಅರಿವು ಇರದವರಿಗೆ ಅರ್ಥವಾಗುವಂತೆ ಗದ್ಯದಲ್ಲಿ ಭಾಷಾಂತರಿಸಿದ ಮೊದಲ ನಾಟಕ ಎಂಬ ಮಾತಿಗೆ ಸಹಕಾರಿಯಾಗಿದೆ. ಏಳು ಅಂಕಗಳು ಮೂಲನಾಟಕದಲ್ಲಿ ಮುಗಿಯುವಂತೆ ಗದ್ಯಾನುವಾದಲ್ಲಿ ಸಹಾ ಏಳನೇ ಅಂಕಕ್ಕೆ ಮುಕ್ತಾಯ ಮಾಡಿದ್ದಾರೆ.

**ಕೆ.ಟಿ.ಪಾಂಡುರಂಗಿ–ಅಭಿಜ್ಞಾನ ಶಾಕುಂತಲಮ್–೧೯೭೮**

'ಅಭಿಜ್ಞಾನ ಶಾಕುಂತಲಮ್' ಎಂಬ ಅನುವಾದದ ನಾಟಕವನ್ನು ಕೆ.ಟಿ.ಪಾಂಡುರಂಗಿಯವರು ರಚಿಸಿದ್ದಾರೆ. ಇವರು ಬೆಂಗಳೂರು ವಿಶ್ವವಿದ್ಯಾಲಯದಲ್ಲಿ ಸಂಸ್ಕೃತ ವಿಭಾಗದ ಮುಖ್ಯಸ್ಥರಾಗಿದ್ದರು. ಟಿಪ್ಪಣಿ ಹಾಗೂ ವಿವರಣೆಯೊಂದಿಗೆ ಪ್ರಸ್ತುತ ಕೃತಿಯನ್ನು ವಿದ್ಯಾರ್ಥಿಗಳಿಗೆ ಅನುಕೂಲವಾಗುವಂತೆ ರೂಪಿಸಿದ್ದಾರೆ. ೧೯೭೮ರಲ್ಲಿ ಮೊದಲ ಮುದ್ರಣ ಕಂಡಿದೆ. ನಂತರ ೧೯೮೧ರಲ್ಲಿ ೨ನೇ ಮುದ್ರಣ ಕಂಡಿದೆ.

ಅಭಿಜ್ಞಾನ ಶಾಕುಂತಲವು ಪದವಿ ತರಗತಿಗಳಿಗೆ ಭಾಷೆಯ ವಿಷಯವಾಗಿಯೂ, ಐಚ್ಛಿಕ ವಿಷಯವಾಗಿಯೂ ಆಗಾಗ ನಿಯೋಜಿಸಲ್ಪಡುತ್ತದೆ. ಸ್ನಾತಕೋತ್ತರ ಪದವಿಯಲ್ಲಿಯೂ ನಾಟಕದ ವಿಶೇಷ ಅಧ್ಯಯನಕ್ಕೆ ನಿಯಮಿಸಲ್ಪಡುತ್ತದೆ. ಆದುದರಿಂದ ಈ ಎಲ್ಲಾ ಹಂತದವರಿಗೂ ಪ್ರಯೋಜನಕ್ಕೆ

ಬರುವಂತೆ ವಿಸ್ತೃತವಾದ ಪೀಠಿಕೆ ಅನುವಾದವನ್ನು ಮಾಡಿದ್ದಾರೆ. ಸಂಸ್ಕೃತ ವಿದ್ಯಾರ್ಥಿಗಳಿಗಲ್ಲದೆ ಕನ್ನಡ ವಿದ್ಯಾರ್ಥಿಗಳಿಗೂ 'ಕನ್ನಡ ಶಾಕುಂತಲ'ವು ಪಠ್ಯಪುಸ್ತಕವಾಗಿ ಆಗಾಗ ನಿಯೋಜಿಸಲ್ಪಡುವುದರಿಂದ ತಿಳಿಗನ್ನಡದಲ್ಲಿ ಮೂಲ ಶಾಕುಂತಲದ ಸರಳಾನುವಾದವು ಅವರಿಗೂ ಸಹಾಯಕವಾಗುತ್ತವೆ. 'ಶಾಕುಂತಲ'ವನ್ನು ಓದಿ ಅದರ ಸವಿಯನ್ನರಿಯಬೇಕೆಂಬ ಸಾಮಾನ್ಯ ವಾಚಕರಿಗೂ ಅನುವಾದ, ಟಿಪ್ಪಣಿ ಅರ್ಥವಾಗುವಂತೆ ಸರಳೀಕರಿಸಿದ್ದಾರೆ.

ಉದಾಹರಣೆ: (ಪು.ಸಂ. ೧೦೬, ೧೦೭)

ಸೂತ : (ಕೇಳಿ ನೋಡಿ) ಆಯುಷ್ಮಂತನೆ! ನಿನ್ನ ಬಾಣದ ಅಳತೆಯಲ್ಲಿರುವ ಈ ಜಿಂಕೆಗೂ ನಿನಗೂ ನಡುವೆ ತಪಸ್ವಿಗಳು ಬಂದಿರುವರು.

ರಾಜ : (ಆತುರತೆಯಿಂದ) ಹಾಗದರೆ ಕುದುರೆಗಳನ್ನು ತಡೆ.

ಸೂತ : ಆಗಲಿ (ರಥವನ್ನು ನಿಲ್ಲಿಸುವನು.)

(ಓರ್ವ ತಪಸ್ವಿಯು ಇಬ್ಬರು ಶಿಷ್ಯರೊಡನೆ ಪ್ರವೇಶಿಸುವನು)

"'ತಪಸ್ವಿ : (ಆತುರತೆಯಿಂದ ಕೈಯನ್ನು ಮೇಲಕ್ಕೆತ್ತಿ) ರಾಜನೇ! ಇದು ಆಶ್ರಮದ ಮೃಗವು, ಕೊಲ್ಲಬೇಡ! ಕೊಲ್ಲಬೇಡ.

ಆದುದರಿಂದ ಚೆನ್ನಾಗಿ ಗುರಿಯಿಟ್ಟ ಈ ನಿನ್ನ ಬಾಣವನ್ನು ತಡೆಹಿಡಿ. ನಿಮ್ಮ ಶಸ್ತ್ರಗಳು ಕಷ್ಟಕ್ಕೀಡಾದವರ ರಕ್ಷಣೆಗಾಗಿ ಇರುವವು. ನಿರಪರಾಧಿಗಳ ಮೇಲೆ ಎಸೆಯುವದಕ್ಕಲ್ಲ.(೧೦)

ರಾಜ : ಇದೋ ಬಾಣವನ್ನು ಹಿಂತೆಗೆದನು(ಹೇಳಿದಂತೆ ಮಾಡುವನು)

ತಪಸ್ವಿ : ಪುರುವಂಶಕ್ಕೆ ದೀಪದಂತಿರುವ ನಿನಗೆ ಇದು ಭೂಷಣವಾದುದು. ಪುರುವಂಶದಲ್ಲಿ ಜನಿಸಿದ ನಿನಗೆ ಇದು ತುಂಬ ಉಚಿತವಾದುದು. ಇದೇ ರೀತಿಯಾದ ಸದ್ಗುಣಗಳಿಂದ ಕೂಡಿದ ಚಕ್ರವರ್ತಿಯಾಗುವ ಮಗನನ್ನು ಪಡೆ.(೧೧)

ರಾಜ : (ನಮಸ್ಕರಿಸಿ) ತಪಸ್ವಿಗಳ ಮಾತನ್ನು ಸ್ವೀಕರಿಸುವೆನು."[೩೧]

ಈ ಮೇಲಿನಂತೆ ಕನ್ನಡ ಕಲಿಯುವ ವಿದ್ಯಾರ್ಥಿಗಳಿಗೆ ಅನುಕೂಲವಾಗುವಂತೆ ಭಾಷಾಂತರಿಸಿದ್ದಾರೆ.

**ಶಾಕುಂತಲ ನಾಟಕವು ಪ್ರಹ್ಲಾದ ಮುದ್ಗಲ್–೧೯೯೫**

ಮಹಾಕವಿ ಕಾಳಿದಾಸನು ಭಾರತೀಯ ಸಾಹಿತ್ಯದಲ್ಲಿ ಪ್ರಮುಖವಾದ ಸ್ಥಾನವನ್ನು ಪಡೆದಿದ್ದಾನೆ. ಸಂಸ್ಕೃತದ ಅರಿವಿನಿಂದ ಆತನ ಕೃತಿಗಳು ವಿಶ್ವದಾದ್ಯಂತ ಗಮನ ಸೆಳೆದಿವೆ. ಪ್ರಪಂಚದ ಅನೇಕ ಭಾಷೆಗಳಲ್ಲಿ ಅನುವಾದಗೊಂಡಿವೆ. 'ಅಭಿಜ್ಞಾನ ಶಾಕುಂತಲ'ವಂತೂ ಇವುಗಳಲ್ಲೆಲ್ಲ ಹೆಚ್ಚಿನ ಮನ್ನಣೆ ಮತ್ತು ಪ್ರತಿಷ್ಠೆ ಪಡೆದ ನಾಟಕ ಕೃತಿ. "ಶಾಕುಂತಲ"ದ ಅವತರಣಿಕೆಗಳು ಭಾರತೀಯ ಭಾಷೆಗಳಲ್ಲಿ

ಗ್ರಾಂಥಿಕವಾಗಿಯೂ ಪ್ರಾಯೋಗಿಕವಾಗಿಯೂ ಸಾಕಷ್ಟು ನಡೆದಿವೆ. ಕನ್ನಡದಲ್ಲಿ ಈ ಶೇಷೋ ರಾಮಚಂದ್ರ ಚುರಮುರಿಯವರ ಕನ್ನಡ ಶಾಕುಂತಲವು ೧೮೭೦ರಲ್ಲಿ ಪ್ರಕಟಗೊಂಡಿತು. "ಮೊದಲು ಪ್ರಕಟಿತ ಕನ್ನಡ ಶಾಕುಂತಲ"ವೆಂಬ ಖ್ಯಾತಿಗೆ ಪಾತ್ರವಾಗಿದೆ. ಬಸವಪ್ಪಶಾಸ್ತ್ರಿಗಳು ಮತ್ತು ಬಿ.ಕೃಷ್ಣಪ್ಪನವರ ಅನುವಾದಗಳು ಅನಂತರದವುಗಳು. ಚುರಮುರಿಯವರ ಶಾಕುಂತಲವು ಮುಂಬೈಯ ಎಜ್ಯುಕೇಷನಲ್ ಸೊಸೈಟಿಯಲ್ಲಿ ಮುದ್ರಣಗೊಂಡು ಪ್ರಕಟವಾಯಿತು. ಅನುವಾದಕ ಚುರಮುರಿಯವರು ಜೀವಿಸಿದ್ದಾಗಲೇ ಇದರ ಎರಡನೆಯ ಆವೃತ್ತಿಯು(೧೮೮೨) ಧಾರವಾಡದಿಂದ ಪ್ರಕಟಗೊಂಡಿತು. ಅನಂತರದ ಎರಡು ಆವೃತ್ತಿಗಳು(೧೮೯೪ ಮತ್ತು ೧೯೩೪) ಬಂದಿವೆ. ನಾಲ್ಕನೆಯ ಆವೃತ್ತಿ(೧೯೩೪) ಈ ಕಾಲದಲ್ಲಿ ಸುಸಂಸ್ಕೃತರ ಮನೆ ಮನೆಗಳಲ್ಲಿ ಚುರಮುರಿಯವರ ಶಾಕುಂತಲ ಪುಸ್ತಕವು ನೋಡಲಿಕ್ಕೆ ದೊರೆಯುತ್ತಿತ್ತು. ಗೌರಿ-ಗಂಗೆಯರ ಆರತಿಯ ಪದಗಳಂತೆ "ಪತಿಯ ಮಂದಿರಕ್ಕೆ ನೀ ಪೋದ ಮ್ಯಾಲಿನಿತು ಪದ್ಧತಿಯಿಂದ ನಡೆಯಬೇಕಮ್ಮ ಕೇಳು" ಎಂಬುದಾಗಿ 'ಕಣ್ವಋಷಿಗಳು' ಶಾಕುಂತಲೆಗೆ ಮಾಡಿದ ಉಪದೇಶದ ಪದ್ಯವು ಸುಶಿಕ್ಷಿತ ಪ್ರೌಢ ಗೃಹಿಣಿಯ ಬಾಯಿಂದ ಕೇಳಲು ದೊರೆಯುತ್ತಿತ್ತು. ಸಿರಿವಂತರ ಉಲ್ಲಾಸ ಕೂಟಗಳಲ್ಲಿ ಸಂಗೀತ ಸಮಾರಂಭಗಳಲ್ಲಿ ಶಾಕುಂತಲದ ಪದ್ಯಗಳನ್ನು ಗಾಯಕರಿಂದ ಹೇಳಿಸಿ, ಕೇಳಿ ಸಂತೋಷಪಟ್ಟು ತಲೆದೂಗುವ ತರುಣ ಸವಿಗಾರರ ತಂಡಗಳು ಈ ಭಾಗದಲ್ಲೆಲ್ಲ ಕಣ್ಣಿಗೆ ಬೀಳುತ್ತಿದ್ದವು. ಮದುವೆಗಳ ಮಂಗಲ ಪ್ರಸಂಗದಲ್ಲಾಗಲಿ, ವಸಂತೋತ್ಸವದ ಹಂದರದಲ್ಲಾಗಲಿ ನಡೆಯುತ್ತಿದ್ದ ಗಾಯನ, ಕೀರ್ತನ ಪ್ರಸಂಗಗಳಲ್ಲಿ, 'ಬಾ ಬಿಡಿಸೋ ಮೋಹನ ಆಯಾಸವನು ಪಡಬ್ಯಾಡಿ ಚುಂಬಿಸಲಿಲ್ಲ ಚೆಲ್ವೆ ಸಂಧಿಯೊಳು' ಮೊದಲಾದ ಪದಗಳನ್ನು ಸುಸ್ವರವಾಗಿ ಸರಾಗವಾಗಿ ಹಾಡುವ ಹೆಣ್ಣುಮಕ್ಕಳನ್ನು ನೋಡಿ ರಸಭಾವಗಳನ್ನು ಕುಶಲತೆಯಿಂದ ವಿಶದಪಡಿಸುವ ಅವರ ಹಾಡುಗಾರಿಕೆಯನ್ನು ಕೇಳಿ ಬೆರಗಾಗಿ·ಮೈಮರೆತು ಕುಳಿತಂಥ ಅನೇಕ ಪ್ರಸಂಗಗಳು ತಾಳ್ತಜೆ ವಸಂತಕುಮಾರರ ಅನುಭವಕ್ಕೆ ಬಂದಿವೆ ಎಂದಿದ್ದಾರೆ. ಜಯದೇವ ಕವಿಯ 'ಗೀತಗೋವಿಂದ'ದ ಒಂದೆರಡು ಅಷ್ಟಪದಿಗಳನ್ನೂ ಶಾಕುಂತಲದೊಳಗಿನ ಒಂದೆರಡು ಪದ್ಯಗಳನ್ನು ಗಾಯಕ ಗಾಯಕಿಯರಿಂದ ಹೇಳಿಸಿ ಕೇಳದೇ ಯಾವ ಸಂಗೀತ ಸಮ್ಮೇಳನವೂ ಬಹುಶಃ ಕೊನೆಗಾಣುತ್ತಿರಲಿಲ್ಲ"[೨] ಎಂಬ ಮಾತುಗಳು ಈ ಕೃತಿಯ ಆ ಕಾಲದ ಜನಪ್ರಿಯತೆಗೆ ಸಾಕ್ಷಿಯಾಗಿವೆ.

ಇದು ಒಂದು ಮುಖವಾದರೆ, ಇನ್ನೊಂದು ಮುಖ ಈ ಕೃತಿಯ ಅಂತರ್‌ಭಾಷಾ ಪ್ರಭಾವ. ಮರಾಠಿಯ ನಾಟಕರಂಗದ ಮೇಲಣ ಕನ್ನಡದ ಪ್ರಭಾವದ ಹಿನ್ನೆಲೆಯನ್ನು ಅರಿತುಕೊಳ್ಳಲೂ ಈ ಕೃತಿ ಮಾತೃಕೆಯಾಗಿದೆ. ಈ ವಿಚಾರವನ್ನು ಸಂಪಾದಕರು ಪ್ರಸ್ತಾವನೆಯಲ್ಲಿ ವಿವರವಾಗಿ ಚರ್ಚಿಸಿರುವುದರಿಂದ ಇಲ್ಲಿ ವಿಸ್ತರಿಸುವುದಿಲ್ಲ. ಚುರಮುರಿಯವರು ಮರಾಠಿಯಲ್ಲಿ ಲೇಖನ, ಕವಿತೆ ಬರೆದವರು, ಪರಸ್ಪರ ಕೊಡು-ಕೊಳ್ಳುವಿಕೆಗೆ ಕಾರಣರಾದವರು. ಕನ್ನಡ-ಮರಾಠಿ ಭಾಷಾ ಸಾಹಿತ್ಯ ಸಂಸ್ಕೃತಿಗಳ ಅವಿಚ್ಛಿನ್ನ ಬಾಂಧವ್ಯಕ್ಕೆ ಸೇತುವೆಯಾದರು. ಈ ದೃಷ್ಟಿಯಿಂದಲೂ ಕನ್ನಡ ಶಾಕುಂತಲಕ್ಕೆ ವಿಶಿಷ್ಟತೆಯಿದೆ.

ರಂಗಭೂಮಿಯ ಪ್ರಯೋಗಕ್ಕೆ ಅನುಗುಣವಾಗಿ ಭಾಷೆಯ ಅಳವಡಿಕೆಯಾಗಿದೆ. ಕನ್ನಡ–ಮರಾಠಿ ನಾಟಕ ಲೋಕದಲ್ಲಿ ಬಹು ಚರ್ಚಿತವಾದ ಪರಸ್ಪರ ಪ್ರಭಾವಗಳ ಅಭ್ಯಾಸಕ್ಕೆ ಈ ಕೃತಿಯು ಒಂದು ಮೌಲಿಕ ಹಿನ್ನೆಲೆಯಾಗಿದೆ. ಮರಾಠಿ ರಂಗಭೂಮಿಯ ಮೇಲೆ ಪ್ರಚಾರದಲ್ಲಿದ್ದ ಸಂಗೀತ ನಾಟಕದ ಪರಂಪರೆ ಕಾಲಾಂತರ ಬದಲುಗೊಳ್ಳುತ್ತ ಇಂದಿನವರೆಗೆ ಒಂದಿಲ್ಲ ಒಂದು ರೀತಿಯಲ್ಲಿ ಉಳಿದುಬಂದಿವೆ. ಕಿರ್ಲೋಸ್ಕರರ "ಶಾಕುಂತಲ" ನಾಟಕದಿಂದ ಸಂಗೀತ ಪ್ರಸಿದ್ಧಿ ಪಡೆಯಲು ಕಾರಣವಾಯಿತು.

ಚುರಮುರಿ ಮರಾಠಿ ಬಲ್ಲವರು ಮರಾಠಿ ಭಾಷೆಯಲ್ಲಿ ಲೇಖನ ಕವಿತೆಗಳನ್ನು ಬರೆದು 'ವಿವಿಧ ಜ್ಞಾನ ವಿಸ್ತಾರ' ಪತ್ರಿಕೆಯಲ್ಲಿ ಪ್ರಕಟಿಸಿದರು ಎಂಬ ಸಂಗತಿ ಜನಜನಿತವಾಗಿದೆ. ತಮ್ಮ ಕನ್ನಡ ಶಾಕುಂತಲ ರಚಿಸುವ ಕಾಲದಲ್ಲಿ ಗೋಡಬೋಲೆ ಮತ್ತು ಗುಂಜೀಕರ ಮರಾಠಿಯಲ್ಲಿ ಅನುವಾದಿಸಿದ ಶಾಕುಂತಲವನ್ನು ನೋಡಬಹುದಾಗಿದೆ.

"ಉದಾಹರಣೆ : ಪು.ಸಂ.೫ (ಪ್ರಹ್ಲಾದ ಮುದ್ಗಲ್ – ಶಾಕುಂತಲ ನಾಟಕವು)

ಸಾರಥಿ : (ಕಿವಿಗೊಟ್ಟು ಕೇಳಿ) ದೊರೆಯೆ ನಮ್ಮ ಬಾಣದಳತಿಯಲ್ಲಿಯೆ ಚಿಗುರಿ ಬಂದಿದೆ. ಪರಂತು ನಡುವೆ ಮೂವರು ತಪಸ್ವಿಗಳು ಬಂದು ನಿಂತಿದ್ದಾರೆ.

ಅರಸು : (ಘಾಬರಿಗೊಂಡು) ಹಾಗಾದರೆ ರಥವನ್ನು ನಿಲ್ಲಿಸು, ವೇಗ ನಿಲ್ಲಿಸು.

ಸಾರಥಿ : ಮಹದಾಜ್ಞ (ರಥವನ್ನು ನಿಲ್ಲಿಸುತ್ತಾನೆ)

(ಇಷ್ಟರಲ್ಲಿ ಮೂವರು ಋಷಿಶಿಷ್ಯರು ಬರುತ್ತಾರೆ)

ಋಷಿ : ಹೇ ರಾಜನ್, ಆಶ್ರಮದೊಳಗಣ ಚಿಗುರೆ ಕಂಡಿಯಾ? ಹೊಡಿಯತಕ್ಕದಲ್ಲ. ಹೊಡಿಯತಕ್ಕದ್ದಲ್ಲ! ನೋಡು;

(ಮಾಲಿನೀ ವೃತ್ತ)

ಅರಳುಗಳಲಿ ಕಿಚ್ಚಂ ಚುಚ್ಚಿ ದೋಲ್ವಜ್ರ ಪೋಲ್ವಾ ಸರಳ ನೆಸಿಯೆ
ವೇಡ್ಯೆಕೋ ಮರಾಂಗಕ್ಕೆ ಚಲ್ವಾ॥ ಎರಳಿಯ ಮೃದು ಜೀವಕ್ಕಲ್ಲ
ನಿನ್ನಸ್ತ್ರ ವ್ಯರ್ಥಾ। ದುರುಳರಿನುರೆ ಪೀಡಾ ಪಟ್ಟರಂ ಪಾಲನಾರ್ಥ ॥೧೦॥

ಆದ್ದರಿಂದ ಬಾಣವನ್ನು ಹಿಂದಕ್ಕೆ ತೆಗೆ ಕಂಡಿಯಾ, ನಿನ್ನಂಥಾ ಧರ್ಮಿಷ್ಟನಾದ ರಾಜನಿಗೆ ಇದು ಉಚಿತವಲ್ಲ.

ಅರಸು : ಇಕ್ಕೋ ನೋಡಿ ಹಿಂದಕ್ಕೆ ತೆಗೆದಿದ್ದೇನೆ.

(ಬಾಣವನ್ನು ತೆಗೆದು ಬತ್ತಳಿಕೆಯಲ್ಲಿ ಸೇರಿಸುತ್ತಾನೆ)"[೩೩]

ಇದು ೧೯೬೫ರಲ್ಲಿ ಮರಾಠಿಯಿಂದ ಕನ್ನಡಕ್ಕೆ ಅನುವಾದಗೊಂಡ ನಾಟಕವಾಗಿದೆ. ಈ ಹಿಂದೆ ಭಾಷಾಂತರಕಾರರು ಮಾಡಿರುವ ನಾಟಕದ ಕಥಾವಸ್ತುವು ಬಳಸುವ ಭಾಷೆಯಲ್ಲಿ ನುಡಿಯಲ್ಲಿ ವ್ಯತ್ಯಾಸಗಳನ್ನು ಗಮನಿಸಬಹುದು. ಇದರಿಂದಲೇ ಕಾಳಿದಾಸನ ಅಭಿಜ್ಞಾನ ಶಾಕುಂತಲ ನಾಟಕವು ಕಾಲದಿಂದ ಕಾಲಕ್ಕೆ ಮರುರೂಪ ಪಡೆಯುತ್ತಲೇ ಬಂದಿರುವುದನ್ನು ಗ್ರಹಿಸಬಹುದಾಗಿದೆ.

**ಸಿ.ಪಿ.ಕೆ. ಹತ್ತು ಸಂಸ್ಕೃತ ನಾಟಕಗಳು**

ಡಾ.ಸಿ.ಪಿ.ಕೆ.ಯವರ ಅಭಿಜ್ಞಾನ ಶಾಕುಂತಲ ನಾಟಕದ ಬಗ್ಗೆ ಲೇಖಕರೇ ಹೇಳಿರುವಂತೆ ಈ ನಾಟಕಾನುವಾದ ಹೊಸ ಕಾಲದ ಅಗತ್ಯಗಳಿಗೆ ಅನುಗುಣವಾದದ್ದು. ಆದರೆ ಹೊಸಗನ್ನಡವನ್ನು ಹೊಸ ಲಯವನ್ನು ಬಳಸಿಕೊಂಡು ಬರೆದಿದ್ದೇನೆ ಹಾಗೂ ಅಭಿಜ್ಞಾನ ಶಾಕುತಲ ನಾಟಕಕ್ಕೆ ಪ್ರಸ್ತಾವನೆ ಬರೆದಿಲ್ಲವೆಂದು ತಮ್ಮ ಮುನ್ನುಡಿಯಲ್ಲಿ ಹೇಳಿಕೊಂಡಿದ್ದಾರೆ.

ಅಭಿಜ್ಞಾನ ಶಾಕುಂತಲ ನಾಟಕದ ಕೊನೆಯಲ್ಲಿ ಮಾರೀಚರು ದುಷ್ಯಂತನಿಗೆ ಇನ್ನೇನು ಪ್ರಿಯವನ್ನು ಮಾಡಲಿ ಎಂದ ಕೇಳಿದಾಗ ರಾಜನಾದವನು ಪ್ರಿಯವಾದವಳು ದೊರಕಿದ ಮೇಲೆ ಇನ್ನೇನು ಬೇಕು. ಆದರೂ ಪೂಜ್ಯರು ಪ್ರಿಯವನ್ನೆಸಗ ಬಯಸುವುದಾದರೆ, ಇದನ್ನು ನಡೆಸಲಿ.

"ದೊರೆಗಳು ತೊಡಗಲಿ ಪ್ರಜೆಗಳ ಹಿತದಿ;

ಮನ್ನಣೆಗೊಳ್ಳಲಿ ಪ್ರಾಜ್ಞರ ವಾಣಿ

ಪರಿಗತ ಶಕ್ತಿಯ ಸ್ವಯಂಭು ಶಿವನು

ನನಗೂ ಕಳೆಯಲಿ ಮರುಜನ್ಮವನು".[೩೩]

ಎಂದು ಹೀಗೆ ನಾಟಕದ ಮುಕ್ತಾಯವಾಗುವುದು. ಈ ವಿಧಾನ ಉತ್ತಮವಾಗಿದೆ ಎನ್ನಿಸುತ್ತದೆ.

ಸಿ.ಪಿ.ಕೆ.ಯವರು ಅಭಿಜ್ಞಾನ ಶಾಕುಂತಲ ನಾಟಕವನ್ನು ಗದ್ಯ ಪದ್ಯಗಳಲ್ಲಿ ಅನುವಾದಿಸಿದ್ದಾರೆ. ಮುಖ್ಯವಾಗಿ ಈ ಕೆಳಗಿನಂತೆ ನೋಡಬಹುದಾಗಿದೆ.

ಉದಾಹರಣೆ : (ಪು.ಸಂ. ೨೨೫)

"ಸೂತ : (ಕೇಳಿ, ನೋಡಿ) ಆಯುಷ್ಮಂತ, ನಿನ್ನ ಬಾಣದ ಅಳತೆಯೊಳಗಿರುವ ಈ ಜಿಂಕೆಗೂ ನಮಗೂ ನಡುವೆ ತಪಸ್ವಿಗಳು ನಿಂತರಲ್ಲ !

ರಾಜ : (ಗಾಬರಿಯಿಂದ) ಹಾಗಿದ್ದರೆ, ಕಡಿವಾಣಗಳನ್ನು ಬಿಗಿ ಹಿಡಿ.

ಸೂತ : ಹಾಗೆಯೇ ಆಗಲಿ (ರಥವನ್ನು ನಿಲ್ಲಿಸುವನು)

(ಬಳಿಕ ವೈಖಾನಸನೊಬ್ಬ ಇನ್ನಿಬ್ಬರೊಡನೆ ಪ್ರವೇಶಿಸುವನು). (ಪು.ಸಂ. ೨೨೬)

ವೈಖಾನಸ : (ಕೈಯೆತ್ತಿ) ಅಯ್ಯಾ ರಾಜ! ಇದು ಆಶ್ರಮದ ಮೃಗ, ಕೊಲ್ಲತಕ್ಕದಲ್ಲ!

ಬೇಡ ಬೇಡ ಬಾಣದೆಸೆಗೆ ಮಿಗದ ಮಿದುಶರೀರದಿ,

ಹೂವಿನೊಂದು ರಾಶಿಯಲ್ಲಿ ಬೆಂಕಿ ಬೀಳುವಂದದಿ!

ಎಲ್ಲಿ ಬಹಳ ಚಂಚಲತೆಯಾನಾಂತ ಮೃಗದ ಜೀವಿತ!

ಎಲ್ಲಿ ಸಿಡಿಲಿನಂತೆ ಭರದಿ ಬೀಳ್ವ ನಿನ್ನ ಸಾಯಕ?

ಗುರಿಯಿಟ್ಟು ಚೆನ್ನಾಗಿ ಹೂಡಿರುವ ಬಾಣವನು ನೀನೀಗ ಇಳುಹು.

ಶಸ್ತ್ರ ನಿನ್ನದು ಆರ್ತರಕ್ಷಣೆಗೆ, ಕೊಲಲಲ್ತು ತಪ್ಪಿಲ್ಲದರನು.

ರಾಜ : ಇದೋ ಇಳುಹಿದೆ. (ಅಂತೆಯೆ ಮಾಡುವನು)

ವೈಖಾನಸ : ಪುರುವಂಶ ಪ್ರದೀಪನಾದ ನಿನಗಿದು ತಕ್ಕದು. ಇಂತಹ ಗುಣವನ್ನುಳ್ಳ ಚಕ್ರವರ್ತಿ ಪುತ್ರನನ್ನು ಪಡೆ.

ಇತರರು : (ತೋಳೆತ್ತಿ) ಎಲ್ಲ ರೀತಿಯಿಂದಲೂ ಚಕ್ರವರ್ತಿ ಪುತ್ರನನ್ನು ಪಡೆ.

ರಾಜ : (ನಮಸ್ಕರಿಸಿ) ಪರಿಗ್ರಹಿಸಿದೆ".[೩೪]

ಹೀಗೆ ಸಿ.ಪಿ.ಕೆ.ಯವರು ಕನ್ನಡದಲ್ಲಿ ಅಭಿಜ್ಞಾನ ಶಾಕುಂತಲ ನಾಟಕವನ್ನು ಭಾಷಾಂತರಿಸಿದ್ದಾರೆ.

**ಎಸ್.ವಿ.ಪರಮೇಶ್ವರ ಭಟ್ಟ**

ಇವರು ಬರೆದಿರುವ 'ಕನ್ನಡ ಅಭಿಜ್ಞಾನ ಶಾಕುಂತಳ' ಎಂಬ ನಾಟಕವನ್ನು ೧೯೫೮ರಲ್ಲಿ ಕನ್ನಡಕ್ಕೆ ಅನುವಾದಿಸಿದ್ದಾರೆ. ನಾಟಕದ ಅರಿಕೆಯಲ್ಲಿ ತಾವು ಅನುವಾದದ ಬಗೆ ಹೇಳಿಕೊಂಡಿರುತ್ತಾರೆ. ಕಾಳಿದಾಸ ಮಹಾಕವಿಯ ಅಭಿಜ್ಞಾನ ಶಾಕುಂತಳದ ಅನುವಾದದೊಂದಿಗೆ ಆತನ ಎಲ್ಲ ಕೃತಿಗಳನ್ನು ಕನ್ನಡಿಸುವ ಈ ಯತ್ನ ಮುಗಿದಿದೆ. ಭಗವತ್ ಕೃಪೆಯೂ ಗುರುಕರುಣೆಯೂ ಇಲ್ಲದಿದ್ದರೆ ನನ್ನಿಂದ ಇದು ಎಂದಿಗೂ ಸಾಧ್ಯವಾಗುತ್ತಿರಲಿಲ್ಲ. ೧೯೪೨ರ ಆಗಸ್ಟ್ ತಿಂಗಳಿನಲ್ಲಿ ಮೇಘದೂತವನ್ನು ಕನ್ನಡಿಸ ತೊಡಗಿದಂದು ಆರಂಭವಾದ ಈ ಅನುವಾದ ಕಾರ್ಯ ೧೯೫೮ರ ಆಗಸ್ಟ್ ತಿಂಗಳ ವೇಳೆಗೆ ಮುಗಿಯಿತು. ಸ್ವಾತಂತ್ರ್ಯದ ಹೋರಾಟದ ದಿನಗಳಲ್ಲಿ ಆರಂಭವಾದ ಕೆಲಸ ಸ್ವರಾಜ್ಯ ಸಿದ್ಧಿಯ, ಸರ್ವೋದಯ ಸಾಧನೆಯ ಈಗಿನ ದಿನಗಳಲ್ಲಿ ಪೂರೈಸಿರುವುದು ನನಗೆ ತುಂಬ ಸಮಾಧಾನವನ್ನು ಉಂಟುಮಾಡಿದೆ. ಕೃತಿಗೆ ಸಹಾಯ ಮಾಡಿದವರನ್ನು ಸ್ಮರಿಸಿದ್ದಾರೆ.

ಭಾಷಾಂತರಕಾರರು ಹೇಳಿರುವಂತೆ, ಸಹೃದಯ ಕನ್ನಡಿಗರ ಮಡಿಲಿಗೆ ಈ ಕೃತಿಯನ್ನು ತುಂಬಿ ನಾನು ಇನ್ನು ಹಿಂದೆ ಸರಿಯುತ್ತೇನೆ. ಕಾರಣವೇನೆಂದರೆ ನನ್ನ ವಯಸ್ಸು ಮುಗಿಯುತ್ತಾ ಬಂದಿದ್ದರಿಂದ ಈ ಮೇಲಿನ ಮಾತನ್ನು ಹೇಳಿಕೊಂಡಿದ್ದೇನೆ. ಹಾಗೆಯೇ ಮುಂದುವರಿದು ಇನ್ನೊಂದು ಮಾತನ್ನು ಹೇಳುತ್ತಾರೆ.

"ಕೇವಲ ನಿಮಿತ್ಯ ನಾನೆನ್ನೊಳೊಂದಿನಿಸಿಲ್ಲ ಒಲುಮೆ ಎಲ್ಲವೂ ಶ್ರೀಗುರುಕೃಪಾ ಮಹಿಮೆ ಮೇಣ್ ದೈವದೊಲುಮೆ."

ಉದಾಹರಣೆ : (ಪು.ಸಂ.೪, ೫)

"ಸೂತ : (ಆಲಿಸಿ ನೋಡಿ) ಆಯುಷ್ಮಂತ, ಇರು, ಇರು ನಿನ್ನ ಬಾಣಕ್ಕೆ ಗುರಿಯಾದ ಮೃಗಕ್ಕೆ ಎದುರಾಗಿ ಮುನಿಗಳು ಅಡ್ಡ ಬಂದರು.

ರಾಜ : (ತ್ವರೆಯಿಂದ) ಹಾಗಾದರೆ ಕುದರೆ ನಿಲ್ಲಿಸು.

ಸೂತ : ಅಪ್ಪಣೆ(ರಥ ನಿಲ್ಲಿಸುವನು)

(ಬಳಿಕ ಮೂವರು ವೈಖಾನಸರು ಬರುವರು)

ಮೂರನೆಯ ವೈಖಾನಸ : (ಕೈಯತ್ತಿ· ಮೃಗವನ್ನು ತೋರಿಸಿ)

ರಾಜ : ಇದು ಆಶ್ರಮ ಮೃಗ, ಕೊಲ್ಲತಕ್ಕದ್ದಲ್ಲ.

ಆಗದಾಗದೆಸೆಯೆ ಕಣೆಯ ಮಲ್ಲಿತೆನುವ ಹುಲ್ಲೆ ಮೈಯೊಳು

ಹೂವಿನೊಂದು ರಾಶಿಯಲ್ಲಿ ಬೆಂಕಿಯುರಿಯನಿಡುವ ತೆರೆದೊಳು

ಹುಲ್ಲೆವಿಂಡಿನೊಂದು ಲೋಲಮಪ್ಪ ಬದುಕದೆಲ್ಲಿ ನೋಡಲು

ಎಲ್ಲಿ ವಜ್ರಸಾರಮೆನಿಪ ಭರದೆ ಬರುವ ನಿನ್ನ ಕಣೆಗಳು।

ಅಂತೆ ನೆಟ್ಟನೆ ತೊಟ್ಟಬಾಣವನಿಳುಹು ನೀ ತಡಮಾಡದೆ

ದೀನರಕ್ಷಣೆಗಸ್ತ್ರವಲ್ಲದೆ ಮುಗ್ಧ ಜೀವಿಯನೆಸೆವುದೆ?

ರಾಜ : ಇದೊ ಬಾಣ ಇಳಿಸಿದೆ (ಹಾಗೆಯೇ ಮಾಡುವನು)

ವೈಖಾನಸ : ಪುರುವಂಶಪ್ರದೀಪನಾದ ನಿನಗೆ ಇದು ಸರಿ.

ಪುರುವಂಶ ಸಂಭೂತನಾದವನಿಗಿದು ಯುಕ್ತ ಕೇಳು

ಇಂಥ ಗುಣಯುತ ಚಕ್ರವರ್ತಿ ಪುತ್ರನ ಪಡೆದು ಬಾಳು.

ಉಳಿದವರು : (ಕೈ ಎತ್ತಿ) ಸರ್ವಥಾ ಚಕ್ರವರ್ತಿ ಪುತ್ರನನ್ನು ಪಡೆ.

ರಾಜ : ತಲೆಬಾಗಿ ಪರಿಗ್ರಹಿಸಿದೆ.

ನಾಟಕಕ್ಕೆ ಬೇಕಾದ ಧಾಟಿಯಲ್ಲಿ ಬಿ.ಎ. ತರಗತಿಗೆ ಪಠ್ಯಪುಸ್ತಕದ ರೂಪದಲ್ಲಿ ಶಾರದಮಂದಿರದವರು ಪ್ರಕಟಿಸಿದ್ದಾರೆ.

ನಾಟಕದ ಕೊನೆಯಲ್ಲಿ ಬರುವ ಪದ್ಯವನ್ನು ಈ ಕೆಳಗಿನಂತೆ ನೋಡಬಹುದು.(ಪು.ಸಂ.೧೧೦)

ಧರಣಿಪಾಲರು ಜನರ ಹಿತದೊಳು ತೊಡಗಲಿ
ಶ್ರುತಿವಿದೋತ್ತಮರುಕ್ತಿ ಮನ್ನಣೆವಡೆಯಲಿ
ಶಕ್ತಿಯೊಡವೆರೆದಾ ಸ್ವಯಂಭು ಮಹೇಶನು
ತೊಡೆದು ಕಳೆಯಲಿ ನನಗುಮಾ ಮರುಹುಟ್ಟನು”.[೩೫]

ತೆರೆ ಬೀಳುವುದು. ಹೀಗೆ ಒಂದೇ ಭಾವವನ್ನು ಹೇಳುವ ಅನುವಾದಗಳಲ್ಲಿ ಪದಗಳು ಬಳಕೆಯಲ್ಲಿ ಭಿನ್ನವಾಗಿರುವುದನ್ನು ಪ್ರಮುಖವಾಗಿ ಗಮನಿಸಬಹುದು.

**ಮಹಾಬಲ ಸೀತಾಳಭಾವಿ. ಕಾಳಿದಾಸ ಮಹಾಕವಿಯ ಅಭಿಜ್ಞಾನ ಶಾಕುಂತಲ – ೨೦೧೩**

ಮಹಾಬಲ ಸೀತಾಳಭಾವಿಯವರ ಕಾಳಿದಾಸ ಮಹಾಕವಿಯ ಅಭಿಜ್ಞಾನ ಶಾಕುಂತಲ ಎಂಬ ನಾಟಕವನ್ನು ಕನ್ನಡಕ್ಕೆ ಅನುವಾದಿಸಿದ್ದಾರೆ. ತಮ್ಮ ನಾಟಕದಲ್ಲಿ ತಾವೆ ಹೇಳಿಕೊಂಡಂತೆ ಈ ಕೆಳಗಿನಂತೆ ವಿವರಿಸಿದ್ದಾರೆ. ಸಂಸ್ಕೃತ ಅಕ್ಷರಗಳು ಗೊತ್ತಿಲ್ಲದವರಿಗೂ ಅಭಿಜ್ಞಾನ ಶಾಕುಂತಲ ಗೊತ್ತು. ಶಕುಂತಲೆ–ದುಷ್ಯಂತರ ಕತೆ ರೋಮಾಂಚನಕಾರಿಯಾಗಿ ನೋಡುಗರ ಕೇಳುಗರ ಮನಸ್ಸಿನಲ್ಲಿ ಅಚ್ಚಳಿಯದಂತೆ ಉಳಿಯುತ್ತದೆ.

ಅಭಿಜ್ಞಾನ ಶಾಕುಂತಲದ ಮೂಲ ಭಾರತದಲ್ಲಿದೆ. ವ್ಯಾಸರ ಮಹಾಕಾವ್ಯದಲ್ಲಿ ಇದೊಂದು ಉಪ ವ್ಯಾಖ್ಯಾನ. ಆ ಸಣ್ಣಕತೆಯನ್ನಿಟ್ಟುಕೊಂಡೇ ಕಾಳಿದಾಸ ಸ್ವತಂತ್ರನಾಟಕ ರಚಿಸಿದ್ದಾನೆ. ಮಹಾಭಾರತದಲ್ಲಿ ಬರುವ ಭರತನ ಹುಟ್ಟಿಗೆ ಕಾರಣವಾದ ದುಷ್ಯಂತ ಶಕುಂತಲೆಯರು ಮಾತ್ರ ಎಲ್ಲರ ಮನ್ನಸ್ಸನ್ನು ಹೊಕ್ಕಿದ್ದಾರೆ. ಶಕುಂತಲ ನಾಟಕವು ಪ್ರಪಂಚದ ಅನೇಕ ಭಾಷೆಗಳಲ್ಲಿ ಅನುವಾದಗೊಂಡಿದೆ. ಭಾರತದ ಎಲ್ಲ ಅಧಿಕೃತ ಹಾಗೂ ಅನಧಿಕೃತ ಭಾಷೆಗಳಲ್ಲೂ ಇದರ ಅನುವಾದಗಳನ್ನು ಗಮನಿಸಬಹುದು.

ಮಹಾಬಲ ಸೀತಾಳಭಾವಿಯವರು ಶಾಕುಂತಲ ನಾಟಕವನ್ನು ಏಕೆ ಅನುವಾದಿಸಿದರು ಎಂಬುದರ ಬಗ್ಗೆ ಈ ಕೆಳಗಿನಂತೆ ವಿವರಿಸಿದ್ದಾರೆ. “ಕನ್ನಡದಲ್ಲಿ ಅನೇಕ ವಿದ್ವಾಂಸರು ಕಾಳಿದಾಸನ ಅಭಿಜ್ಞಾನ ಶಾಕುಂತಲ ನಾಟಕವನ್ನು ಅನುವಾದಿಸಿದರೂ ಸಹ ಪ್ರಸ್ತುತ ತಲೆಮಾರಿನವರಿಗೆ ಅರ್ಥವಾಗುವಂತೆ ಹೊಸಗನ್ನಡದಲ್ಲಿ ಓದಿಸಬೇಕೆಂಬ ಹಂಬಲದಿಂದ ಅನುವಾದಿಸಿದೆ” ಎಂದು ತಮ್ಮ ಮುನ್ನುಡಿಯಲ್ಲಿ ಹೇಳಿಕೊಂಡಿದ್ದಾರೆ.

ಈ ನಾಟಕದಲ್ಲಿ ಕೆಲವೊಂದು ಆಯ್ದ ಭಾಗವನ್ನು ಈ ಕೆಳಗಿನಂತೆ ತಿಳಿಯಪಡಿಸಲಾಗಿದೆ.

ಇದು ಸಂಪೂರ್ಣವಾಗಿ ಎರಡನೇ ಗದ್ಯಾನುವಾದವಾಗಿದೆ.

ಉದಾಹರಣೆ : (ಪುಟ.ಸಂ.೧೭)

“ಸಾರಥಿ : (ಕೇಳಿ, ಅತ್ತನೋಡಿ) ಆಯುಷ್ಮನ್, ಜಿಂಕೆಗೆ ಗುರಿಯಿಟ್ಟ ನಿಮ್ಮ ಬಾಣದ ದಾರಿಯ ಮಧ್ಯೆ ತಪಸ್ವಿಗಳು ಬಂದು ನಿಂತಿದ್ದಾರೆ.

ರಾಜ : (ಗಡಿಬಿಡಿಯಲ್ಲಿ) ಹಾಗಾದರೆ ಕುದುರೆಗಳನ್ನು ನಿಲ್ಲಿಸು.

ಸಾರಥಿ : ಆಗಲಿ (ರಥ ನಿಲ್ಲಿಸುತ್ತಾನೆ)

(ಮೂವರು ವೈಖಾನಸರ ಪ್ರವೇಶ)

ವೈಖಾಸನ : (ಕೈಯೆತ್ತಿ) ರಾಜನ್, ಇದು ಆಶ್ರಮದ ಜಿಂಕೆ, ಕೊಲ್ಲಬೇಡಿ ಕೊಲ್ಲಬೇಡಿ.

ಜಿಂಕೆಯ ಕೋಮಲ ಶರೀರದ ಮೇಲೆ ನಿಮ್ಮ ಬಾಣ ಹೂವುಗಳ ರಾಶಿಯಲ್ಲಿ ಬೆಂಕಿ ಬಿದ್ದಂತೆ ಬೀಳಬಾರದು. ಅತಿ ಚಂಚಲ ಹಾಗೂ ಮನೋಹರವಾದ ಹರಿಣಗಳ ಜೀವನವೆಲ್ಲಿ? ಹರಿತವಾಗಿ ಚುಚ್ಚುವ ವಜ್ರದಂತಹ ನಿಮ್ಮ ಬಾಣಗಳೆಲ್ಲಿ? ತೀಕ್ಷ್ಣ ಗುರಿಗೆ ಸಜ್ಜುಗೊಳಿಸಿರುವ ನಿಮ್ಮ ಬಾಣವನ್ನು ಹಿಂದಕ್ಕೆ ತೆಗೆದುಕೊಳ್ಳಿ. ನಿಮ್ಮಲ್ಲಿ ಶಸ್ತ್ರಗಳಿರುವುದು ಆರ್ತರ ರಕ್ಷಣೆಗಾಗಿಯೇ ವಿನಃ ನಿರಪರಾಧಿಗಳ ಮೇಲೆ ಪ್ರಯೋಗಿಸುವುದಕ್ಕಲ್ಲ.

ರಾಜ : ಇದೋ ಹಿಂತೆಗೆದುಕೊಂಡೆ.(ಹೇಳಿದಂತೆ ಮಾಡುತ್ತೇನೆ)

ವೈಖಾಸನ : ಇದು ಪುರುಕುಲ ಪ್ರದೀಪನಾದ ನಿಮಗೆ ತಕ್ಕುದಾದ ನಡೆ. ಪುರುವಿನ ವಂಶದಲ್ಲಿ ಜನಿಸಿದ ನಿಮಗೆ ಇದು ಚೆನ್ನಾಗಿ ಹೊಂದುತ್ತದೆ. ನಿಮ್ಮಂತೆಯೇ ಗುಣವಂತನಾದ, ಚಕ್ರವರ್ತಿಯ ಲಕ್ಷಣಗಳುಳ್ಳ ಮಗನನ್ನು ಪಡೆಯಿರಿ.

ರಾಜ : (ಕೈಮುಗಿದು) ಅನುಗ್ರಹೀತನಾದೆ”.[೩೬]

ಆಧುನಿಕ ಕಾಲದ ಭಾಷೆಯ ಬಳಕೆಯನ್ನು ಬಳಸಿಕೊಂಡು ಬರೆದಿದ್ದಾರೆ. ಹಾಗೂ ಇದೊಂದು ಮಾದರಿಯಲ್ಲಿ ಎಲ್ಲಾ ವರ್ಗದ ಕನ್ನಡಿಗರಿಗೂ ಅರ್ಥವಾಗುವಂತೆ ಬರೆದಿರುವುದು ಉತ್ತಮವಾಗಿದೆ. ಕೆಲವು ಅನುವಾದಕರು ಜಿಂಕೆಯ ಮೈಯನ್ನು ಹೂವಿನ ರಾಶಿ ಎಂದು ಸಹ ಅನುವಾದಿಸಿದ್ದಾರೆ.

**ಕೊನೆಟಿಪ್ಪಣಿಗಳು**

೧. ಬಸವಪ್ಪಶಾಸ್ತ್ರಿ, ಕರ್ನಾಟಕ ಅಭಿಜ್ಞಾನ ಶಾಕುಂತಲ ನಾಟಕಂ, ಮೈಸೂರು ಆಸ್ಥಾನದ ವತಿಯಿಂದ, ಬೆಂಗಳೂರು, ೧೮೮೩, ಪುಟ.೫೬

೨. ಅದೇ, ಪುಟ.೫೮

೩. ಅದೇ, ಪುಟ.೩

೪. ಅದೇ, ಪುಟ.೨೪

೫. ಕುಮಾರಚಲ್ಯ, ಬಸವಪ್ಪಶಾಸ್ತ್ರಿ, ಸಾಹಿತ್ಯ ಅಕಾಡೆಮಿ, ಬೆಂಗಳೂರು, ೨೦೧೪, ಪುಟ.೪೫

೬. ಚುರಮರಿ ಶೇಷಗಿರಿರಾಯ, ಅಭಿಜ್ಞಾನ ಶಾಕುಂತಲ ನಾಟಕಂ, ಎಜುಕೇಶನ್ ಸೊಸೈಟಿ, ಮುದ್ರಣಾಲಯ, ಮುಂಬೈ, ೧೮೭೦, ಪುಟ.೨೨೨

೭ ಅದೇ, ಪುಟ.೨೨೫

೮. ಅದೇ, ಪುಟ.೨೩೦

೯. ಅದೇ, ಪುಟ.೧

೧೦. ಅದೇ, ಪುಟ.XIX, ಮುನ್ನುಡಿ

೧೧. ಅದೇ, ಪುಟ.೬

೧೨. ಅದೇ, ಪುಟ.೫

೧೩. ಬಸವಪ್ಪಶಾಸ್ತ್ರಿ, ಕರ್ನಾಟಕ ಅಭಿಜ್ಞಾನ ಶಾಕುಂತಲ ನಾಟಕಂ, ಮೈಸೂರು ಆಸ್ಥಾನದ ವತಿಯಿಂದ, ಬೆಂಗಳೂರು, ೧೮೮೩, ಪುಟ.೩

೧೪. ಅದೇ, ಪುಟ.೯

೧೫. ಅದೇ, ಪುಟ.೧೮

೧೬. ಅದೇ, ಪುಟ.೨೫

೧೭. ಅದೇ, ಪುಟ.೩೯

೧೮. ಅದೇ, ಪುಟ.೪೧

೧೯. ಅದೇ, ಪುಟ.೪೮

೨೦. ಅದೇ, ಪುಟ.೩

೨೧. ಅದೇ, ಪುಟ.೫೪

೨೨. ಅದೇ, ಪುಟ.೫೬

೨೩. ಅದೇ, ಪುಟ.೬೦

೨೪. ಅದೇ, ಪುಟ.೬೦

೨೫. ಅದೇ, ಪುಟ.೫೭

೨೬. ಅದೇ, ಪುಟ.೧೦೦

೨೭. ಅದೇ, ಪುಟ.೧೦೬

೨೮. ಕುಮಾರಚಲ್ಯ, ಬಸವಪ್ಪಶಾಸ್ತ್ರಿ, ಸಾಹಿತ್ಯ ಅಕಾಡೆಮಿ, ೨೦೦೪, ಪುಟ.೫೫

೨೯. ಬಸವಪ್ಪಶಾಸ್ತ್ರಿ, ಕರ್ನಾಟಕ ಅಭಿಜ್ಞಾನ ಶಾಕುಂತಲ ನಾಟಕಂ, ಮೈಸೂರು ಆಸ್ಥಾನದ ವತಿಯಿಂದ, ಬೆಂಗಳೂರು, ೧೮೮೩, ಪುಟ.೫

೩೦. ಕೃಷ್ಣಪ್ಪ ಬಿ., ಶಾಕುಂತಲ ಗದ್ಯಾನುವಾದ, ಜಿ.ಟಿ.ಎ. ಮುದ್ರಣಾಲಯ, ಮೈಸೂರು, ೧೯೨೨, ಪುಟ.೬

೩೧. ಪಾಂಡುರಂಗಿ ಕೆ.ಟಿ., ಅಭಿಜ್ಞಾನ ಶಾಕುಂತಲಂ, ಪಠ್ಯಪುಸ್ತಕಮಾಲೆ, ಪ್ರಸಾರಾಂಗ, ಬೆಂಗಳೂರು ವಿಶ್ವವಿದ್ಯಾಲಯ, ಬೆಂಗಳೂರು, ೧೯೭೮, ಪುಟ.೧೦೬–೧೦೭

೩೨. ಪ್ರಹ್ಲಾದ್ ಮುದ್ಗಲ್, ಅಭಿಜ್ಞಾನ ಶಾಕುಂತಲ ನಾಟಕವು ಕನ್ನಡ ವಿಭಾಗ ಮುಂಬಯಿ, ೧೯೯೫, ಪುಟ.೫

೩೩. ಸಿ.ಪಿ.ಕೆ., ಹತ್ತು ಸಂಸ್ಕೃತ ನಾಟಕಗಳು, ಶಾಕುಂತಲಾ ನಾಟಕ, ೨೦೧೦, ಪುಟ.೨೨೪

೩೪. ಅದೇ, ಪುಟ.೨೨೫–೨೨೬

೩೫. ಪರಮೇಶ್ವರ ಭಟ್ಟ, ಕನ್ನಡ ಅಭಿಜ್ಞಾನ ಶಾಕುಂತಳ, ಶಾರದ ಮಂದಿರ, ರಾಮಯ್ಯ ರಸ್ತೆ, ಮೈಸೂರು, ೧೯೮೩, ಪುಟ.೪–೫

೩೬. ಮಹಾಬಲ ಸೀತಾಳಭಾವಿ, ಕಾಳಿದಾಸ ಮಹಾಕವಿಯ ಅಭಿಜ್ಞಾನ ಶಾಕುಂತಲ, ಮೈಸೂರು, ೨೦೧೩, ಪುಟ.೧೭

ಅಧ್ಯಾಯ ಐದು

# ಶಾಕುಂತಲ ನಾಟಕದ ಅಂತಃಸಂಜ್ಞಾ ಭಾಷಾಂತರಗಳು

ಅಧ್ಯಾಯ ಐದು

# ಶಾಕುಂತಲ ನಾಟಕದ ಅಂತರ್‌ಸಂಜ್ಞಾ ಭಾಷಾಂತರಗಳು

(ಚಿತ್ರಕಲೆ, ಮರದ ಕೆತ್ತನೆಗಳು ಮತ್ತು ಸಿನಿಮಾ, ಇತ್ಯಾದಿ)

**ಚಿತ್ರಕಲೆ:** ಕಾಳಿದಾಸನು ತನ್ನ ಅಭಿಜ್ಞಾನ ಶಾಕುಂತಲಾ ನಾಟಕದಲ್ಲಿ ಚಿತ್ರಕಲೆಯ ಹಲವಾರು ಸುಳಿವುಗಳನ್ನು ನೀಡಿದ್ದಾನೆ. ಕಾಲಕಾಲಕ್ಕನುಗುಣವಾಗಿ ಅಭಿಜ್ಞಾನ ಶಾಕುಂತಲದ ನಾಟಕ ಕನ್ನಡ ಸಾಹಿತ್ಯದಲ್ಲಿ ಭಾಷಾಂತರವಾಗಿದ್ದು, ಜೊತೆ ಜೊತೆಗೆ ಚಿತ್ರಕಲೆಯಲ್ಲಿ ತನ್ನ ವ್ಯಾಪ್ತಿಯನ್ನು ವಿಸ್ತರಿಸಿಕೊಂಡಿದೆ. ನನ್ನ ಅಧ್ಯಯನದಲ್ಲಿ ಕಂಡುಬರುವ ಅಭಿಜ್ಞಾನ ಶಾಕುಂತಲ ನಾಟಕದ ಕಥಾವಸ್ತುವಿಗೆ ಸಂಬಂಧಿಸಿದಂತೆ ಇದುವರೆಗೂ ಬಂದಿರುವ ಚಿತ್ರಗಳನ್ನು ಕ್ರೋಡೀಕರಿಸಿ ಅಧ್ಯಯನದಲ್ಲಿ ತೊಡಗಿಸಿಕೊಳ್ಳಲಾಗಿದೆ. ಅವುಗಳನ್ನು ಈ ಕೆಳಗಿನಂತೆ ವಿವರಿಸಲಾಗಿದೆ.

**ಅಂತರ್‌ಸಂಜ್ಞಾ ಭಾಷಾಂತರ**

ಅಂತರ್‌ಸಂಜ್ಞಾ ಎನ್ನುವುದೇ ಸಾಹಿತ್ಯ, ಚಲನಚಿತ್ರ, ಮತ್ತು ಚಿತ್ರಕಲೆ ಈ ಮೂರು ಸಂಜ್ಞಾ ವ್ಯವಸ್ಥೆಯ ನಡುವೆ ನಡೆಯುವಂತಹ ಪ್ರಕ್ರಿಯೆ. ಅದು ಸಿನಿಮಾ, ಸಂಗೀತ, ಚಿತ್ರಕಲೆ ಸಾಹಿತ್ಯ ಕೃತಿಯೊಂದಿಗೆ ಏರ್ಪಡುವಂತಹ ಕ್ರಿಯೆಯಾಗಿರುತ್ತದೆ. ಇದನ್ನು ಮುಖ್ಯವಾಗಿ ಸೂಚಿತ ಸೂಚಕ ಎಂದು ವರ್ಗೀಕರಿಸಿಕೊಂಡು ಇದರಲ್ಲಿ ಪ್ರವೇಶ ಮಾಡುವುದು ಸೂಕ್ತ.

ಭೌತಿಕ ದೃಶ್ಯಗಳನ್ನು ಕಟ್ಟಿಕೊಡುವ ಚಲನಚಿತ್ರ ಮಾಧ್ಯಮ ಹಾಗೂ ಅಕ್ಷರ ರೂಪದಲ್ಲಿ ಕಟ್ಟಿಕೊಡುವ ಸಾಹಿತ್ಯ ಮಾಧ್ಯಮವು ಈ ಎರಡು ಕೂಡ ಸಂಜ್ಞಾವ್ಯವಸ್ಥೆಯೇ ಆಗಿವೆ. ಈ ಸಂಜ್ಞಾ ವ್ಯವಸ್ಥೆಯನ್ನು ಅಧ್ಯಯನಕ್ಕೆ ಅಳವಡಿಸಿ ಅದರ ಉದ್ದ ಅಗಲವನ್ನು ನೋಡುವ ಪ್ರಯತ್ನವೇ ಅಂತರ್‌ಸಂಜ್ಞಾ ಭಾಷಾಂತರ.

ಭಾಷಾಂತರ ಪ್ರಕ್ರಿಯೆ ಕೇವಲ ಅಕ್ಷರಗಳ ನಡುವೆ ನಡೆಯುವ ಅನುವಾದ ಅಷ್ಟೇ ಆಗಿರದೇ ಅದರ ವಿಸ್ತಾರವನ್ನು ಅಧಿಕಗೊಳಿಸುತ್ತದೆ. ಅಕ್ಷರ ಪಠ್ಯವನ್ನು, ಸಿನಿಮಾವನ್ನು, ಚಿತ್ರಕಲೆಯ ಮೂಲಕ ಅಭಿವ್ಯಕ್ತಿಸುವುದು ಕೂಡ ಭಾಷಾಂತರ ಪ್ರಕ್ರಿಯೆಗೆ ಒಳಪಡುತ್ತದೆ.

ಕವಿರತ್ನ ಕಾಳಿದಾಸ ಸಿನಿಮಾವನ್ನು ನಿರ್ದೇಶಿಸುವಲ್ಲಿ ನಿರ್ದೇಶಕ ತೆಗೆದುಕೊಳ್ಳುವಂತಹ ಕಷ್ಟವನ್ನು ಆ ಚಿತ್ರದ ಯಶಸ್ಸಿನಲ್ಲಿ ಕಾಣಬಹುದು. ಆತನು ತಯಾರು ಮಾಡಿಕೊಳ್ಳುವಂತಹ

ಚಿತ್ರಕಥೆ, ಹಾಡುಗಳು, ಸಂಗೀತ ನಿರ್ದೇಶಕರು, ಸನ್ನಿವೇಶಗಳು, ವೇಷಭೂಷಣಗಳು ಸಮಯ ಸಂದರ್ಭಗಳು ಬಹಳ ಮುಖ್ಯವಾಗುತ್ತವೆ. ಸಾಹಿತ್ಯ ಕೃತಿಗೆ ಇರುವಂತಹ ಜೀವ ಒಂದು ಸಿನಿಮಾಕ್ಕೂ ಇರುತ್ತದೆ. ಈ ಎರಡು ಅಂತರಗಳ ದೂರಗೊಳಿಸುವ ಪ್ರಯತ್ನವಾಗಿ ಎರಡರ ಮಧ್ಯೆ ಅಂತರ್‌ಸಂಬಂಧವನ್ನು ಏರ್ಪಡಿಸುವುದು ಅಂತರ್‌ಸಂಜ್ಞಾ ಭಾಷಾಂತರದ ಉದ್ದೇಶವಾಗಿದೆ.

ಭಾಷಾಂತರ ಹೊಂದುವ ಕೃತಿ, ಪ್ರಯೋಗಗಳು ಸಮಕಾಲೀನ ಸಾಂಸ್ಕೃತಿಕ ಅಂಶಗಳ ಬಗ್ಗೆ ಒಲವುಗಳನ್ನು ತೋರಿಸುತ್ತವೆ. ಇದೊಂದು ರೀತಿಯಲ್ಲಿ ಮರುಹುಟ್ಟು ಪಡೆಯುವ ಪ್ರಕ್ರಿಯೆಯಾಗಿದೆ.

ಮೂಲ ಭಾಷೆಯಾಗಿ ನಾಟಕ ಪಠ್ಯ. ಉದ್ದಿಷ್ಟ ಭಾಷೆಯಾಗಿ ಸಿನಿಮಾ ಭಾಷಾಂತರದ ಸಂದರ್ಭಕ್ಕೆ ಮೂಲ ಕೃತಿ ಯಾವಾಗಲಾದರೂ ಹುಟ್ಟಿರಬಹುದು. ಆದರೆ ಉದ್ದಿಷ್ಟ ಭಾಷೆಗೆ ಭಾಷಾಂತರಿಸುವಾಗ ಆ ಕಾಲದ ಪ್ರಸ್ತುತತೆ ಅಥವಾ ವರ್ತಮಾನ ಬಹಳ ಮುಖ್ಯವಾಗುತ್ತದೆ. ಕಥಾವಸ್ತು ಕಾಲಾತೀತವಾಗಿರುತ್ತದೆ. ಸಿನಿಮಾಕ್ಕೂ, ಸಾಹಿತ್ಯಕ್ಕೂ, ಚಿತ್ರಕಲೆಗೂ ಮಾನವನೇ ಕೇಂದ್ರ ಬಿಂದುವಾಗಿರುತ್ತಾನೆ.

ಸಂಸ್ಕೃತಿಯನ್ನು, ಸಮಾಜವನ್ನು, ಕಲೆ, ಸಾಹಿತ್ಯ, ಸಂಗೀತ ಎಲ್ಲವನ್ನು ಒಟ್ಟಾರೆಯಾಗಿ ಬಳಸಿಕೊಳ್ಳುವುದು ಕಲಾವಿದ, ಸಂಗೀತಗಾರ ಹಾಗೂ ಲೇಖಕನ ನಡುವೆ ಭಾಷಾಂತರ ಪ್ರಕ್ರಿಯೆ ನಡೆದರೂ ಸಹ ಅದು ಒಂದು ಮಿತಿಯನ್ನು ಪಡೆದುಕೊಳ್ಳುತ್ತದೆ. ಕಲಾವಿದನ ಚಿತ್ರಕ್ಕೆ ಚಲನೆಯಿಲ್ಲದಿರಬಹುದು. ಸಂಗೀತಗಾರನ ಸಂಗೀತಕ್ಕೆ ಎಲ್ಲಾ ಭಾವನೆಗಳನ್ನು ಒಂದು ಕಥನ ರೂಪದಲ್ಲಿ ಕೊಡದೆ ಹೋಗಬಹುದು. ಲೇಖಕನು ಕೃತಿಯ ಮೂಲಕ ಅಮೂರ್ತ ಚಿತ್ರವನ್ನು ಕೊಡಬಹುದು. ಆದರೆ ಸಿನಿಮಾ ಮಾಧ್ಯಮ ಅವೆಲ್ಲವುಗಳ ಕೊರತೆಯನ್ನು ತುಂಬಬಹುದು. ಏಕೆಂದರೆ ಸಿನಿಮಾ ಮಾಧ್ಯಮ ದೃಶ್ಯಕಾವ್ಯ ಹಾಗೂ ಶ್ರವ್ಯಕಾವ್ಯ ಎರಡೂ ಆಗಿರುವುದರಿಂದ ಹಾಗೂ ಕೃತಿಯಿಂದ ಸಿನಿಮಾ ಮಾಧ್ಯಮಕ್ಕೆ ಅಂತರ್‌ಸಂಬಂಧ ಸೃಷ್ಟಿಯಾದಾಗ ಅಂತರ್‌ಸಂಜ್ಞಾ ಭಾಷಾಂತರವಾಗುತ್ತದೆ. ಮುಖ್ಯವಾಗಿ ಕಥೆಗೆ ಪೂರಕವಾದ ಪರಿಸರ, ಕಲಾವಿದರು, ವಸ್ತ್ರವಿನ್ಯಾಸಕರು, ಧ್ವನಿಸಂಯೋಜಕರು, ವರ್ಣವಿನ್ಯಾಸ, ಹೀಗೆ ಸಾಮೂಹಿಕ ಶಕ್ತಿ ಒಂದು ಸಿನಿಮಾದಲ್ಲಿ ಅಡಕವಾಗಿರುತ್ತದೆ.

ನೋಡುಗರಿಗೆ ಹಿತವಾಗುವಂತೆ ನವೀನ ಭಾವ ಮೂಡುವಂತೆ ಹೊಸ ಹೊಸ ಸನ್ನಿವೇಶಗಳ ಸೃಷ್ಟಿಯು ಬಹಳ ಮುಖ್ಯವಾಗುತ್ತದೆ. ಅಂತರ್‌ಸಂಜ್ಞಾ ವ್ಯವಸ್ಥೆಯು ಸಮುದಾಯಗಳ ಸಂಕೇತವಾಗಿರುತ್ತದೆ.

**ಚಿತ್ರಕಲೆ–ಸಾಹಿತ್ಯ**

"ಎಲ್ಲಾ ಕಲೆಗಳ ಮೂಲ ಉದ್ದೇಶ ಸಂವಹನವೇ. ಆದರೆ ಸಾಹಿತ್ಯ ಕೃತಿ ಜನರಿಗೆ ತಲುಪಿಸುವಂತೆ ಚಿತ್ರಕಲೆ ತಲುಪುವುದಿಲ್ಲ ಎಂಬ ಅಭಿಪ್ರಾಯವಿದೆ. ಆದ್ದರಿಂದ ಸಾಕಷ್ಟು ದೂರ ಇರುವುದಕ್ಕೆ ಅದರ ಅಭಿವ್ಯಕ್ತಿ ಮಾಧ್ಯಮದ ನೆಲೆಯಲ್ಲಿ ಇರುವ ಮಿತಿಗಳು ಕಾರಣ. ಸಾಮಾನ್ಯವಾಗಿ ಮಾನವನ ಮಾನಸಿಕ ಕಾರ್ಯವೃತ್ತಿಗಳನ್ನು ಮೂರು ಭಾಗಗಳಲ್ಲಿ ವಿಂಗಡಿಸಬಹುದು. ಒಂದು ಬುದ್ಧಿ ಅಥವಾ ವಿಚಾರ, ಎರಡು ಇಷ್ಟ, ಇಚ್ಛೆ ಮೂರು ಭಾವನೆಯು ಮುಖ್ಯ."[೧]

ಹೀಗೆ ಮೂರು ರೀತಿಯಲ್ಲಿ ಕಲೆ ಅಭಿವ್ಯಕ್ತಿಸುತ್ತದೆ. ಇಲ್ಲಿ ಭಾವನೆಯು ಬಹಳ ಮುಖ್ಯವಾಗುತ್ತದೆ. ಮನುಷ್ಯ ತಮ್ಮ ಅನಿಸಿಕೆಗಳನ್ನು ಅಭಿವ್ಯಕ್ತಿಸುವ ಕ್ರಮ ಬಹಳ ಮುಖ್ಯವಾಗಿದೆ. ಉದ್ವೇಗದಿಂದ ಬಿಡುಗಡೆ ಹೊಂದಬೇಕು ಎನ್ನುವ ಆಕಾಂಕ್ಷೆ ಎಲ್ಲರಲ್ಲೂ ಇರುತ್ತದೆ. ಆದರೆ ಆ ಅನುಭವಗಳು ಪ್ರಜ್ಞೆಯ ವಸ್ತು ಆದಾಗ ಅದು ಮಹತ್ವದ್ದಾಗುತ್ತದೆ. ಆದ್ದರಿಂದ ಮನುಷ್ಯ ಸಂವಹನದ ಸಾಧ್ಯತೆಗಳಾಗಿ ಅನೇಕ ಪ್ರಕಾರಗಳನ್ನು ಕಂಡುಕೊಂಡನು. ವಿಶೇಷವಾದ ಮಾಧ್ಯಮಗಳ ಮೂಲಕ ತನ್ನ ಅನುಭವಗಳನ್ನು ಹೊರಹಾಕುವ ಕೌಶಲ್ಯವನ್ನು ಪಡೆದುಕೊಂಡ. ಹೀಗೆ ತನ್ನ ಅನುಭವಗಳನ್ನು ಶಬ್ದಗಳ ಮೂಲಕ ಅಭಿವ್ಯಕ್ತಿಸುವವನು ಕವಿಯಾದರೆ, ವರ್ಣ, ರೇಖೆಗಳ ಮೂಲಕ ಹೊರಹಾಕುವವನು ಚಿತ್ರಕಲೆಗಿಂತ ಸಾಹಿತ್ಯ ಕೃತಿಯು ಉತ್ತಮವಾದುದು. ಸಾಹಿತ್ಯ ಭಾಷೆಯಿಂದ ಅಭಿವ್ಯಕ್ತಿಸಿದರೆ, ಚಿತ್ರಕಾರ ತನ್ನ ರೇಖೆಯಿಂದ ಬಣ್ಣಗಳಿಂದ ಭಾವನೆ ನೀಡುತ್ತಾನೆ. ಸಾಹಿತ್ಯ ಕೃತಿಯಲ್ಲಿ ಅದೇ ಭಾಷೆಯನ್ನು ಬಳಸಿಕೊಂಡು ಬರೆದರೆ, ಚಿತ್ರಕಲೆ ಪರಿಸ್ಥಿತಿಗೆ ತಕ್ಕಂತೆ ಅದರ ಅರ್ಥ ಬದಲಾಗುತ್ತಾ ಹೋಗುತ್ತದೆ.

ಸಾಹಿತ್ಯ ಕೃತಿಗೆ ಒಂದು ನಿಘಂಟು ಇದೆ. ಆದರೆ ಚಿತ್ರಕಲೆಗೆ ಯಾವುದೂ ಇಲ್ಲ. ಸಾಹಿತ್ಯ ಕೃತಿಗೂ ಚಿತ್ರಕಲೆಗೂ ಸಾಕಷ್ಟು ಭಿನ್ನತೆಯಿದೆ. ಆದರೆ ಸಂವಹನ ಬಹಳ ಮುಖ್ಯವಾಗಿರುತ್ತದೆ.

**ಅಭಿಜ್ಞಾನ ಶಾಕುಂತಲಾ ನಾಟಕದಲ್ಲಿ ಬರುವ ಚಿತ್ರಗಳು**

೧. ಶಾಕುಂತಲೆ ಮತ್ತು ಸಖಿಯರೊಂದಿಗೆ ನೀರು ತರುವ ಚಿತ್ರ

೨. ಶಾಕುಂತಲೆಯು ಗಿಡಗಳಿಗೆ ನೀರು ಹಾಕುವಾಗ ದುಂಬಿ ಕಚ್ಚುವ ಚಿತ್ರ

೩. ಶಾಕುಂತಲೆ ವಿರಹದಿಂದ ದುಷ್ಯಂತನಿಗೆ ಪ್ರೇಮಪತ್ರ ಬರೆಯುವ ಚಿತ್ರ

೪. ದುಷ್ಯಂತನು ಶಕುಂತಲೆಯ ರೂಪಕ್ಕೆ ಮಾರು ಹೋಗಿ ಈಕೆ ಯಾರು ಎಂದು ಕೇಳುವ ಚಿತ್ರ

೫. ಕಣ್ವಮಹಾಋಷಿಯ ಆಶ್ರಮದಿಂದ ಶಕುಂತಲೆಯು ದುಷ್ಯಂತನ ಆರಮನೆಗೆ ಹೋಗುವ ಚಿತ್ರ

೬. ಕಣ್ವಮಹಾಋಷಿಯ ಆಶ್ರಮದಲ್ಲಿ ಶಕುಂತಲೆ ಗಂಡನ ಮನೆಗೆ ಹೋಗುವಾಗ ಜಿಂಕೆ ಸೆರಗು ಹಿಡಿದಿರುವ ಚಿತ್ರ

೭. ಶಕುಂತಲೆ ದುಷ್ಯಂತನ ಅರಮನೆಯಲ್ಲಿನ ಚಿತ್ರ(ಗೌತಮಿ, ಋಷಿಮುನಿಗಳು,)

೮. ಶಕುಂತಲೆ ಮಗನೊಂದಿಗೆ ದುಷ್ಯಂತನೊಂದಿಗಿರುವ ಚಿತ್ರ.

೯. ಶಕುಂತಲೆ ಕಣ್ವಾಶ್ರಮದಲ್ಲಿಯ ಪರಿಸರದ ಚಿತ್ರಗಳು, ಇತ್ಯಾದಿ ಚಿತ್ರಗಳು

ಕಾಳಿದಾಸನ ಅಭಿಜ್ಞಾನ ಶಾಕುಂತಲ ನಾಟಕದಲ್ಲಿ ಬರುವ ವಿವಿಧ ಸನ್ನಿವೇಶಗಳನ್ನು ಚಿತ್ರಕಲೆಯಲ್ಲಿ ಬಿಡಿಸಿರುವುದನ್ನು ಪ್ರಮುಖವಾಗಿ ಗಮನಿಸಲಾಗಿದೆ. ಈ ವಿಧಾನವೂ ಭಾಷಾಂತರ ಪ್ರಕ್ರಿಯೆಯಲ್ಲಿ ತುಂಬಾ ಉಪಯುಕ್ತವಾಗಿದೆ. ನಿಸರ್ಗ ಚಿತ್ರಣ, ಪ್ರಾಣಿ ಪಕ್ಷಿಗಳ ಚಿತ್ರಣ, ನಾಯಕ–ನಾಯಕಿಯರ ಚಿತ್ರಗಳು, ಶೃಂಗಾರ, ಸಸ್ಯಸಂಪತ್ತು, ವಿರಹದ ಮುಖಗಳು ಮುಂತಾದ ಅನೇಕ ಮಾದರಿಯ ಚಿತ್ರಗಳನ್ನು ಕಲಾವಿದರು ಬಿಡಿಸಿರುವುದನ್ನು ಈ ಅಧ್ಯಯದಲ್ಲಿ ಪ್ರಸ್ತುತಪಡಿಸಲಾಗಿದೆ. ಚಿತ್ರಕಲೆಯು ಸೃಜನಶೀಲತೆಯಿಂದ ಕೂಡಿರುತ್ತದೆ ಹಾಗೂ ಜನಸಾಮಾನ್ಯರಿಗೆ ಸುಲಭವಾಗಿ ಗ್ರಹಿಸಲು

ಒಂದು ಮಾರ್ಗ. ಆದರೆ ಇದರಲ್ಲಿಯೂ ಕಲಾವಿದನ ಜ್ಞಾನಶಾಖೆಯ ಮೇಲೆ ನಿಂತಿದೆ. ಒಂದು ಸಾಹಿತ್ಯ ಪಠ್ಯದಲ್ಲಿರುವುದನ್ನು ಚಿತ್ರಗಾರ ಜಾಣ್ಮೆಯಿಂದ ಪರದೆಯ ಮೇಲೆ ಬಿಡಿಸಿ ಅದಕ್ಕೆ ಅಲಂಕಾರ ಮಾಡಿ, ರೂಪ ನೀಡುವ ಜಾಣ್ಮೆ ಅತ್ಯಂತ ಪ್ರಮುಖವಾಗಿದೆ. ಕಾಳಿದಾಸನ ಅಭಿಜ್ಞಾನ ಶಾಕುಂತಲ ನಾಟಕದಲ್ಲಿನ ಚಿತ್ರರಚನೆಯ ಸೂತ್ರಗಳನ್ನು ವಿವರಿಸಿದ್ದಾನೆ. ವಾಸ್ತವಿಕತೆಯ ಅಗತ್ಯವನ್ನು ಒತ್ತಿ ಹೇಳಿ ದುಶ್ಯಂತನು ಶಕುಂತಲೆಯ ಭಾವಚಿತ್ರವನ್ನು ರಚಿಸಿದಾಗ ಪ್ರಕೃತಿಯನ್ನು ಹಿನ್ನೆಲೆಯಾಗಿರಿಸಿ ಅದರಲ್ಲಿ ಹಾರುತ್ತಿರುವ ದುಂಬಿಯನ್ನು ತೋರಿಸಿದ. ಈ ದುಂಬಿಯನ್ನು ಕಂಡು ವಿದೂಷಕನು ನೈಜ ದುಂಬಿ ಎಂದು ನಂಬಿ ಹೊಡೆಯಲು ಹೋದನಂತೆ. ಶಕುಂತಲೆಯನ್ನು ದುಂಬಿ ಕಚ್ಚಿದಂತೆ. ಇಷ್ಟಿದ್ದರೂ ಸಹ ಶಕುಂತಲೆಯ ಆಂತರಿಕ ಮನೋಭಾವವನ್ನು ಚಿತ್ರಿಸಲು ಸಾಧ್ಯವಾಗಲಿಲ್ಲವೆಂದು ದುಶ್ಯಂತ ಪಶ್ಚಾತ್ತಾಪ ಪಟ್ಟನಂತೆ. ಕಾಳಿದಾಸನಿಂದ ರಚಿತವಾದ ಅಭಿಜ್ಞಾನ ಶಾಕುಂತಲಾ ನಾಟಕದಲ್ಲಿ ದುಷ್ಯಂತನು ಶಾಕುಂತಲೆಯ ಚಿತ್ರವನ್ನು ಬರೆದಿರುತ್ತಾನೆ. ಅದು ಇನ್ನೂ ಅಪೂರ್ಣವಾಗಿರುವ ಕಾರಣ ಅದರಲ್ಲಿ ಇನ್ನೂ ಚಿತ್ರವಾಗದೆ ಉಳಿದಿರುವುದನ್ನೆಲ್ಲ ಚಿತ್ರಿಸುವುದಕ್ಕಾಗಿ ಅದನ್ನು ತರಿಸುತ್ತಾನೆ. ಅವನಿಗೂ ವಿದೂಷಕನಿಗೂ ಅಗೋಚರವಾಗಿ ಅಲ್ಲಿ ನಿಂತಿರುವ ಮೆನಕೆಯ ಕಡೆಯವಳಾದ ಸಾನುಮತಿಯು ಅದನ್ನು ನೋಡಿ, 'ಈ ರಾಜರ್ಷಿಯ ನಿಪುಣತೆಯು ಎಷ್ಟು ಮಟ್ಟಿಗಿದೆ! ನನ್ನ ಸಖಿಯಾದ ಶಕುಂತಲೆಯು ನನ್ನ ಮುಂದೆ ನಿಂತ್ತಿರುವಂತೆ ತೋರುತ್ತದೆ' ಎಂದು ತನ್ನಲ್ಲಿ ತಾನು ಹೇಳಿಕೊಳ್ಳುತ್ತಾಳೆ. ಆ ಬಳಿಕ ಶಕುಂತಲೆಯ ಪ್ರತಿಕೃತಿಯನ್ನು ಚಿತ್ರ ಪಟದಲ್ಲಿರುವ ದುಂಬಿಯ ಚಿತ್ರವನ್ನು ನೋಡಿ ಆ ಮೂವರು ನಿಜತ್ವದ ಭ್ರಾಂತಿಯಿಂದ ಮೈಮರೆಯುತ್ತಾರೆ. ದುಂಬಿಯನ್ನು ಓಡಿಸಬೇಕೆಂದು ದುಷ್ಯಂತನು ವಿದೂಷಕನಿಗೆ ಹೇಳುತ್ತಾನೆ. ಜನಸಾಮಾನ್ಯರನ್ನು ಶಿಕ್ಷಿಸುವ ಅಧಿಕಾರವುಳ್ಳ ರಾಜ ದುಷ್ಯಂತನೇ ಅದನ್ನು ಓಡಿಸಬೇಕೆಂದು ಅವನು ಉತ್ತರ ಹೇಳುತ್ತಾನೆ. ದುಷ್ಯಂತನು ಶಕುಂತಲೆಯನ್ನು ಕಾಡದೆ ದೂರ ಸಾಗುವಂತೆ ನಯವಾಗಿ ದುಂಬಿಗೆ ತಿಳಿಸುತ್ತಾನೆ. ಒಳ್ಳೆಯ ಮಾತುಗಳಿಗೆ ಬಗ್ಗದ ವಾಮಜಾತಿಯು ಅದೆಂದು ವಿದೂಷಕನು ಹೇಳುತ್ತಾನೆ. ರಾಜನು ಕಠಿಣವಾಗಿ ಅಜ್ಞೆ ಮಾಡಿದರೂ ದುಂಬಿಯು ದೂರ ಸರಿಯದಿದ್ದನ್ನು ಕಂಡು ಅಂತಹ ಅಪ್ಪಣೆಯಿಂದಲೂ ದುಂಬಿ ಏಕೆ ಭಯಪಡಲಿಲ್ಲವೆಂದು ವಿದೂಷಕನು ಮೊದಲು ಆಶ್ಚರ್ಯಪಟ್ಟು ಉನ್ಮತ್ತನಾದ ರಾಜನ ಸಹವಾಸದಿಂದ ತಾನು ಉನ್ಮತ್ತನಾಗಿ ತನ್ನಲ್ಲಿ ತಾನು ಹೇಳಿಕೊಂಡು ರಾಜನೊಡನೆ.

ಮಿತ್ರ! ಇದು ಚಿತ್ರವಲ್ಲವೇ ಎಂದು ಹೇಳುತ್ತಾನೆ ರಾಜನು ಏನೆಂದೆ, ಇದು ಚಿತ್ರವೇ ಎಂದು ಪ್ರಶ್ನೆ ಮಾಡುತ್ತಾನೆ. ಸಾನುಮತಿಯು ಇದುವರೆಗೆ ನಾನು(ಅದು ಚಿತ್ರವೆಂಬುದನ್ನೆ ಮರೆತು) ನಿಜವನ್ನರಿಯದೆ ಇದ್ದೆ. ಇನ್ನೂ ಚಿತ್ರವನ್ನು ಬರೆದ ಅನುಭವಿಯಾದ ಈತನ ಮಾತನ್ನು ಹೇಳಬೇಕೆ ಎಂದು ತನ್ನಲ್ಲಿ ತಾನು ಮಾತಾಡಿಕೊಳ್ಳುತ್ತಾಳೆ. ಅದುವರೆಗೂ ತಾವು ನೊಡುತ್ತಿದ್ದುದು ಚಿತ್ರವೆಂಬುದನ್ನೇ ಅವರು ಮೂವರು ಮರೆತಿರುತ್ತಾರೆ. ಅಷ್ಟುಮಟ್ಟಿನ ನಿಜತ್ವದ ಭ್ರಾಂತಿಯನ್ನುಂಟು ಮಾಡುವಂತೆ ಲಿಖಿತವಾಗಿದೆ.

"ಆ ಚಿತ್ರ! ಕಾಳಿದಾಸ ಮಹಾಕವಿಯು ಸಾನುಮತಿಯಿಂದ ಹಾಡಿಸಿರುವ **"ಅನುಭಾವಿ"** ಎಂಬ ಮಾತಿನಿಂದಲೂ ಅವನಿಗೆ ಚಿತ್ರಲೇಖನ ಕಲೆಯ ಮರ್ಮವು, ನಿಯಮಗಳು ತಿಳಿದಿದ್ದವೆಂಬುದು ವ್ಯಕ್ತವಾಗುತ್ತದೆ. ಸಮರ್ಥನಾದ ಚಿತ್ರಶಿಲ್ಪಿಯು ಚಿತ್ರವನ್ನು ಬರೆಯುವಾಗಿನ ತಾದಾತ್ಮ್ಯಭಾವದಿಂದ ಅದನ್ನು ಪರಿಶಿಲಿಸುವಾಗ ಮೈಮರೆಯಬಲ್ಲ. ಚಿತ್ರದ ಗುಣದೋಷಗಳನ್ನು ಆತ್ಮಸಂಶೋಧನೆಯಿಂದ ಅರಿಯಬಲ್ಲ **"ಅನುಭಾವಿ"**ಯಾಗಿರಬೇಕೆಂಬುದು ಕವಿಯ ಆಶಯ. ಶ್ರೀರಾಮನ ರಾಜಧಾನಿಯಾಗಿದ್ದ ಅಯೋಧ್ಯೆ ನಗರದಲ್ಲಿಯ ಮತ್ತು ಕುಬೇರನ ರಾಜಧಾನಿಯಾಗಿದ್ದ ಅಲಕಾನಗರದಲ್ಲಿಯ ಚಿತ್ರಗಳ ವಿಚಾರವನ್ನು ಕಾಳಿದಾಸನು ಸೂಚಿಸಿದ್ದಾನೆ. ಶಾಕುಂತಲದ ಆರನೆಯ ಅಂಕದಲ್ಲಿ ದುಶ್ಯಂತನು ಕಳವಳಪಟ್ಟು ಶಕುಂತಲೆ ಇನ್ನೊಮ್ಮೆಯಾದರೂ ತನ್ನ ದೃಷ್ಟಿಗೆ ಬೀಳಬಹುದೆ ಎಂದು ದುಃಖ ಪಡುತ್ತಿದ್ದಾಗ ಚತುರಿಕೆಯು ಅವಳ ಪ್ರಕೃತಿಯೊಂದನ್ನು ತೋರಿಸುವಳು. ಈ ಚಿತ್ರದ ಮುಖಾಂತರವಾಗಿ ಕಾಳಿದಾಸನು ದುಷ್ಯಂತನಿಗೆ ಶಕುಂತಲೆಯ ಪ್ರದರ್ಶನವನ್ನು ಕೂಡಲೇ ಮಾಡಿಸುತ್ತಾನೆ. ಹೃದಯ ಭಾವನೆಗಳೆಲ್ಲವನ್ನೂ ಪೂರ್ತಿಯಾಗಿ ಸೂಚಿಸುವಂತೆ ಬರೆಯಲ್ಪಟ್ಟ ಸಹಜ ಸುಂದರವಾದ ಆ ಚಿತ್ರ ಶಕುಂತಲೆಯು ತನ್ನ ಮುಂದೆ ಮೂರ್ತಿಮತ್ತಾಗಿ ನಿಂತಿರುವಳೆಂದು ಭಾವಿಸಿ ಅವಳನ್ನೇ ಉದ್ದೇಶಿಸಿ ತನ್ನ ಉನ್ಮಾದದಲ್ಲಿ ಮಾತನಾಡುತ್ತಿದ್ದ ದುಶ್ಯಂತನನ್ನು ಕಂಡರೆ ಆ ಚಿತ್ರವು ಎಷ್ಟು ಸುಂದರವಾಗಿರೆ ಬರೆಯಲ್ಪಟ್ಟಿರಬಹುದು ಎಂಬುದರ ಕಲ್ಪನೆಯಾಗುವುದು. ಆ ಚಿತ್ರಣವನ್ನು ನೋಡಿ ಅರಸನ ಕಲಾನೈಪುಣ್ಯವನ್ನು ಅಲ್ಲಿಯೇ ನಿಂತಿದ್ದ ಸಾನುಮತಿಯು ಪ್ರಸಂಶಿಸುವಳು(ಶಾಕುಂತಲಾ ನಾಟಕ ಅಂಕ-೬). ತನ್ನ ಪ್ರಿಯಸಖಿಯಾದ ಶಕುಂತಲೆಯು ತನ್ನೆದುರಿಗೆ ಬಂದು ನಿಂತಿರುವಳೇನೋ ಎನ್ನುವ ಭಾಸ ಅವಳಿಗೆ ಆಗುವುದು. ಸಾನುಮತಿಯು ಮಾಡುವ ಈ ಚಿತ್ರದ ಪ್ರಶಂಸೆಯು ಮೇಲಿಂದ ಮತ್ತು ಅದರ ವಿಷಯವಾಗಿ ಶಾಕುಂತಲದ ಆರನೇ ಅಂಕದಲ್ಲಿ ದುಶ್ಯಂತ ಮತ್ತು ವಿದೂಷಕ ಇವರ ನಡುವೆ ನಡೆಯುವ ಚರ್ಚೆಯ ಮೇಲಿಂದ ಪ್ರತಿಕೃತಿ ಚಿತ್ರಣ, ಆ ಕಾಲದಲ್ಲಿ ಪರಿಪೂರ್ಣತೆಯನ್ನು ಮುಟ್ಟಿತೆಂದು ಮನಗಾಣಬಹುದು."[೨]

ಚಿತ್ರವು ಇನ್ನೂ ಪೂರ್ತಿ ಮುಗಿಯದಿದ್ದರೂ ಕೂಡ ತೆಗೆದಷ್ಟರಲ್ಲಿಯೇ ಆ ಕೃತಿಗಳ ಮುಖದಲ್ಲಿ ಭಾವವೂ ಪ್ರೇಕ್ಷಣೀಯವಾಗಿ ಚಿತ್ರಿತವಾಗಿದೆ. ವಿದೂಷಕನು ಚಿತ್ರದಲ್ಲಿರುವ ಮೂವರಲ್ಲಿ ಶಕುಂತಲೆ ಯಾರಾಗಬಹುದೆಂದು ಊಹಿಸಿ ಗುರುತಿಸುತ್ತಾನೆ. ಆ ಚಿತ್ರಗಳ ಸಪ್ತದರ್ಶನದಲ್ಲಿಯೇ ಅವರವರ ಮುಖದಲ್ಲಿಯ ಬೇರೆ ಬೇರೆ ಭಾವನೆಗಳು, ಭೀತಿ, ಕಾತುರ ಕುತೂಹಲ ಬೇಸರ ಧಣಿವು ಮುಂತಾದವುಗಳು ನೋಡುವವರಿಗೆ ಗೊತ್ತಾಗುವಂತೆ ಚಿತ್ರಿತವಾಗಿರುವುದನ್ನು ನೋಡಬಹುದು. ವಿದೂಷಕನು ವರ್ಣಿಸುವ ಆ ಶಾಕುಂತಲೆ ಸಡಿಲಾಗಿ ಇಳಿಬಿದ್ದ ಎಳಲು ಮುಖದ ಮೇಲಿನ ಬೆವರು ಹನಿಗಳು, ತುಸು ದಣಿದಿದ್ದ ಮುಖದ ಮೇಲಿನ ಛಾಯೆ ಇವೆಲ್ಲವೂ ಎಷ್ಟು ನೈಜವಾಗಿ ಚಿತ್ರಿತವಾಗಿದೆ ಎಂಬುದನ್ನು ವಿದೂಷಕ ಆಶ್ಚರ್ಯಪಡುತ್ತಾನೆ. ದುಷ್ಯಂತನು ಶಕುಂತಲೆಯನ್ನು ಮೊದಲಬಾರಿಗೆ ಕಂಡಾಗ ಗಿಡಗಳಿಗೆ ಆದೇ ತಾನೆ ನೀರೆರೆದು ದಣಿದು ತನ್ನ ಸಖಿಯರ ಜತೆಯಲ್ಲಿ ನಿಂತಾಗಿನ ಮೊದಲನೇ ಅಂಕದಲ್ಲಿಯ ವರ್ಣನೆಯನ್ನು ನಾವು ನೆನಪಿಸಿಕೊಳ್ಳಬಹುದು. ಚಿತ್ರವು ಇಷ್ಟೊಂದು

ಸುಂದರವಾಗಿದ್ದರೂ ಶಕುಂತಲೆಯ ಸೌಂದರ್ಯ ಇನ್ನಷ್ಟು ಮನೋಹಾರಿ ಆಗುವಂತೆ ಶಕುಂತಲೆಗೆ ಅಲಂಕಾರಗಳನ್ನು ಚಿತ್ರದಲ್ಲಿ ಬರೆದಿಲ್ಲವೆಂದು ದುಷ್ಯಂತನಿಗೆ ಅನಿಸುತ್ತದೆ. ಆ ಚಿತ್ರವನ್ನು ಮುಗಿಸಬೇಕಾದರೆ ಇನ್ನೂ ಪೂರೈಸಬೇಕಾದ ವಿಷಯಗಳನ್ನು ಆತನು ವಿದೂಷಕನ ಮುಂದೆ ವಿವರಿಸುತ್ತಾನೆ. ಆ ಚಿತ್ರಕ್ಕೆ ಸುಂದರವಾದ ಹಿನ್ನೆಲೆಯಾದರೂ ಇನ್ನೂ ಬರೆಯದ ಹಾಗೆಯೇ ಉಳಿದಿತ್ತು. ಭ್ರಮರಪೀಡಿತಳಾದ ಶಕುಂತಲೆಯ ಮುಖವನ್ನು ಒಂದೆಡೆಗೆ ತಿರುಗಿಸಿ, ಕಾತುರ ಮುಖಭಾವದಿಂದ ನಿಂತ ಸುಂದರವಾದ ಭಂಗಿಯೊಂದರ ಚಿತ್ರದ ಸೂಚನೆಯನ್ನು ಇದೇ ಸನ್ನಿವೇಶದಲ್ಲಿ ನಾವು ಕಾಣಬಹುದು. ಈ ವಿವರಗಳ ಮೇಲಿಂದ ಪ್ರತಿಕೃತಿ ವಿವರಗಳ ಚಿತ್ರಣ ಎಷ್ಟು ಸೂಕ್ಷ್ಮತೆಯಿಂದ ಮತ್ತು ಕುಶಲತೆಯಿಂದ ಮೂಡಲ್ಪಟ್ಟಿರುತ್ತದೆ ಎಂಬುದನ್ನು ಊಹಿಸಬಹುದು. ವ್ಯಕ್ತಿಗಳ ಪ್ರತಿಕೃತಿಗಳಂತೆ ಸ್ತ್ರೀಪುರುಷರ ಗುಂಪುಗಳಾದರೂ ಅಷ್ಟೇ ಕುಶಲತೆಯಿಂದ ಬರೆಯಲ್ಪಡುತ್ತಿದ್ದವು. ಮೇಲೆ ವರ್ಣಿಸಿದ ಚಿತ್ರದಲ್ಲಿ ಶಕುಂತಲೆಯ ಜತೆಯಲ್ಲಿ ಅವರಿಬ್ಬರ ಸಖಿಯರಿದ್ದಾರೆ. ಆಶ್ರಮದಲ್ಲಿ ಅವರನ್ನು ಕಣ್ಣಾರೆ ನೋಡದ ವಿದೂಷಕನು ಆ ಮೂವರು ಪರೀಕ್ಷಣಿಯರೆಂದು ಚಿತ್ರದಲ್ಲಿಯ ಅವಳ ಸೌಂದರ್ಯದ ಮೇಲಿಂದ ತನ್ನ ಅಭಿಪ್ರಾಯ ಹೇಳುತ್ತಾನೆ.

ಈ ಮೊದಲೇ ನೋಡಿದಂತೆ ಪರಿವಾರ ಸಮೇತಳಾದ ಧಾರಣಿಯ ಚಿತ್ರ ಇಂತಹ ಸಮೂಹ ಚಿತ್ರದ ಇನ್ನೊಂದು ಉದಾಹರಣೆಯಾಗಿದೆ. ಪ್ರತಿಕೃತಿ ಮತ್ತು ಸಮೂಹ ಚಿತ್ರಗಳಲ್ಲದೇ ಕಾಳಿದಾಸನ ಕಾವ್ಯಗಳಲ್ಲಿ ಮತ್ತು ನಾಟಕಗಳಲ್ಲಿ ನಿಸರ್ಗದ ಸೌಂದರ್ಯವನ್ನು ಚಿತ್ರಿಸಿರುವುದನ್ನು ನೋಡಬಹುದು. ಈ ಪ್ರಕೃತಿಗಳ ಜೋಡಣೆ ಮತ್ತು ಅವುಗಳನ್ನು ಪ್ರೇರೇಪಿಸಿದ ಕಲ್ಪನಾವಿಲಾಸ ತಲೆದೂಗಿಸುವಂತಹವು. ಸಖಿ ಸಮೇತಳಾದ ಶಕುಂತಲೆಯ ಚಿತ್ರಕ್ಕೆ ಹಿನ್ನೆಲೆಯಾಗಿ ಚಿತ್ರಿಸಬೇಕೆಂದಿರುವ ಮಾಲಿನಿ ತೀರ ಉಸುಕಿನ ದಡಗಳಲ್ಲಿ ರಮಿಸುತ್ತಿರುವ ರಾಜಹಂಸಗಳು ನದಿಯ ಆಚೆ ಭವ್ಯವಾಸ ಹಿಮಾಲಯ ಪರ್ವತ ಶ್ರೇಣಿ, ನಿರಾತಂಕವಾಗಿ ಅಲೆದಾಡುವ ಹುಲ್ಲೆಗಳು, ಇವೆಲ್ಲವೂ ಪೂರ್ತಿಯಾಗಿ ಚಿತ್ರಿಸಲ್ಪಟ್ಟಿರದಿದ್ದರೂ ಅವುಗಳ ಬಾಹ್ಯ ರೇಖೆಗಳನ್ನು ಹಾಕಿಟ್ಟ ವಿಷಯ ದುಷ್ಯಂತನ ಮಾತಿಂದ ತಿಳಿಯಬಹುದಾಗಿದೆ. ಚಿತ್ರಕಲೆಯು ಒಂದು ಲೋಕಪ್ರಿಯವಾದ ಕಲೆಯಾಗಿದೆ. ಋಷಿ ಕನ್ಯೆಕೆಯಿರಿಂದ ಕೂಡ ಅದು ಅಲಂಕರಿಸಲ್ಪಡುತ್ತದೆ. ಶಕುಂತಲೆಯು ಕಣ್ವಾಶ್ರಮದಿಂದ ದುಷ್ಯಂತನೆಡೆಗೆ ಹೊರಡುವ ಕಾಲದಲ್ಲಿ ಅನಸೂಯ ಪ್ರಿಯಂವದೆಯರು ಶಕುಂತಲೆಗೆ ಅಲಂಕಾರ ಮಾಡುವಾಗ ತಾವು ತಕ್ಕಮಟ್ಟಿಗೆ ಅಲಂಕಾರ ಮಾಡಿಕೊಂಡಿದ್ದರೂ ಚಿತ್ರಗಳ ಪರಿಚಯದ ಮೂಲಕ ತಮಗೆ ತಿಳಿದಷ್ಟರಮಟ್ಟಿಗೆ ಸೌಂದರ್ಯ ಹೆಚ್ಚಿಸುವಂತೆ ಆಭರಣ, ಅಲಂಕಾರಗಳನ್ನು ತೊಡಿಸುವೆವು ಎಂದು ಹೇಳುವರು. ಕಾಳಿದಾಸನ ಕಾಲದಲ್ಲಿ ಚಿತ್ರಕಲೆಯು ಕೇವಲ ಮನೋರಂಜನೆಯನ್ನು ಮಾಡಬಹುದಾದ ಕಲೆಯಾಗಿರದೇ ಅದೊಂದು ಹೊಸ ಸಾಧನೆಯಷ್ಟೇ ಮಹತ್ವದ ವಿಷಯವೆಂದು ಪರಿಗಣಿಸಲ್ಪಡುತ್ತಿತ್ತು. ಶಿಲ್ಪಿ ತನ್ನ ಕೆತ್ತನೆಯ ಕೆಲಸವನ್ನು ಪ್ರಾರಂಭಿಸುವ ಪೂರ್ವದಲ್ಲಿ ತಾನು ನಿರ್ಮಿಸಬೇಕಾದ ಆ ಕೃತಿಯ ವಿಷಯದಲ್ಲಿ ತನ್ಮಯನಾಗಿ ಧ್ಯಾನಚಿತ್ತನಾಗಿ, ಆ ಕೃತಿಯ ಸಂಪೂರ್ಣ ಸ್ವರೂಪ ಆತನ ಕಣ್ಣೆದುರಿಗೆ ನಿಂತು, ಆ ಸ್ವರೂಪ ಆತನ ಮನಶ್ಚಕ್ಷುವಿನ ಮುಂದೆ ಪೂರ್ತಿಯಾಗಿ ಮೂಡಿದ ನಂತರವೇ ಶಿಲ್ಪಿಯು ತನ್ನ ಕೆಲಸಕ್ಕೆ ಕೈಹಾಕಬೇಕೆಂಬ ವಿಷಯವನ್ನು ವಾಸ್ತುಶಾಸ್ತ್ರ ಅಥವಾ ಶಿಲ್ಪಶಾಸ್ತ್ರವು

ವಿಧಿಸುವುದುಂಟು. ನಿರ್ಮಿಸಿದ ಕೃತಿಯು ಉತ್ತಮವಾಗದೇ ಹೋದರೇ ಅದಕ್ಕೆ ಕಾರಣ ಒಂದೇ, ಕಲೆಗಾರನು ಶಿಲ್ಪಿಯೇ ಆಗಿರಲಿ, ಚಿತ್ರಕಾರನೇ ಆಗಿರಲಿ ಆ ಕೃತಿಯ ಧ್ಯಾನದಲ್ಲಿ ಏಕಚಿತ್ತನಾಗದೇ ಇರುವುದು. ಅದನ್ನು ಕಾಳಿದಾಸನೂ ಸ್ಪಷ್ಟವಾಗಿ ಹೇಳಿದ್ದಾನೆ. ಕಾಳಿದಾಸನು ಚಿತ್ರೀಕರಣದಲ್ಲಿ ನಾಲ್ಕು ಬಗೆಯ ವರ್ಣಗಳನ್ನು ಬಳಸಿಕೊಂಡಿದ್ದಾನೆ. ಚಿತ್ರಕಾರನೂ ಉತ್ತಮವಾದ ಚಿತ್ರ ಬಿಡಿಸಬೇಕಾದರೇ ಆತನಲ್ಲಿರುವ ಯೋಗ್ಯತೆ, ಧ್ಯಾನ, ಸಮಾಧಿ, ಕಲ್ಪನಾವೈಖರಿ, ನಿರೀಕ್ಷಣಾಶಕ್ತಿ, ವರ್ಣವಿನ್ಯಾಸ ಇವುಗಳೆಲ್ಲಾ ಮೇಲಿಂದ ಹಿಂದೂಸ್ಥಾನದ ಪ್ರಾಚೀನ ಚಿತ್ರಕಾರರು ಮಾನವ ಹೃದಯದ ಭಿನ್ನ ಭಾವನೆಗಳನ್ನು, ರೂಪದ ಸೌಂದರ್ಯ ಸಹಜತೆಗಳನ್ನು, ಕಲ್ಪನೆಯ ವಿಲಾಸ ವೈಚಿತ್ರಗಳನ್ನು ಯಾವ ಬಗೆಯಲ್ಲಿ ಚಿತ್ರಿಸುತ್ತಿದ್ದರು ಎನ್ನುವ ಕಲ್ಪನೆ ನಮಗೆ ತುಸುಮಟ್ಟಿಗಾದರೂ ಆಗಬಹುದು.

ಕಾಳಿದಾಸನು ಈ ಕೆಳಗಿನ ನಾಲ್ಕು ಅಂಶಗಳು ಪ್ರಮುಖ ಎಂದಿದ್ದಾರೆ.

೧. ಪ್ರಕೃತಿಯನ್ನು ಸಹಜವಾಗಿ ಬಿಂಬಿಸುವ ವರ್ಣ.

೨. ದೃಷ್ಟಿಪಥ ಮತ್ತು ವಸ್ತುವಿನ ಮೃದುತ್ವ ಅಥವಾ ಕಠೋರತೆಯನ್ನು ಒತ್ತಿ ಹೇಳುವ ವರ್ಣ.

೩. ನೈಜ ಪ್ರಮಾಣದಲ್ಲಿ ಕಂಡು ಉತ್ಪ್ರೇಕ್ಷಿಸುವ ವರ್ಣ

೪. ಹಿಂದೆ ಕಾಣಿಸಿದುದರ ಮಿಶ್ರಣ ವರ್ಣ.

**ಚಿತ್ರ ವಿಶ್ಲೇಷಣೆ**

೧. ಶಕುಂತಲೆಯು ದುಷ್ಯಂತ ಮಹಾರಾಜನ ಪ್ರೇಮದಲ್ಲಿ ಸಿಲುಕಿ ವಿರಹದಿಂದ ತನ್ನ ಸಖಿಯರೊಂದಿಗೆ ಮಾತನಾಡಿಕೊಳ್ಳುವುದನ್ನು ಅತ್ಯಂತ ಸುಮಧುರವಾಗಿ ಚಿತ್ರಿಸಿದ್ದಾರೆ. ಅಶ್ರಮದ ಕಟ್ಟೆ, ಕಮಲದ ಹೂವುಗಳು, ಪಕ್ಷಿಗಳು, ಪ್ರಕೃತಿಸೌಂದರ್ಯ ಉತ್ತಮವಾಗಿ ಮೂಡಿಬಂದಿದೆ. ಈ ಚಿತ್ರವನ್ನು ಎಸ್. ಎಸ್. ಕುಕ್ಕೆ ಅವರು ಬಿಡಿಸಿದ್ದಾರೆ.

ಈ ಚಿತ್ರದಲ್ಲಿ ಕಣ್ವರ ಆಶ್ರಮದಿಂದ ಶಕುಂತಲೆಯನ್ನು ಪತಿಯ ಮನೆಗೆ ಕಳಿಸುವ ಸನ್ನಿವೇಶವಿದೆ. ಈ ಚಿತ್ರದಲ್ಲಿ ಅಶ್ರಮದ ಚಿತ್ರಣ. ಸೆರಗು ಹಿಡಿದು ಜಗ್ಗುವ ಜಿಂಕೆಯ ಚಿತ್ರ,



Shankunthala with maids

ಸಖಿಯರ ಚಿತ್ರ, ಋಷಿಮುನಿಗಳ ಚಿತ್ರ, ಮೊಲ, ನವಿಲು, ಕುಟೀರ ಇತ್ಯಾದಿ ಚಿತ್ರಗಳನ್ನು ಗಮನಿಸಬಹುದು. ತಪೋವನದಲ್ಲಿ ಬೆಳೆದು ಕಣ್ವಮಹರ್ಷಿಗಳಿಂದ ಸಾಕಲ್ಪಟ್ಟ ಶಕುಂತಲೆ ಗಿಡಮರಗಳಿಗೆ ನೀರೆರೆಯುತ್ತ ಸಖಿಯರೊಂದಿಗೆ ಜಿಂಕೆಯ ಮರಿಗಳನ್ನಾಡಿಸುವ ಅಖಂಡ ಪುಣ್ಯಫಲದಂತಿರುವ ಸುಂದರ ಪುಷ್ಪ ಶಕುಂತಲೆ. ದುಷ್ಯಂತನಿಗೆ ಒಲಿಯುವ ಮತ್ತು ಕಣ್ವರ ಅಣತಿಯನ್ನು ಪಡೆದು ಆಶ್ರಮವನ್ನು ಬೀಳ್ಕೊಡುತ್ತಿರುವ ಚಿತ್ರಗಳನ್ನು ನೋಡುವಾಗ ಕಾಳಿದಾಸನ ಸುಂದರ ಕಲ್ಪನೆಗಳು, ಮೂರ್ತರೂಪದ ದೃಶ್ಯಪ್ರಪಂಚವಾಗಿ ಕಣ್ಣೆದುರಿನಲ್ಲಿ ನಿಲ್ಲುವುವು.



ಕಣ್ವರಿಂದ ಶಕುಂತಲೆಯ ಬೀಳ್ಕೊಡುಗೆ Kanva sending off Shakuntala

ವಿ.ಎಂ. ಇನಾಂದಾರರು ಹೇಳುವಂತೆ: "ಶಾಕುಂತಲದ ಆರನೆಯ ಅಂಕದಲ್ಲಿ ದುಷ್ಯಂತನು ಅಂಗುಲೀಯಕವನ್ನು ನೋಡಿ ಕಳವಳಪಟ್ಟು ಶಕುಂತಲೆಯ ಇನ್ನೊಮ್ಮೆಯಾದರೂ ತನ್ನ ದೃಷ್ಟಿಗೆ ಬೀಳಬಹುದೇ ಎಂದು ದುಃಖ ಪಡುತ್ತಿದ್ದಾಗ ಚತುರಿಕೆಯು ಅವಳ ಪ್ರತಿಕೃತಿಯೊಂದನ್ನು ತೋರಿಸುವಳು. ಈ ಚಿತ್ರದ ಮುಖಾಂತರವಾಗಿ ಕಾಳಿದಾಸನು ದುಷ್ಯಂತನಿಗೆ ಶಕುಂತಲೆಯ ಪುನರ್‌ದರ್ಶನವನ್ನು ಕೂಡಲೇ ಮಾಡಿಸುತ್ತಾನೆ. ಹೃದಯದ ಭಾವನೆಗಳೆಲ್ಲವನ್ನು ಪೂರ್ತಿಯಾಗಿ ಸೂಚಿಸುವಂತೆ ಬರೆಯಲ್ಪಟ್ಟ ಸಹಜಸುಂದರವಾದ ಆ ಚಿತ್ರ ಶಕುಂತಲೆಯು ತನ್ನ ಮುಂದೆ ಮೂರ್ತಿಮತ್ತಾಗಿ ನಿಂತಿರುವಳೆಂದು ಭಾವಿಸಿ ಅವಳನ್ನೇ ಉದ್ದೇಶಿಸಿ ತನ್ನ ಉನ್ಮಾದದಲ್ಲಿ ಮಾತನಾಡುತ್ತಿದ್ದ ದುಷ್ಯಂತನನ್ನು ಕಂಡರೆ ಆ ಚಿತ್ರವು ಎಷ್ಟು ಸುಂದರವಾಗಿ ಬರೆಯಲ್ಪಟ್ಟಿರಬಹುದೆಂಬುದರ ಕಲ್ಪನೆಯಾಗುವುದು. ಆ ಚಿತ್ರವನ್ನು ನೋಡಿ ಅರಸನ ಕಲಾನೈಪುಣ್ಯವನ್ನು ಅಲ್ಲಿಯೇ ನಿಂತಿದ್ದ ಸಾನುಮತಿಯು ಪ್ರಶಂಸಿಸುವಳು. ತನ್ನ ಪ್ರಿಯಸಖಿಯಾದ ಶಕುಂತಲೆಯು ತನ್ನೆದುರಿಗೆ ಬಂದು ನಿಂತಿರುವಳೇನೋ ಎಂಬ ಭಾಸ ಅವಳಿಗಾದರೂ ಆಗಬಹುದು.

೧. ಅಹೋ ಎಷಾ ರಾಜರ್ಷೇರ್ನಿಪುಣತಾ(ಶಾಕುಂತಲ, ಅಂ. ೬)

೨. ಜಾನೇ ಸುಖ್ಯಗ್ರತೋ ಮೇ ವರ್ತತೇ(ಶಾಕುಂತಲ, ಅಂ. ೬)"[೩]

ಇವರ ನಡುವೆ ನಡೆಯುವ ಚರ್ಚೆಯ ಮೇಲಿಂದ ಪ್ರತಿಕೃತಿ ಚಿತ್ರಣ ಆ ಕಾಲದಲ್ಲಿ ಪರಿಪೂರ್ಣತೆಯನ್ನು ಮುಟ್ಟಿತೆಂಬುದನ್ನು ಮನಗಾಣಬಹುದು. ಚಿತ್ರವು ಇನ್ನೂ ಪೂರ್ತಿಯಾಗಿ ಮುಗಿಯದಿದ್ದರೂ ಕೂಡ ತೆಗೆದಷ್ಟರಲ್ಲಿಯೇ ಆ ಕೃತಿಗಳ ಮುಖದಲ್ಲಿ ಭಾವವು ಪ್ರೇಕ್ಷಣೀಯವಾಗಿ ಚಿತ್ರಿತವಾಗಿದೆ(ಮಧುರವಸ್ಥಾನ ದರ್ಶನೀಯೋ ಭಾವಾನುಪ್ರವೇಶ. ಶಾ.ಅಂ.೬). ವಿದೂಷಕನು ಚಿತ್ರದಲ್ಲಿಯೇ ಮೂವರಲ್ಲಿ ಶಕುಂತಲೆಯು ಯಾವಳಾಗಿರಬಹುದೆಂದು ಊಹಿಸಿ ಇಂಥವಳೇ ಅವಳೆಂದು ಹೇಳುವ ಆತನ ವರ್ಣನೆಯ ಮೇಲಿಂದ ಆ ಕೃತಿಗಳ ಸಕೃದ್ದರ್ಶನದಲ್ಲಿಯೇ ಅವರ ಅವರ ಮುಖದಲ್ಲಿಯ ಬೇರೆ ಬೇರೆ ಭಾವನೆಗಳು ಭೀತಿ–ಕಾತರ, ಕುತೂಹಲ, ಬೇಸರ, ದಣಿವು ಮುಂತಾದವುಗಳು–ನೋಡುವವರಿಗೆ ಕೂಡಲೆ ಗೊತ್ತಾಗುವಂತೆ ಚಿತ್ರಿತವಾಗುತ್ತಿದ್ದವೆಂಬುದನ್ನು ತಿಳಿಯಬಹುದಾಗಿದೆ. ವಿದೂಷಕನು ವರ್ಣಿಸುವ ಆ ಶಕುಂತಲೆಯ ಸಡಿಲಾಗಿ ಇಳಿಬಿದ್ದ ಹೇಳಲು ಮುಖದ ಮೇಲಿನ ಬೆವರು ಹನಿಗಳು, ತುಸು ದಣಿದಿದ್ದ ಮುಖದ ಮೇಲಿನ ಛಾಯೆ, ಇವೆಲ್ಲವೂ ಎಷ್ಟು ನೈಜವಾಗಿ ಚಿತ್ರಿತವಾಗಿದ್ದವೆಂಬುದನ್ನು ನಾವು ತಿಳಿಯಬೇಕಾದರೆ ದುಷ್ಯಂತನು ಮೊದಲ ಬಾರಿ ಅವಳನ್ನು ಕಂಡಾಗ ಅವಳು ಗಿಡಗಳಿಗೆ ಅದೇ ನೀರೆರೆದು ದಣಿದು ತನ್ನ ಸಖಿಯರ ಜೊತೆಯಲ್ಲಿ ನಿಂತಾಗಿನ ಮೊದಲನೆಯ ಅಂಕದಲ್ಲಿಯ ವರ್ಣನೆಯನ್ನು ನಾವು ಜ್ಞಾಪಿಸಿಕೊಳ್ಳಬಹುದು.

ಚಿತ್ರವು ಇಷ್ಟೊಂದು ಸುಂದರವಾಗಿದ್ದರೂ ಶಕುಂತಲೆಯ ಸೌಂದರ್ಯ ಇನ್ನಷ್ಟು ಮನೋಹಾರಿಯಾಗುವಂತೆ ಅವಳಿಗೆ ಅಲಂಕಾರಗಳನ್ನು ಚಿತ್ರದಲ್ಲಿ ಬರೆದಿಲ್ಲವೆಂದು ದುಷ್ಯಂತನಿಗೆ ಅನಿಸುತ್ತದೆ. ಆ ಚಿತ್ರವನ್ನು ಮುಗಿಸಬೇಕಾದರೆ, ಇನ್ನೂ ಪೂರೈಸಬೇಕಾದ ವಿಷಯಗಳನ್ನು ಆತನು ವಿದೂಷಕನ ಮುಂದೆ ವಿವರಿಸುತ್ತಾನೆ. ಆ ಚಿತ್ರಕ್ಕೆ ಸುಂದರವಾದ ಹಿನ್ನೆಲೆಯಾದರೂ ಇನ್ನೂ ಬರೆಯದೆ ಹಾಗೆಯೇ ಉಳಿದಿತ್ತು. ಭ್ರಮರಪೀಡಿತಳಾದ ಶಕುಂತಲೆಯ ಮುಖವನ್ನು ಒಂದೆಡೆಗೆ ತಿರುಗಿಸಿ ಕಾತುರಮುಖಭಾವದಿಂದ ನಿಂತ ಸುಂದರವಾದ ಭಂಗಿಯೊಂದರ ಚಿತ್ರದ ಸೂಚನೆಯನ್ನು ಇದೇ ಸನ್ನಿವೇಶದಲ್ಲಿ ನಾವು ಕಾಣಬಹುದು. ಈ ವಿವರಗಳ ಮೇಲಿಂದ ಪ್ರತಿಕೃತಿ ವಿವರಗಳ ಚಿತ್ರಣ ಎಷ್ಟು ಸೂಕ್ಷ್ಮತೆಯಿಂದ ಮತ್ತು ಕುಶಲಹಸ್ತತೆಯಿಂದ ಮಾಡಲ್ಪಡುತ್ತಿತ್ತೆಂಬುದನ್ನು ಊಹಿಸಬಹುದು.

"ತರ್ಕಯಾಮಿ ಯ್ಯಷಾ ಶಿಥಿಲ ಕೇಶ ಬಂಧನೋದ್ವಾಂತ ಕುಸಮೇನ ಕೇಶಾಸ್ತೇನೋದ್ಭಿನ್ನಸ್ವೇದ ಬಿಂದುನಾ ವದವೇನ ವಿಶೇಷತೋ ವಸ್ಯತಾಭ್ಯಾಂ ಬಾಹುಭ್ಯಾಮವಸೇಕಸ್ನಿಗ್ಧತ ರುಪಲ್ಲವಸ್ಯ ಚೂತಪಾದಪಸ್ಯ ಪಾರ್ಶ್ವೇ ಈಷತ್ಪರಿ ಶ್ರಾಂತೇವಾಲಿಖಿತಾ ಏಷಾ ತತ್ರಭವತಿ ಶಕುಂತಲಾ। ಇತರೇ ಸಖ್ಯೌಇತಿ ಶಾ.ಅ.೬)

ಸ್ರಸ್ತಾಂಸಾವತಿ ಮಾತ್ರ ಲೋಹಿತತತೌ ಬಾಹು ಘಟೋತ್‌ಕ್ಷೇಪಣಾತ್ ಇತ್ಯಾದಿ (ಶಾಕುಂತಲ. ಅಂ. ೧)

ಕೃತಂ ನ ಕರ್ಣಾರ್ಪಿತಬಂಧನಂ ಸಖೇ ಶಿರೀಷಮಾಗಂಡ ವಿಲಂಬಿಕೇಸರಂ। ನ ವಾ ಶರಚ್ಚಂದ್ರ ಮರೀಚಿಕೋಮಲಂ ಮೃಣಾಲಸೂತ್ರಂ ರಚಿತಂ ಸ್ತನಾಂತರೇ॥ (ಶಾ. ಅಂ. ೬)

ಕುಸುಮರಸಪಾಟಚ್ಚರಸ್ತತ್ರಭವತ್ಯಾ ವದನಮಭಿಲಂಘ್ಯತಿ ಮಧುಕರಃ ॥ (ಶಾ. ಅಂ. ೬)"[೪]

ವ್ಯಕ್ತಿಗಳ ಪ್ರತಿಕೃತಿಗಳಂತೆ ಸ್ತ್ರೀಪುರುಷರ ಗುಂಪುಗಳಾದರೂ(Groups) ಅಷ್ಟೇ ಕುಶಲತೆಯಿಂದ ಬರೆಯಲ್ಪಡುತ್ತಿದ್ದವು. ಮೇಲೆ ವರ್ಣಿಸಿದ ಚಿತ್ರದಲ್ಲಿ ಶಕುಂತಲೆಯ ಜೊತೆಯಲ್ಲಿ ಅವಳ ಇಬ್ಬರು ಸಖಿಯರೂ ಇದ್ದಾರೆ. ಆಶ್ರಮದಲ್ಲಿ ಅವರನ್ನು ಕಣ್ಣಾರೆ ನೋಡದ ವಿದೂಷಕನು ಆ ಮೂವರು ಪರೀಕ್ಷಣೀಯರೆಂದು ಚಿತ್ರದಲ್ಲಿಯ ಅವರ ಸೌಂದರ್ಯದ ಮೇಲಿಂದ ತನ್ನ ಅಭಿಪ್ರಾಯ ಹೇಳುತ್ತಾನೆ.

(ಸರ್ವಾಶ್ಚ ದರ್ಶನೀಯಾಃ ಶಾಕುಂತಲ, ಅಂ.೬) ಈ ಮೊದಲೇ ನೋಡಿದಂತೆ ಪರಿವಾರ ಸಮೇತಳಾದ ಧಾರಿಣಿಯ ಚಿತ್ರ ಇಂಥ ಸಮೂಹಚಿತ್ರದ ಇನ್ನೊಂದು ಉದಾಹರಣೆಯಾಗಿದೆ.

ಪ್ರತಿಕೃತಿ ಮತ್ತು ಸಮೂಹ ಚಿತ್ರಗಳಲ್ಲದೆ ಕಾಳಿದಾಸನ ಕಾವ್ಯಗಳಲ್ಲಿ ಮತ್ತು ನಾಟಕಗಳಲ್ಲಿ ನಿಸರ್ಗದ ನಿಶಾಂತ ಸೌಂದರ್ಯವನ್ನು ಚಿತ್ರಿಸಿರುವ ಪ್ರತಿಕೃತಿಗಳನ್ನು ನೋಡಬಹುದು. ಈ ಪ್ರಕೃತಿ ಚಿತ್ರಗಳ ಜೋಡಣೆ planning ಮತ್ತು ಅವುಗಳನ್ನು ಪ್ರೇರಿಸಿದ ಕಲ್ಪನಾವಿಲಾಸ ತಲೆದೂಗಿಸುವಂತಹವು.

ಸಖೀಸಮೇತಳಾದ ಶಕುಂತಲೆಯ ಚಿತ್ರಕ್ಕೆ ಹಿನ್ನೆಲೆಯಾಗಿ ಚಿತ್ರಿಸಬೇಕೆಂದಿರುವ ಮಾಲಿನೀ ತೀರ ಅದರ ಉಸುಕಿನ ದಡಗಳಲ್ಲಿ ರಮಿಸುತ್ತಿರುವ ರಾಜಹಂಸಗಳು, ನದಿಯ ಆಚೆ ಭವ್ಯವಾದ ಹಿಮಾಲಯದ ಪರ್ವತಶ್ರೇಣಿ, ನಿರಾತಂಕವಾಗಿ ಅಲೆದಾಡುವ ಹುಲ್ಲೆಗಳು, ಇವೆಲ್ಲವು ಪೂರ್ತಿಯಾಗಿ ಚಿತ್ರಿಸಲ್ಪಟ್ಟಿರದಿದ್ದರೂ ಅವುಗಳ ಬಾಹ್ಯರೇಷೆಗಳನ್ನು ಹಾಕಿಟ್ಟ ವಿಷಯ ದುಷ್ಯಂತನ ಮಾತಿನ ಮೇಲಿಂದ ತಿಳಿಯುವಂತಿದೆ.

"ಕಾರ್ಯಸ್ಸೈಕತಲೀನಹಂಸ ಮಿಥುನಾ ಸ್ರೋತೋವಹಾ ಮಾಲಿನೀ
ಪಾದಾಸ್ತಾಮಭಿತೋ ನಿಷಣ್ಣ ಹರಿಣಾ ಗೌರೀಗುರೋಃ ಪಾವನಾಃ।
ಶಾಖಾಲಂಗಿತ ವಲ್ಕಲಸ್ಯ ಚ ತರೋರ್ನಿರ್ಮಾರುಮಿಚ್ಛಾಮ್ಯಧಃ
ಶೃಂಗೇ ಕೃಷ್ಣಮೃಗಸ್ಯ ವಾಮನಯನಂ ಕಂಡೂಯಮಾನಾಂ ಮೃಗೀಮ್॥
(ಶಾಕುಂತಲ.ಅಂಕ.೬)

೧. ಚಿತ್ರಫಲಕ, ೨. ಲಂಬಕೂರ್ಚ. ಯಥಾಹಂ ಪಶ್ಯಾಮಿ ಪೂಠಯಿತವ್ಯಮನೇನ ಚಿತ್ರಫಲಕಂ ಲಂಬಕೂರ್ಚನಾಂ ತಾಪಸಾನಾಂ ಕದಂಬೈ(ಶಾ. ಅಂ.೬)"[೫]

ಲಂಬಕೂರ್ಚ, ಚಿತ್ರಫಲಕ, ವರ್ಣ, ರಾಗ, ಮತ್ತು ವರ್ತಿಕಾಕರಂಡ, ಮುಂತಾದ ಶಬ್ದಗಳನ್ನು ಶಕುಂತಲದಲ್ಲಿ ಕಾಣಬಹುದು.

"ಇತಿ ಚಿತ್ರಫಲಕಂ ದರ್ಶಯತಿ(ಶಾ. ಅಂಕ. ೬)
ಅವಲಂಬಸ್ವ ಚಿತ್ರಫಲಕಂ(ಶಾ. ಅಂಕ. ೬)
ಅಹಮಪ್ಯೇತಸ್ಯ ಸಂಗೇನೆದ್ಯಶ ವರ್ಣ ಇವಸಂವೃತ್ತಃ(ಶಾ. ಅಂಕ. ೬)"[೬]

ಚಿತ್ರಕಲೆಯು ಆ ಕಾಲದಲ್ಲಿ ಒಂದು ಲೋಕಪ್ರಿಯವಾದ ಕಲೆಯಾಗಿತ್ತು. ರಾಜಧಾನಿಗಳಲ್ಲಿ ಪಟ್ಟಣಗಳಲ್ಲಿಯಲ್ಲದೆ ಆಶ್ರಮದಲ್ಲಿಯ ಋಷಿಕನ್ನಿಕೆಯರಿಂದ ಕೂಡ ಅದು ಆರಾಧಿಸಲ್ಪಡುತ್ತಿತ್ತೆಂದು ತೋರುತ್ತದೆ. ಶಕುಂತಲೆಯು ಕಣ್ವಾಶ್ರಮದಿಂದ ದುಷ್ಯಂತನೆಡೆಗೆ ಹೊರಡುವ ಕಾಲದಲ್ಲಿ ಅನಸೂಯಾ ಪ್ರಿಯಂವದೆಯರು, ಶಕುಂತಲೆಗೆ ಅಲಂಕಾರ ಮಾಡುವಾಗ್ಗೆ, ತಾವು ತಮ್ಮಷ್ಟಕ್ಕೆ ಅಲಂಕಾರ ಮಾಡಿಕೊಂಡಿರದಿದ್ದರೂ ಚಿತ್ರಗಳ ಪರಿಚಯದ ಮೂಲಕ ತಮಗೆ ತಿಳಿದಷ್ಟರಮಟ್ಟಿಗೆ ಸೌಂದರ್ಯವನ್ನು ಹೆಚ್ಚಿಸುವಂತೆ ಆಭರಣ ಅಲಂಕಾರಗಳನ್ನು ತೊಡಿಸುವೆವೆಂದು ಹೇಳುವರು.

ಚಿತ್ರಕರ್ಮ ಪರಿಚಯೇನಾಂಗೇಷು ತ ಆಭರಣ ವಿನಿಯೋಗಮಕುರ್ಮಃ(ಶ. ಅಂ. ೬) ಕಾಳಿದಾಸನ ಕಾಲದಲ್ಲಿ ಚಿತ್ರಕಲೆಯು ಕೇವಲ ಮನರಂಜನೆಯನ್ನು ಮಾಡಬಹುದಾದ ಕಲೆಯಾಗಿರದೆ, ಅದೂ ಒಂದು ಯೋಗಸಾಧನೆಯಷ್ಟೇ ಮಹತ್ವ ವಿಷಯವೆಂದು ಪರಿಗಣಿಸಲ್ಪಡುತ್ತಿತ್ತು. ಶಿಲ್ಪಿ ತನ್ನ ಕೆತ್ತನೆಯ ಕೆಲಸವನ್ನು ಪ್ರಾರಂಭಿಸುವ ಪೂರ್ವದಲ್ಲಿ ತಾನು ನಿರ್ಮಿಸಬೇಕಾದ ಕೃತಿಯ ವಿಷಯದಲ್ಲಿ ತನ್ಮಯನಾಗಿ, ಧ್ಯಾನೈಕಚಿತ್ತನಾಗಿ, ಆ ಕೃತಿಯ ಸಂಪೂರ್ಣ, ಸ್ವರೂಪ ಆತನ ಕಣ್ಣೆದುರಿಗೆ ನಿಂತು ಅದರ ಸ್ವರೂಪ ಆತನ ಮನಶ್ಚಕ್ಷುವಿನ ಮುಂದೆ ಪೂರ್ತಿಯಾಗಿ ಮೂಡಿದ ನಂತರವೇ ಶಿಲ್ಪಿಯು ತನ್ನ ಕೆಲಸಕ್ಕೆ ಕೈಹಾಕಬೇಕೆಂಬ ವಿಷಯವನ್ನು ವಾಸ್ತುಶಾಸ್ತ್ರ ಅಥವಾ ಶಿಲ್ಪಶಾಸ್ತ್ರವು ವಿಧಿಸುವುದುಂಟು. ನಿರ್ಮಿಸಿದ ಕೃತಿ ಉತ್ತಮವಾಗದೆ ಹೋದರೆ ಅದಕ್ಕೆ ಕಾರಣ ಒಂದೇ ಕಲೆಗಾರನು. ಶಿಲ್ಪಿಯೇ ಆಗಿರಲಿ, ಚಿತ್ರಕಾರನೇ ಆಗಿರಲಿ, ಆ ಕೃತಿಯ ಧ್ಯಾನದಲ್ಲಿ ಏಕಚಿತ್ತನಾಗದೆ ಇರುವುದು. ಇದನ್ನು ಕಾಳಿದಾಸನು ಒಂದೆಡೆಗೆ ಸ್ಪಷ್ಟವಾಗಿ ಹೇಳಿದ್ದಾನೆ. ಮಾಳವಿಕೆಯ ಚಿತ್ರದಲ್ಲಿ ಬರೆದಷ್ಟು, ನಿಜವಾಗಿಯೂ ಸೌಂದರ್ಯವತಿಯಾಗಿರಬಹುದೇ ಎಂದು ಸಂದೇಹಪಡುತ್ತಿದ್ದ ಅಗ್ನಿಮಿತ್ರನು ಅವಳನ್ನು ನೃತ್ಯಾಭಿನಯದ ಕಾಲದಲ್ಲಿ ನೋಡಿದ ನಂತರ ಚಿತ್ರಕಾರನು ಅವಳ ಸೌಂದರ್ಯವನ್ನು ಚೆನ್ನಾಗಿ ಚಿತ್ರಿಸಿರಲಿಲ್ಲವೆಂದು ಅಭಿಪ್ರಾಯಪಡುತ್ತಾನೆ. ಆ ಚಿತ್ರವನ್ನು ಬರೆಯುವ ಕಾಲಕ್ಕೆ ಚಿತ್ರಕಾರನು ತದೇಕಧ್ಯಾನನಾಗಿರುವ ಮೂಲಕವೋ ಏನೋ ಮಾಲವಿಕೆಯ ನಿಜವಾದ ಸೌಂದರ್ಯವನ್ನು ಚಿತ್ರದಲ್ಲಿ ತರಲಿಕ್ಕೆ ಆತನಿಂದ ಆಗಲಿಲ್ಲ. ಎಂಬುದನ್ನು ತನ್ನ ಪ್ರಿಯಮಿತ್ರನಾದ ವಿದೂಷಕನಿಗೆ ಹೇಳುತ್ತಾನೆ.

ಚಿತ್ರಕಲೆಯ ಆರಾಧನೆಯಲ್ಲಿ ಉಪಯೋಗಿಸುತ್ತಿದ್ದ ಸಲಕರಣೆಗಳ ಮೇಲಿಂದ, ಸಾಧನ ಸಾಮಗ್ರಿಗಳ ವರ್ಣನೆಯ ಮೇಲಿಂದ, ಚಿತ್ರಕಾರನು ಉತ್ತಮತರದ ಚಿತ್ರವನ್ನು ತಯಾರಿಸಬೇಕಾದರೆ ಆತನಲ್ಲಿರಬೇಕಾದ ಯೋಗ್ಯತೆ, ಧ್ಯಾನ, ಸಮಾಧಿ, ಕಲ್ಪನಾವೈಖರಿ, ನಿರೀಕ್ಷಣಾ ಶಕ್ತಿ, ವರ್ಣವಿನ್ಯಾಸ. ಇವೆಲ್ಲವುಗಳ ಮೇಲಿಂದ ಹಿಂದೂಸ್ತಾನದ ಪ್ರಾಚೀನ ಚಿತ್ರಕಾರರು ಮಾನವ ಹೃದಯದ ಭಿನ್ನಭಾವನೆಗಳನ್ನು ರೂಪದ ಸೌಂದರ್ಯಸಹಜತೆಗಳನ್ನು ಕಲ್ಪನಾ ವಿಲಾಸ ವೈಚಿತ್ರ್ಯಗಳನ್ನು ಯಾವ ಬಗೆಯಲ್ಲಿ ಚಿತ್ರಿಸುತ್ತಿದ್ದರೆಂಬುದರ ಕಲ್ಪನೆ ನಮಗೆ ತುಸುಮಟ್ಟಿಗಾದರೂ ಆಗಬಹುದು.

**ಶಿವರಾಮ ಕಾರಂತ**

"ನಾನು ಬೇರೆ ಎಂದು ತಿಳಿಯದೆ; ನನಗೂ ಬಾಹ್ಯಸೃಷ್ಟಿಗೂ ಒಂದು ಸಂಬಂಧವನ್ನು ತಿಳಿಯಬೇಕು. ಹೀಗೆ ನಾವು ಹೊಸ ಧ್ಯೇಯ, ಊಹೆಗಳನ್ನು, ಪರಕೀಯ ವಸ್ತುಗಳೊಡನೆ ಐಕ್ಯವನ್ನು

ಕಾಣುತ್ತಾ ಹೋದರೆ ಆನಂದವು ಸಿಗುವುದು. ಇಂಥ ಆನಂದವು ಎಲ್ಲ ಬಗೆಯ ಐಕ್ಯದಿಂದ ಸಿಗದು. ಅದು ರಮಣೀಯತೆಯ ಭೋಗದಿಂದ ಸಿಗುವುದು. ಆದುದರಿಂದ ನಾವು ರಮಣೀಯತೆ ಇಲ್ಲದೆ ಸೌಂದರ್ಯವನ್ನು ಹುಡುಕಬೇಕಾಗುವುದು. ರೂಪ, ಸ್ವರ ಅವುಗಳೊಳಗಿನ ಸೌಂದರ್ಯವನ್ನು ಸವಿಯಲು ಕಲಿಯಬೇಕು. ಒಂದಲ್ಲ ಒಂದು ರೂಪವು ವಸ್ತುವಿಗೆ ಇದ್ದೇ ಇರುವುದು, ಆನಂದವೇ ಸಿಗುವುದು. ಹಾಗೆಯೇ ನಾವು ಇಲ್ಲೂ ರೂಪಾದಿಗಳ ಮೇರೆಯನ್ನು ಹರಿದು ಅನಂತದ ಸೌಂದರ್ಯದವರೆಗೂ ಸಾಗಬೇಕು. ಇದು ಯಾವತ್ತು ಧರ್ಮಗಳ ಉದ್ದೇಶ. ಆದುದರಿಂದ ಧಾರ್ಮಿಕ ಪಂಥಗಳ ಎಡೆಯಲ್ಲಿ ಈ ಸೌಂದರ್ಯೋಪಾಸನೆಯು ಇಲ್ಲವೇ 'ಕಲೆ'ಯು ಸೇರಿಕೊಂಡಿವೆ... ಎಲ್ಲಿಯ ತನಕ ನಮ್ಮಲ್ಲಿನ ಉತ್ಪಾದಕ ಶಕ್ತಿಯನ್ನು ಬೆಳೆಯಿಸುವ ಗೋಜಿಗೆ ನಾವು ಹೋಗುವುದಿಲ್ಲವೋ, ಎಲ್ಲಿಯ ತನಕ ನಮ್ಮ ಭಾವನೆಯು ಕೋಮಲವಾಗಿ ಆಗುವುದಿಲ್ಲವೋ, ಅಲ್ಲಿಯ ತನಕ ನಾವು ಬರೇ ಯಂತ್ರಗಳಾಗುವೆವು. ಮಾನವರಾಗಲಾರೆವು. ಜೀವನದ ಶೋಭೆಯು ಭಾವನೆಯ ಬೆಳವಣಿಗೆ, ವಿವೇಚನೆಯ ಬಿಗು ಇವುಗಳ ನಡುವೆ ಹರಿಯಬೇಕು".[೭]

ಕಲೆಗೇನಾದರೊಂದು ಬೆಲೆಯು ಜೀವನದಲ್ಲಿದೆಯೇ ಎಂಬ ಸಂಶಯವು ಹಲವರಲ್ಲಿ ಹೊಳೆದರೂ ಹೊಳೆಯಬಹುದು. ಕೆಲವರ ಕಲ್ಪನೆಯಲ್ಲಿ ಸಂಗೀತ, ಸಾಹಿತ್ಯ, ಶಿಲ್ಪ, ಚಿತ್ರಕಲೆ, ಇತ್ಯಾದಿಗಳು ಸಿರಿವಂತರ ಪಾಲಿಗೆ ಸಲ್ಲುವ ಕೆಲವೊಂದು ಅನಾವಶ್ಯಕ ಅವಶ್ಯಕತೆಗಳೆಂಬ ಭಾವನೆಯೂ ಇದೆ. ಕೆಲವರು ಉಪಯುಕ್ತವಾದುದೆಲ್ಲ ಸುಂದರವೆಂದೂ ಉಳಿದವುಗಳಲ್ಲಿ ಸೌಂದರ್ಯವೇ ಇಲ್ಲವೆಂದೂ ತಿಳಿಯುವರು. ಕೆಲವರ ಕಲ್ಪನೆಯಲ್ಲಿ ಕಲೆಯು ವೇಶ್ಯೆಯರ ಸಂಗೀತದಂತೆ ನೀತಿಯ ನಾಶಕ್ಕೊಂದು ಸಾಧನೆಯೆಂದೂ ತೋರಿದೆ. ಇವೆಲ್ಲ ನಮ್ಮ ನಮ್ಮ ಅನುಭವಗಳ ಫಲಿತಾಂಶವೆನ್ನಲು ಬಂದಿತು. ಸಿರಿವಂತರು ಆಗಾಗ ನರ್ತನ, ಗಾನ, ನಾಟಕ ಇತ್ಯಾದಿಗಳಲ್ಲಿ ನೂರಾರು ರೂಪಾಯಿಗಳನ್ನು ವ್ಯಯಿಸುವುದನ್ನು ಕಂಡ, ಅರೆಹೊಟ್ಟೆಯಲ್ಲಿ ಆಯುಷ್ಯವನ್ನು ಸವೆಯಬೇಕಾಗಿ ಬಂದ ಬಡ ಕೂಲಿಯವನೊಬ್ಬನಿಗೆ ಅದರ ಮೇಲೆ ದ್ವೇಷವುಂಟಾಗಲು ಕಾರಣವಿದೆ.

ಕೇವಲ ಹಣವನ್ನು ಕೂಡಿಹಾಕುವ ಬಯಕೆಯಲ್ಲಿ ಮುಣುಗಿದವನಿಗೆ ಅದರಲ್ಲೇನು ಪ್ರಯೋಜನವೆಂದೂ ತೋರಲು ಶಕ್ಯವಿದೆ. ಇಲ್ಲವೆ ಇಂದಿನ ಗಾನ, ನರ್ತನ ಇತ್ಯಾದಿ ಕಲೆಗಳು ನೀಚವೃತ್ತಿಯವರಕ್ಕೆ ಸೇರಿರುವುದನ್ನು ಕಂಡು ವಿಷಾದವೆನಿಸುವುದರಲ್ಲಾದರೂ ಅರ್ಥವಿದೆ. ಕಲೆಯ ತಿರಸ್ಕಾರಕ್ಕೆ ಇವು ಸಾಕಷ್ಟು ಕಾರಣಗಳಾಗಬಹುದಾದರೂ ಕಲೆಯು ಇವೆಲ್ಲ ಅಪವಾದಗಳಿಗೆ ಅತೀತವಾಗಿದೆ.

ಮಾನವನ ಜೀವನವು ಅವನ ಶರೀರ, ಮನಸ್ಸು, ಬುದ್ಧಿ ಈ ಮೂರನ್ನು ಸುತ್ತುವರಿಯುತ್ತದೆ. ಅನ್ನಕ್ಕಾಗಿ ಹೋರಾಡುವುದು ಅವನ ಮೊದಲನೆಯ ಗುರಿ. ಅದಿಲ್ಲದಿದ್ದರೆ ಅವನಿಲ್ಲ. ಇಂದು ಪ್ರಾಣಿಗಳಿಗೂ ಸುಲಭವೆನಿಸಿದ ಈ ಸಂಗ್ರಾಮವು ಅವನ ಪಾಲಿಗೆ ತೀರ ಕಷ್ಟವಾಗಿದೆ. ಭೂಮಿಯಲ್ಲಿ ಸಾಕಷ್ಟು ಬೆಳೆಯು ಬೆಳೆಯುತ್ತಲಿಲ್ಲವೆಂದಲ್ಲ. ಕೆಲವು ಪ್ರಬಲರು, ಸ್ವಾರ್ಥಿಗಳು, ತಮ್ಮ ಆಲಸ್ಯಮಯ,

ವಿಲಾಸಮಯ ಜೀವನಕ್ಕಾಗಿ ಇವರ ಶ್ರಮದ ಫಲವನ್ನು ಅಪಹರಿಸುತ್ತಿರುವರೆಂಬುದರಿಂದ, ಅಂಥವರ ವಿಲಾಸವು ನಾಟ್ಯ, ನೃತ್ಯ, ಚಿತ್ರಗಳಿಂದ ಪೂರೈಸುವವೆಂದು ಬಡಮಾನವನಿಗೆ ಮತ್ತಷ್ಟು ಸಿಟ್ಟು. ಇದು ಕಲೆಯ ಅಭಾವದಿಂದಾಯಿತೇ ಹೊರತು, ಅದರ ಇರುವಿಕೆಯಿಂದಲ್ಲ. ಕಲೆಯು ವಿಲಾಸದ ಒಡವೆಯೆಂದು ಯಾರು ತಿಳಿಯದಿರಲಿ. ಇನ್ನೀಗ ಮಾನವನ ಎರಡನೆಯ ರಾಜ್ಯವು ಮನಸ್ಸು, ಮಾನಸಿಕ ಶ್ರೀಮಂತಿಕೆಯಂತೆ ಎಲ್ಲರಲ್ಲಿರುವ ವಸ್ತುವಲ್ಲ. ಉಳಿದವರ ಹೇಳಿಕೆ ಕೇಳಿಕೆಗಳಿಗೆ ಅಂಜದೆ, ಸ್ವತಂತ್ರವಾಗಿ ವರ್ತಿಸುವುದೆಂದರೆ ಅದು ತೀರ ಕಷ್ಟ. ಈ ಸ್ವಾತಂತ್ರ್ಯವು ಶರೀರ ಸುಖ, ವಿಷಯ ಭಾವನೆಗಳ ತಾಳಕ್ಕೆ ಸರಿಯಾಗಿ ಕುಣಿಯುವುದಾಗಬಾರದು. ಹಾಗಾದರೆ ಅನ್ನ ಪಿಂಡಕ್ಕಾಗಿ ಸ್ವೇಚ್ಛೆಯನ್ನು ವಿಕ್ರಯಿಸಿಕೊಂಡಂತೆಯೇ ಸರಿ. ಇಂಥ ಸ್ವತಂತ್ರ ಮನೋರಾಜರಿಗೂ ಮೇಲಿರಿಸಿದವರೇ ಶುದ್ಧಬುದ್ಧಿಯುಳ್ಳವರು. ಸತ್–ಅಸತ್ ಇವುಗಳ ವಿವೇಚನೆಯನ್ನು ಮಾಡಿ ಸನ್ಮಾರ್ಗವನ್ನು ಹಿಡಿಯಬಲ್ಲ ಬುದ್ಧಿಯೇ ಶುದ್ಧಬುದ್ಧಿಯು. ಆಗಲೂ ಅದು ಮನಸ್ಸಿಗೆ ಸ್ವೇಚ್ಛೆಗೆ ಅಡಿಯಾಳಾಗಿರಬಹುದು. ಮನಸ್ಸು ಜಗವನ್ನು ಅಲಕ್ಷಿಸಿ ಸ್ವತಂತ್ರವಾಗಿ ವರ್ತಿಸಲು ಶಕ್ತವಾಗಿರಬಹುದಾದರೂ ಅದು ಸರಿಯಾದ ರೀತಿಯಲ್ಲೇ ವರ್ತಿಸುವುದೆಂದೇನು ಗೊತ್ತು? ಅದರ ಸ್ವಾರ್ಥಮಯ ಹೇಳಿಕೆಯನ್ನು ಮೀರಿ ಮುಂದೆ ಹೋದರೆ ಮಾತ್ರ ಬುದ್ಧಿಯ ಪ್ರಾಪ್ತಿ. ಪವಿತ್ರ ಬುದ್ಧಿಯಿಂದಲೇ ಪರಮಾತ್ಮನ ಪ್ರಾಪ್ತಿ.

ರಮಣೀಯತೆ ಕಾಣದೆ ಪ್ರೇಮವಿಲ್ಲ. ಪ್ರೇಮವು ಉಂಟಾಗದೆ ಆನಂದವಿಲ್ಲ. ಆನಂದವಿಲ್ಲದ್ದು ಬಾಳ್ವೆಯಿಲ್ಲ. ವಿಕಾಸವು ಯಾವ ಪ್ರಾಣಿಗಾಗಲಿ, ಹೆಚ್ಚು ಹೆಚ್ಚಿನ ಸಂಕುಚಿತ ಆವರಣದಿಂದ ಬರಲಾರದು. ಪರಕೀಯ ವಸ್ತುಗಳೊಡನೆ ಐಕ್ಯವನ್ನು ಕಾಣುತ್ತ ಹೋದರೆ ಆನಂದ ಸಿಗುವುದು.

**ಕಲೆ ಎಂದರೇನು? (ಟಾಲ್‌ಸ್ಟಾಯ್)**

"ಕಲೆಯೆಂಬ ಮಾತಿನ ಮರ್ಮವು ಎಲ್ಲರಿಗೂ ತಿಳಿದಂತಿದೆ, ತಿಳಿಯದಂತೆಯೂ ಇದೆ. ಕಲೆಯೆಂದರೆ ಸೌಂದರ್ಯ. ಆದರೆ ಸೌಂದರ್ಯವೇನೆಂದು ಇವರೆಲ್ಲರೂ ಅರಿತವರೋ ಎಂಬುದು ಸಂಶಯ. ಸಾಮಾನ್ಯವಾಗಿ ಒಬ್ಬನಿಗೆ ಸುಂದರವಾಗಿ ಕಾಣಿಸಿದುದು ಇನ್ನೊಬ್ಬನಿಗೆ ಅಷ್ಟೇ ಚೆಲುವಿನದಾಗಿ ಕಾಣಿಸದು. ಒಬ್ಬನ ಕಣ್ಣಿಗೆ, ಕತ್ತೆಗಿಂತ ಕುದುರೆಯು ಚೆಂದವೆಂದು ಕಾಣಿಸಿದರೆ, ಇನ್ನೊಬ್ಬನಿಗೆ ಕುದುರೆಗಿಂತ ಕತ್ತೆಯೇ ಅಂದವೆಂದು ತೋರಬಹುದು. ಆದರೆ ಬಹುಜನರ ಒಪ್ಪಿಗೆ ಕಲೆಯು ಸೌಂದರ್ಯ, ಸೌಂದರ್ಯವು ಆನಂದ ಎಂದು ಸೌಂದರ್ಯದ ಚಿತ್ರವನ್ನು ನಮ್ಮ ಮುಂದಿರಿಸಿ, ಅದನ್ನು ನಮಗುಣಿಸಿ ಅದರಿಂದ ನಮಗೆ ಆನಂದ ಉಂಟಾಗುವಂತೆ ಮಾಡುವವನೇ ಕಲಾಕುಶಲನು".[೮]

ಕಲೆಯು ಆನಂದವನ್ನೇಕೆ ಕೊಡಬೇಕು ಎಂದು ಕೇಳಿದರೆ–"ಕಲೆಯು ಆನಂದದಿಂದ ಹುಟ್ಟಿದುದೆಂಬುದರಿಂದ, ಅದು ಆನಂದವನ್ನು ಹುಟ್ಟಿಸುವುದು" ಎಂದು ಉತ್ತರ. ಆನಂದದ ಬಗೆಗೆ ಭಿನ್ನ ಭಿನ್ನ ಕಲ್ಪನೆಗಳಿವೆ. ಕಲೆಗಳಲ್ಲಿ–ಕಾವ್ಯವೇ ಆಗಲಿ, ಯಾವ ಬಗೆಯಿಂದಿದ್ದರೆ ಮಾತ್ರ ಆನಂದವಾಗುವುದು ಎಂಬ ವಿಚಾರದಲ್ಲಿ ಹಲವು ಮತಗಳಿವೆ. ಕಾರಣ, ಇಂದು ನಮ್ಮೆಲರ ಭೋಗಸಾಮಗ್ರಿಗಳು ಒಂದೇ ಆಗಿಲ್ಲ. ಒಬ್ಬನಿಗೆ ಉಣ್ಣುವುದರಲ್ಲಿ ಮರುಳು, ಒಬ್ಬನಿಗೆ ಉಡುಗೆಯಲ್ಲಿ

ಮನಸ್ಸು, ಮತ್ತೊಬ್ಬನಿಗೆ ಕಾಮಿನಿಯರಲ್ಲಿ ಇಷ್ಟ. ನಾಲ್ಕನೆಯವನಿಗೆ ಪ್ರಕೃತಿ ಬೆಡಗಿನಲ್ಲಿ ಪ್ರೇಮ. ಐದನೆಯವನೊಬ್ಬನಿಗೆ ದೇವರಿಗಾಗಿ ಹಸಿದಿರುವ ಸನ್ಯಾಸಿ. ತಾವು ತಾವು ಬಯಸುವ ವಸ್ತುಗಳು ತಮ ತಮಗೆ ದೊರೆತರೆ ಅವರೆಲ್ಲರಿಗೂ ಸುಖ. ಆನಂದ ದೊರೆಯದೆ ಹೋದರೆ ಹೇಳಲಾರದಷ್ಟು ದುಃಖ. ಒಬ್ಬನಿಗೆ ಆನಂದಕಾರಿಯೆನಿಸುವ ಗುರಿಯು ಮತ್ತೊಬ್ಬನಿಗೆ ಅಸಹ್ಯಕಾರಿಯೆನಿಸುವುದು. ಈ ತಳಮಳದಲ್ಲಿ ಸೌಂದರ್ಯವು ಆವುದರಲ್ಲಿದೆ ಎಂದು ಹುಡುಕಲಿ? ಸೌಂದರ್ಯವಾಗಲಿ, ಆನಂದವಾಗಲಿ, ಕೇವಲ ಭೋಗಿಯ ಮಾನಸಿಕ ಶಕ್ತಿಯನ್ನು ಅನುಸರಿಸುವುದಾದರೆ ಅದೊಂದು ಅಚೇತನವಸ್ತುವೆಂದೇ ಆಯಿತು. ಹೀಗಿರಲು ಅಂಥ ಚೈತನ್ಯ ಶೂನ್ಯ ವಸ್ತುವು ಎಂಥ ನಿಜ ಆನಂದವನ್ನು ಕೊಡುವುದಂತೆ! ಕಲಾವಂತನು ನಮಗಾನಂದವನ್ನು ಕೊಡಲು ತಾನು ಹೇಗೆ ಅದನ್ನು ಸವಿದವನಾಗಿರಬೇಕೋ, ಯಾವ ವಸ್ತುವೇ ಆಗಲಿ ಅದು ನಮಗೆ ಆನಂದ ಕೊಡಬೇಕಾದರೆ, ಸ್ವತಃ ಅದರಲ್ಲಿ ಆನಂದವು ತುಂಬಿರಬೇಕು. ಅದರ ಆನಂದವು ಅದರಲ್ಲೇ ನೆಲೆಯಾಗಿರಬೇಕು. ಅದಕ್ಕಾಗಿಯೇ ಕೀಟ್ಸ್ ಎಂದಿರುವನು "ಸತ್ಯವೇ ಸೌಂದರ್ಯ". ಅಂಥ ಸತ್ಯವು ಒಂದಿರಬಹುದು. ಅದೇ ದೇವನು. ಅವನೇ ಯಾವತ್ತು ಸೃಷ್ಟಿಯ ವಿಶ್ವಕರ್ಮನು. ಅವನು ತನ್ನಲ್ಲಿರುವ ಅತಿಶಯ ಆನಂದವನ್ನು ತನ್ನ ಸೃಷ್ಟಿಯ ಮೂಲಕ ಪ್ರತಿ ನಿಮಿಷಕ್ಕೂ ಹೊರಸೂಸುತ್ತಿರುವನು.

ಕಲಾವಿದನು ಅಶಾಶ್ವತವಾದ ವಸ್ತುಗಳ ರೂಪದಲ್ಲಿ ಮರುಳಾದರೆ ಸೌಂದರ್ಯವನ್ನು ಎಂದೂ ಕಾಣಲಾರನು. "ಇಂದ್ರಿಯ ಸುಖಗಳನ್ನು ಉತ್ಪನ್ನಗೊಳಿಸತಕ್ಕ ಕಲೆಯು ಕಾಲದೇಶ ಬಾಧಿತವಾದುದು. ನೈಜ ಕಲೆಯು 'ವಿಶ್ವ ಅಂತರಂಗ'ವನ್ನು ಬಹಿರಂಗಪಡಿಸಿ, ಮನದಟ್ಟು ಮಾಡಿ, ಅದರ ಕ್ಷಣಭಂಗುರತೆಯಿಂದ ನಮ್ಮನ್ನು ಅನಂತತೆಗೆ ಸೆಳೆಯುವುದು. ನಮ್ಮಲ್ಲೊಂದು ಅಪಾರ ಚೇತನವನ್ನುಂಟು ಮಾಡುವುದು. ಅದು ನಮ್ಮನ್ನು ನಮಗಿಂತ ಮೇಲಕ್ಕೆತ್ತುವುದು. ನಾವಾಗ ಅನಾಸಕ್ತ ನಿರಂಕಾರ ಭಾವಗಳಿಂದ ಆ ಭವ್ಯತೆಯ ಚಿಂತನೆಯನ್ನು ಆಶಾಭೀತಿರಹಿತರಾಗಿ ಮಾಡುವೆವು. ಅದರಿಂದ ನಮಗೆ ಒಂದು ತಾತ್ಕಾಲಿಕ ಸಮಾಧಿಯೇ ಉಂಟಾಗುವುದು. ಅದರಿಂದೆಚ್ಚತ್ತು ನೋಡಲು ಪ್ರಪಂಚದ ಕಾಠಿಣ್ಯವೆಲ್ಲ ಕಣ್ಣನ್ನು ಕುಕ್ಕುವಂತಾಗುವುದು. ಹೀಗಾಯಿತೆಂದರೆ ನಾವು ಕಲೆಯು ತೋರಿಸುವ ಆನಂದದ ಹಾದಿಯನ್ನು ಹಿಡಿಯಲು ಸಹಜವಾಗಿ ಯತ್ನಿಸುವೆವು. ಹೀಗಾಗಿ ಕಲೆಯು ತನ್ನ ಶ್ರೇಷ್ಠತೆಯನ್ನು ಕಾಯ್ದುಕೊಳ್ಳಬೇಕಾದರೆ ಅದರಲ್ಲಿ ಹೆಚ್ಚಿನ ಆನಂದವನ್ನು ಕೊಡುವ ಯೋಗ್ಯತೆಯಿರಬೇಕು. ಅದು ತಿರುಗಿ ನಮ್ಮನ್ನು ಪ್ರಪಂಚದ ಹುಚ್ಚಿಗೆ ಹಚ್ಚಿಸುವುದಾದರೆ ನಮ್ಮನ್ನು ಅಂಧಕಾರದಲ್ಲಿ ತಳ್ಳಿದಂತೆಯೇ ಸರಿ. "ನಿಜವಾದ ಕಲೆಯು ನಮ್ಮನ್ನು ಸಂಸಾರಯಂತ್ರದಿಂದ ಸೆಳೆಯುವುದು. ಅದರ ಕ್ಷುಲ್ಲತೆಗಿಂತ ನಮ್ಮ ಆತ್ಮವನ್ನು ಮೇಲೇರಿಸುವುದು. ಅದಕ್ಕಾಗಿ ನಾವು ನಮ್ಮನ್ನೇ ಮರೆಯುವೆವು." ಹೀಗೆ "ನಮ್ಮನ್ನು ನಾವು ಮರೆಯುವಂತೆ ಮಾಡುವುದೇ ಕಲೆಯ ಮರ್ಮ" ಇದರಿಂದ ಕವಿ ರವೀಂದ್ರರು ಹಾಡಿರುವರು.

"ನನಗೆ ನೀನೊಬ್ಬನೇ ಬೇಕು" ಎಂಬ ಮಂತ್ರವನ್ನು ನನ್ನ ಹೃದಯವು ತುದಿ ಮೊದಲಿಲ್ಲದೆ ಪಠಿಸಲಿ. "ನನ್ನ ಮನಸನ್ನು ಹಗಲಿರುಳು ಬೇರೆ ಹಾದಿಗೆ ಸೆಳೆಯುತ್ತಿರುವ ಯಾವತ್ತೂ ಆಶೆಗಳು ಶೀರ ಸುಳ್ಳು, ಏನೇನೂ ಹುರುಳಿಲ್ಲದವುಗಳು."

ಇಷ್ಟೊಂದು ಕಾರಣಗಳಿಂದ ಕಲೆಗಾದರೂ ಪಾರಮಾರ್ಥಿಕ ಸ್ವರೂಪವೇ ಬರುವುದು. ಅದು ಒಂದು ಬಗೆಯ ಯೋಗಸಾಧನೆ. ಯಾವತ್ತು ಪ್ರಾಪಂಚಿಕ ವಿಧಾನಗಳೂ ಅದಕ್ಕೊಂದು ಬಗೆಯ ತಡೆಗಳು. "ಇದೆಲ್ಲ ಧಾರ್ಮಿಕ ಭ್ರಾಂತು ಎಂದು ಯಾರು ತಿಳಿಯಹೋದರೂ ಭಾರತೀಯ ಕಲಾನಿಪುಣನು ತಿಳಿಯನು. ಭಾರತೀಯರಿಗೆ ಜೀವನದ ಉಣ್ಣುವ, ತಿನ್ನುವ, ಹಾಡುವ, ಮಾಡುವ, ಎಲ್ಲಾ ಕೆಲಸಗಳು ಧಾರ್ಮಿಕವಾಗಿಯೇ ನಡೆಯಬೇಕು. ಅಲ್ಲದಿದ್ದರೆ ಅದು ಅವನಿಗೆ ಮಾನವೀ ಬಾಳ್ವೆಯೆನಿಸದು." ಎಂದು ಕಲೆಯು ಪಾರಮಾರ್ಥಿಕ ಸ್ವಾತಂತ್ರ್ಯವನ್ನು ಹುಟ್ಟಿಸದೆ ಕೇವಲ ವಿಷಯಗಳ ಭೋಗವೆನಿಸುವುದೋ, ಆಗ ಅದು ಕಲೆಯ ಕರ್ತವ್ಯವನ್ನೇ ಭ್ರಷ್ಟಗೊಳಿಸುವುದು.

ಆದುದರಿಂದ "ಕಲಾನಿಪುಣನ ಪಾಲಿಗೆ ಧಾರ್ಮಿಕ ಸೃಷ್ಟಿಯೇ ಶ್ರೇಷ್ಠವೂ ಸತ್ಯವೂ ಆದ ಆದರ್ಶವು". ರೂಪ ನಿರ್ಮಾಣ ಮಾಡುವುದೊಂದೇ ಕಲಾಕೋವಿದನ ಕೆಲಸವಲ್ಲ. ಅವನಿಗೆ ಇದಕ್ಕೂ ಹಿರಿದೆನಿಸಿದ ಗುರಿಯೊಂದಿದೆ. ತನ್ನ ಕೃತಿಯಲ್ಲಿ ನಿತ್ಯ ಸತ್ಯ ಸೌಂದರ್ಯವನ್ನು ಪ್ರತಿಬಿಂಬಿಸಬೇಕಾಗಿದೆ" ಎಂದು ಪ್ರಸಿದ್ಧ ಬಂಗಾಳಿ ಚಿತ್ರಕಾರ ಅಸಿತಕುಮಾರಹಲ್ದಾರನು ನುಡಿದಿರುವನು. ಹೀಗೆ ಮಾಡಲು ಅವನು ತುಂಬಾ ಪರಿಶ್ರಮ ಪಡಬೇಕು. ಅವನು ಒಬ್ಬ ಸಾಧುವಾಗಬೇಕು. ಅಂತಹ ನಿತ್ಯಸತ್ಯದ ಸಲುವಾಗಿ ಅವನು ಸದಾ ಹಸಿದಿರಬೇಕು. ಯಾವತ್ತು ಸೃಷ್ಟಿಯಲ್ಲಿ ಅವನು ವರವನ್ನು ಕಾಣಲು ಶಕ್ತನಾಗಬೇಕು. ಅದನ್ನು ಕಂಡು ಆನಂದಿಸಬೇಕು. ಇಂತಹ ಆನಂದವನ್ನು ತನ್ನ ರಚನೆಯಲ್ಲಿ ಪ್ರಕಟಗೊಳಿಸಬೇಕು. ಇತ್ತ ಆನಂದದ ಆಸ್ವಾದನೆಗೆ ಹಸಿದಿರುವುದು, ಅತ್ತ ಅದನ್ನು ತಾನುಂಡು ಪರರಿಗುಣಿಸಲು ಯತ್ನಿಸುವುದು. ಇದವನ ಗುರಿ. ಅವನ ಹಂಬಲವು ಸದಾ ಹೀಗಿರಬೇಕು.

"ಯಾವುದಾದರೊಂದು–ಅತಿಸುಂದರವೂ, ಅದ್ಭುತವೂ, ಆದ ಕನಸೊಂದನ್ನು ಕಾಣಬೇಕು. ಅದು ಹಿಂದಾಗಿರಬಾರದು. ಇನ್ನಾಗಬಾರದು. ಇದುವರೆಗೆ ಕಾಣಿಸಿಕೊಂಡ ಜ್ಯೋತಿಯಲ್ಲಿ ಕಾಣಿಸಬಾರದು. ಎಲ್ಲಿ, ಏನು, ಹೇಗೆ, ಎಂದು ಸ್ಮರಣೆಗೂ ಬಾರದ ನಾಡಿನಲ್ಲಿ ಕಂಡ ಚಿತ್ರವಾಗಿರಬೇಕು. ಹೆಚ್ಚೇನು? ಕೇವಲ ಬಯಸತಕ್ಕ ದೈವೀ ಸೌಂದರ್ಯವಾಗಿರಬೇಕು." ಇಂಥ ಅಪೂರ್ವ, ಬಹುಮಟ್ಟಿಗೆ ಅಸಾಧ್ಯವೆಂದೇ ಕಾಣುವ ಬಯಕೆ ಅವನದು. ಅವನೊಬ್ಬ ಅಲೌಕಿಕ ಚಿತ್ರವನ್ನು ಬರೆಯಬೇಕೆಂದು ಬಯಸುವ ಭಕ್ತನು. ಅಂಥವನು ಸಾಮಾನ್ಯ ಸ್ಫೂರ್ತಿಯಿಂದ ತೃಪ್ತನಾಗುವನೇ? ಸಾಮಾನ್ಯ ಆನಂದದಿಂದ ಸಂತೋಷಗೊಳ್ಳುವನೇ? ಸಾಮಾನ್ಯ ಸೌಂದರ್ಯದಿಂದ ಮೋಹಿತನಾಗುವನೇ? ಅಸದೃಶ್ಯ, ಅಲೌಕಿಕ, ಅನುಪಮ, ಅನಂತ, ಅಖಂಡ, ಅಚ್ಯುತ, ಆನಂದವನ್ನು ಕೊಡಲು ಅವನು ಬಯಸುವುದಾದರೆ ಅವನಿಗಿನ್ನೆಂಥ ಗುರು ಬೇಕು?

ಆದರೆ ಅಂತಹ ಬಾಯಾರಿಕೆಯಿಂದ ತಪ್ಪಿಸುವವರು ಜನಸಾಮಾನ್ಯರ ಪಾಲಿಗೆ ಕಲಾಕೋವಿದರಾಗಿ ಕಾಣಿಸುವರೆಂದೆನ್ನಲು ಬಾರದು. ಅವರನ್ನು ಜಗವು, "ನೀತಿಕಾರರು" ಎಂದು ಸಾರುವುದು. ಅವರ ಅಪರಾಧವಿಷ್ಟೇ ಅವರು ದೇವರ ಸುದ್ದಿಯನ್ನೆತ್ತುವರು. ಅವರಿಗೆ ಸಾಂಸಾರಿಕ ವಿಷಯದ ಸವಿಯ ಮರುಳಿಲ್ಲ.

ಕೈ, ಕೌಂಟ್‌ಲಿಯೋ ಟಾಲ್ಸಟಾಯಿಯವರ ಜೀವನವು ಇಂಥ ಆದರ್ಶದ ಸಲುವಾಗಿ ವ್ಯಯಿಸಲ್ಪಟ್ಟಿತ್ತು. ಅವರ ಕೃತಿಗಳಲ್ಲಿ ಇಂಥ ಭಾವಗಳೇ ಹೊರಹೊಮ್ಮಿದ್ದುವು. ಆದುದರಿಂದ ಹಲವರು ಅವನನ್ನು ಕಲಾಕುಶಲರ ಸಾಲಿನಲ್ಲೆಣಿಸುವುದಿಲ್ಲ. ಆದರೆ ಮೇಲೆ ಹೇಳಿದ ಬೆಳಕಿನಲ್ಲಿ ಕಲೆಯೆಂದರೇನೆಂದು ವಿಚಾರ ಮಾಡಿದ್ದಲಿ–ಅವರೊಬ್ಬ ಶ್ರೇಷ್ಠ ಕಲಾಕೋವಿದರೆಂದು ತಿಳಿಯಬಹುದು.

"ಟಾಲ್ಸಟಾಯಿಯುವರು ಒಮ್ಮೆ ಶ್ರೀ ಗೋರ್ಕಿಯುವರೊಡನೆ ಅಂದಿದ್ದರಂತೆ ಸೌಂದರ್ಯವೆನ್ನುವಿರಾ? ದೇವನೇ ಅತಿ ಶ್ರೇಷ್ಠ ಮತ್ತು ಪರಿಪೂರ್ಣ ಸೌಂದರ್ಯವು."

ದುಷ್ಯಂತ ವಿರಹದಿಂದ ಶಕುಂತಲೆಯ ಚಿತ್ರ ಬಿಡಿಸುವಾಗ ದುಷ್ಯಂತನ ಕಣ್ಣಿನಿಂದ ಬಿದ್ದ ನೀರು ಶಕುಂತಲೆಯ ಕೆನ್ನೆಯ ಮೇಲೆ ಬಿದ್ದಿದೆ. ಅದು ಎಷ್ಟು ರೀಪೇರಿ ಮಾಡಿದರೂ ಹೋಗುತ್ತಿಲ್ಲ ಎಂದು ಸ್ನೇಹಿತನಿಗೆ ಹೇಳಿದಳು.

"ಕಾಳಿದಾಸನ ಕಣ್ಣಿನಿಂದ: (ಪು.ಸಂ.೧೦) ಸುಂದರವಾದ ವಸ್ತುಗಳನ್ನು ನೋಡಿದಾಗ ಅಥವಾ ಮಧುರವಾದ ಸ್ವರವಿನ್ಯಾಸವನ್ನು ಕೇಳಿದಾಗ ಮನುಷ್ಯನು ಸಂತೋಷಭರಿತನಾಗುತ್ತಾನಲ್ಲದೆ ಗರ್ವದಿಂದ ಉತ್ಸಾಹದಿಂದ ಉಬ್ಬುವನು. ಸಂಗೀತವು ಮನಸ್ಸನ್ನು ಗಾಢವಾಗಿ ಗಂಭೀರವಾಗಿ ಕೆದಕುವ ಹುರಿದುಂಬಿಸುವ ಗುಣಗಳನ್ನು ಹೊಂದಿದ್ದರೂ ಸುಂದರ ವಸ್ತುಗಳ ಸ್ವರೂಪಗಳು ಕಣ್ಣಿನ ಮೂಲಕ ಮನಸ್ಸಿನ ಮೇಲೆ ಇನ್ನೂ ಹೆಚ್ಚಿನ ಪರಿಣಾಮವನ್ನು ಮಾಡುವ ಸಾಮರ್ಥ್ಯವನ್ನು ಹೊಂದಿವೆ. ಎಂದು ಕಾಳಿದಾಸನು ಹೇಳುತ್ತಾನೆ. ಪೂರ್ವೀ ದೇಶಗಳ ಕಲೆ ಕಣ್ಣಿಗೆ ಕಂಡಂತೆ ಚಿತ್ರಿಸುವ ಸ್ವರೂಪ ಹೊಂದಿದ್ದರೆ ಭಾರತೀಯ ಕಲೆ ಕಣ್ಣಿಗೆ ಕಂಡದ್ದರ ಜೊತೆಗೆ ಸ್ಪರ್ಶದ ಅನುಭವವನ್ನು ಕೂಡ ಕೊಡುವ ಲಕ್ಷಣವನ್ನು ಹೊಂದಿದೆ. ಈ ಸ್ಪರ್ಶದ ಅನುಭವವನ್ನು ಹೇಳುವುದೆಂದರೆ ಚಿತ್ರದ ಒಳಮೈ ಪ್ರವೇಶ ಮಾಡುವುದು. ಅಂದರೆ ಮೂರನೆಯ ಆಯಾಮದತ್ತ ಕಣ್ಣನ್ನು ಸೆಳೆದು ಆಳದತ್ತ ದೃಷ್ಟಿಯನ್ನು ಒಯ್ಯುವುದು. ಕಾಳಿದಾಸನ ಕಾವ್ಯದಲ್ಲಿ ದುಷ್ಯಂತನು "ತನ್ನ ಕಣ್ಣುಗಳು ಚಿತ್ರದ ಮೇಲ್ಮೈಯ ಉಬ್ಬು ತಗ್ಗುಗಳ ಮೇಲೆ ಓಡಾಡುತ್ತವೆ" ಎಂದು ಹೇಳುವುದರ ಅರ್ಥದಲ್ಲಿ ನಮ್ಮ ಭಾರತೀಯ ಕಲೆಯ ವಿಶೇಷತೆಯ ಅರಿವು ನಮಗಾಗುತ್ತದೆ. ಅತಿ ಕಡಿಮೆ ರೇಖೆಗಳಲ್ಲಿ ಮೂಡಿಬಂದದ್ದು ಉತ್ತಮ ಚಿತ್ರವಾಗುವುದು. ಹಾಗೆಯೇ ರೇಖೆಗಳನ್ನು ಮಿತವಾಗಿ ಬಳಸಿದ್ದರೂ ಅದರಲ್ಲಿ ಆಕಾರಗಳು ತಮ್ಮ ಪೂರ್ಣ ರೂಪವನ್ನು ಹೊರಹೊಮ್ಮುವ ಆದರ್ಶಗಳನ್ನು ಹೊಂದಿರುತ್ತವೆ. ಇದು ರೇಖೆಯಲ್ಲಿಯ ಶಕ್ತಿಯನ್ನು ಸಾಮರ್ಥ್ಯವನ್ನು ಸೂಚಿಸುತ್ತದೆ. ಅತಿಶಯವಾದ ಆಲಂಕಾರಿಕ ರೇಖೆಗಳು ಹಾಗೂ ದಟ್ಟವಾದ ಗಟ್ಟಿಯಾದ ಬಣ್ಣಗಳ ಬಳಕೆ–ಇವೆರಡೂ ಉತ್ತಮ ಚಿತ್ರವಾಗಲು ಕಳಂಕ. ಚಿತ್ರಲಕ್ಷಣವನ್ನು ಕೂಡ ಆಗಲೇ ಗುರಿತಿಸಲಾಗಿತ್ತು."[೧೦]

ಕಲೆ ಒಂದೇ: (ಪು.ಸಂ.೧೪) ಕಲೆಯಲ್ಲಿ ಒಳ್ಳೆಯ ಕಲೆ ಕೆಟ್ಟ ಕಲೆ ಎನ್ನುವುದು ಇರುವುದಿಲ್ಲ. ಎಲ್ಲ ಕಲೆ ಒಳ್ಳೆಯ ಕಲೆಯೇ ಆಗಿರುತ್ತದೆ. ನಾವು ಮನಸ್ಸಿನಲ್ಲಿ ಇಂಥದ್ದು ಒಳ್ಳೆಯದು ಎಂದು ಅಭಿಪ್ರಾಯ ಮಾಡಿಕೊಂಡಿರುತ್ತೇವೆ. ಅಂಥ ಅಥವಾ ಆ ಅಭಿಪ್ರಾಯಕ್ಕೆ ಹೋಲುವ ಚಿತ್ರ ಕಂಡಾಗ ಅದು ನಮಗೆ ಪ್ರಿಯವಾಗುತ್ತದೆ. ಸೇರುತ್ತದೆ. ಹಾಗಾಗಿ ಆ ಚಿತ್ರ ಒಳ್ಳೆಯದು ಎನಿಸುತ್ತದೆ.

ಚಿತ್ರಶಾಲೆಗಳ ಪರಂಪರೆ: ಕವಿಯಾದವನು ತನ್ನ ಭಾವನೆಗಳನ್ನು ಶಬ್ದಗಳ ಸಹಾಯದಿಂದ ಹೊರಗಿಡುವನು. ಪ್ರಾಸ, ರಚನೆ, ಅಲಂಕಾರ ಇವುಗಳ ಸಹಾಯದಿಂದ ನಿರಾಕಾರವಾದ ಭಾವನೆಗೊಂದು ಆಕಾರವನ್ನು ನಿರ್ಮಿಸುವನು. ಅವನ ಅಕ್ಷರ ಶಬ್ದ ಅಲಂಕಾರಗಳು ತಮ್ಮಷ್ಟಕ್ಕೆ ಭಾವಗಳೆನ್ನಿಸಲಾರವು. ಅವು ಭಾವನಾಮಂದಿರಕ್ಕೆ ನಮ್ಮನ್ನೊಯ್ಯುವ ಹಾದಿಗಳು ಮಾತ್ರ. ಹಾಗೆಯೇ ಗಾಯಕನ ಸಪ್ತ ಸ್ವರಗಳ ಸಹಾಯದಿಂದ ಸೌರಸ್ಯ(Harmones), ವಿಭಿನ್ನತೆ(Variants) ತಾಳ, ಆಲಾಪ ಇತ್ಯಾದಿ ಸ್ವರಶಾಸ್ತ್ರ ವಿಧಾನಗಳಿಂದ, ನಿರ್ಜೀವ ವೀಣೆಯ ತಂತಿಗಳ ಮೇಲೆ ಸಜೀವಗಾನದ ತೆರೆಗಳನ್ನೇಳಿಸಿ ಅವುಗಳಿಂದ ತನ್ನ ಅಂತರಂಗದ ಭಾವನೆಗಳಿಗೊಂದು ರೂಪವನ್ನು ಕೊಡುವನು. ಚಿತ್ರಕಾರನ ಪಾಲಿಗೆ ಈ ಸಾಮಗ್ರಿಗಳಾವುವೂ ಇಲ್ಲ. ಅವುಗಳು ಅವನ ಭಾವಕ್ಕೆ ರೂಪವೀಯಬೇಕಾಗಿದೆ. ಚಿತ್ರಕಾರನ ಕಾರ್ಯವಿಧಾನಗಳನ್ನು ಮೂರನೇ ಶತಮಾನದಲ್ಲಿ ಬದುಕಿದ ವಾತ್ಸಾಯನನು ಹೀಗೆ ಆರು ವಿಭಾಗಗಳನ್ನು ಮಾಡಿದ್ದನು.

೧. ರೂಪಭೇದ

೨. ಪ್ರಮಾಣ

೩. ಭಾವ

೪. ಲಾವಣ್ಯಯೋಜನೆ

೫. ಸಾದೃಶ್ಯ

೬. ವರ್ಣಿಕಾಭಂಗ.

೧. "**ರೂಪಭೇದ:** ಚಿತ್ರಿಸತಕ್ಕ ವಸ್ತುವಿಗೆ ಏನಾದರೊಂದು ರೂಪವು ಬೇಕೇ ಬೇಕು. ಅದರ ಆಕಾರ, ರೂಪ ವ್ಯತ್ಯಾಸಗಳನ್ನು ನಿರ್ಧರಿಸುವ ಕಾರ್ಯಕ್ಕೆ ರೂಪಭೇದವೆಂದು ಹೆಸರು.

**೨. ಪ್ರಮಾಣ:** ಆ ಚಿತ್ರದಲ್ಲಿ ಭಿನ್ನ ಭಿನ್ನ ಅವಯವಗಳನ್ನು ಯಾವ ಅಳತೆಯಲ್ಲಿ ಬಿಡಿಸಬೇಕೆಂಬ ಶಾಸ್ತ್ರವದು. ಶಿಲ್ಪದಲ್ಲಾದರೂ ಕೆತ್ತತಕ್ಕ ಮೂರ್ತಿಗಳು ಯಾವ ಯಾವ ಪ್ರಮಾಣದಲ್ಲಿರಬೇಕೆಂಬ ಒಂದು ಕಟ್ಟುನಿಟ್ಟಿನ ದಾರಿಯಿದೆ. ಈ ರೀತಿಯಲ್ಲಿ ಸಿದ್ಧಾಂತಗೊಳಿಸಲ್ಪಟ್ಟ ಪ್ರಮಾಣಗಳನ್ನೇ ಎಲ್ಲರೂ ಉಪಯೋಗಿಸಿದಲ್ಲಿ ಅವುಗಳನ್ನು ತಿಳಿಯಲು ಸುಲಭವಾಗಿ ಆಗುವುದಲ್ಲದೆ, ಕಲಾಕುಶಲರು ಸಹ ಹಾದಿ ಬಿಟ್ಟು ತೀರ ದೂರಾಗುವ ಭೀತಿಯಿಲ್ಲ.

**೩. ಭಾವ:** ಸಂತೋಷ, ಸಂತಾಪ, ಕೋಪ, ಕ್ರೌರ್ಯ, ವಿರಹ ವಿನಯ, ಇವೇ ಮೊದಲಾದ ಮನೋವಿಕಾರಗಳನ್ನು ಚಿತ್ರಿಸುವ ಬಗೆಯಾಗಿದೆ.

**೪. ಲಾವಣ್ಯಯೋಜನೆ:** ಬಣ್ಣ, ಉಡಿಗೆತೊಡಿಗೆ, ಇವುಗಳ ಸಹಾಯದಿಂದ ಚಿತ್ರವು ಮತ್ತಷ್ಟು ಸುಂದರವಾಗುವಂತೆ ಮಾಡುವ ಶಾಸ್ತ್ರವಾಗಿದೆ.

**೫. ಸಾದೃಶ್ಯ:** ಯಾವ ಚಿತ್ರವನ್ನು ಬರೆಯಲು ಮನಸ್ಸು ಮಾಡಿರುವನೋ ಅದನ್ನೇ ಮೂಡಿಸುವ ಯತ್ನ.

**೬. ವರ್ಣಿಕಾಭಂಗ:** ಇಲ್ಲಿ ಬರುವ ವಿಷಯವೆಂದರೆ ಚಿತ್ರಕಾರನು, ಕುಚ್ಚು(Brush) ಬಣ್ಣ ಮೊದಲಾದವುಗಳನ್ನು ಸಿದ್ಧಮಾಡುವುದು, ಚಿತ್ರ ಬರೆಯುವ ಪೂರ್ವದಲ್ಲಿ ಕೈಗೊಳ್ಳುವ ಇತರ ಸಿದ್ಧತೆಗಳು, ಈ ಆರೂ ಸೇರಿ ಚಿತ್ರಕಾರನ ಪಾಲಿಗೆ ಶೃತಿಗಳಾಗುವವು. ಇಷ್ಟರಿಂದಲೇ ಅವನು ಚಿತ್ರಕಲೆಯಲ್ಲಿ ನಿಪುಣನೆನಿಸನು. ಶೃತಿಗಳ ಜ್ಞಾನವನ್ನು ಅವನು ಪರಂಪರೆಯಿಂದಲೋ, ಗುರುವಿನಿಂದಲೋ ಅರಿತುಕೊಳ್ಳಬಹುದು. ಅವನಿಗೊಂದು ಸ್ಮೃತಿಯು ಬೇಡವೇ? ಅದೇ ಅವನು ತನ್ನ ಏಕಾಗ್ರತೆಯೆಂಬ ಯೋಗಬಲದಿಂದ ವಸ್ತುಗಳ ನಿರೀಕ್ಷಣೆಯನ್ನು ಮಾಡಿ ಇಂದ್ರಿಯಗಳಿಗೆ ಅತೀತವಾದಂಥ, ಆ ವಸ್ತುವಿನಲ್ಲಿ ಪರಿಸ್ಫುಟಗೊಳ್ಳುವಂಥ, ದೈವೀತತ್ವವನ್ನರಿತು ಕೊಳ್ಳುವುದು. ಇದು ಕೇವಲ ಚಿತ್ರಕಾರನ ಯೋಗಬಲವನ್ನೇ ಹೊಂದಿದೆ."[೧೧]

ಕಾಳಿದಾಸನ 'ಅಭಿಜ್ಞಾನ ಶಾಕುಂಲತ'ದಲ್ಲಿ ಹಸ್ತಿನಾಪುರದ ರಾಜ ದುಷ್ಯಂತನು ತನ್ನ ವಿರಹವ್ಯಥಿತ ಮನದ ಶಾಂತಿಗಾಗಿ ಶಕುಂತಲೆಯ ಒಂದು ಚಿತ್ರವನ್ನು ತಯಾರಿಸಿದ್ದನು. ಒಂದು ದಿನ ಉದ್ಯಾನವನದಲ್ಲಿ ಕುಳಿತಿದ್ದಾಗ ವಿದೂಷಕನು ಅದನ್ನು ನೋಡಿ ಹೀಗೆ ಹೇಳಿದನು. 'ವಾಹ್ ಗೆಳೆಯನೆ', ನೀನು ಅತ್ಯುತ್ತಮವಾದ ಚಿತ್ರವನ್ನು ತಯಾರಿಸಿದ್ದೀಯೆ. ನೀನು ಶರೀರದ ಉಬ್ಬು-ತಗ್ಗುಗಳನ್ನು ಮತ್ತು ಮನಸ್ಸಿನಲ್ಲಿರುವ ಭಾವನೆಗಳನ್ನು ಈ ಚಿತ್ರದಲ್ಲಿ ನಿಪುಣತೆಯಿಂದ ಪ್ರದರ್ಶಿಸಿದ್ದೀಯೆ, ಇದನ್ನು ನೋಡಿದರೆ ನಮ್ಮ ದೃಷ್ಟಿಯನ್ನು ಸೆಳೆಯುತ್ತದೆ.

ದುಷ್ಯಂತ ರಾಜನು ಚಿತ್ರಿಸಿದ ಶಕುಂತಲೆಯ ಚಿತ್ರವನ್ನು ಕಾಳಿದಾಸನು ಈ ರೀತಿ ವರ್ಣಿಸಿದ್ದಾನೆ. ಚಿತ್ರದಲ್ಲಿ ಯುಗಳ ನೇತ್ರ(ಕಣ್ಣಿನ ಜೋಡಿ)ಗಳು ಕಿವಿಯವರೆಗೂ ಹರಡಿದ್ದವು. ಚಪಲನಾದ ಹುಬ್ಬು ತಿದ್ದಿದಂತಿದ್ದವು. ತುಟಿಗಳು ಹಲ್ಲಿನಿಂದ ದೀಪ್ತವಾಗಿದ್ದವು. ತುಟಿಗಳು ಪಾಟಲವರ್ಣದ್ದಾಗಿದ್ದವು. ವಿಭ್ರಮದ ವಿಲಾಸದಿಂದ ಮನಸ್ಸನ್ನು ಮುಗ್ಧಗೊಳಿಸಿ ಸುಶೋಭಿತಳಾಗಿದ್ದಳು ಚಿತ್ರದಲ್ಲಿದ್ದರೂ. ಆ ಚಿತ್ರವು ಎಷ್ಟು ಸಜೀವವಾಗಿತ್ತೆಂದರೆ, ಅದು ಇದೇ ಕ್ಷಣ, ಈಗಲೇ ಮಾತನಾಡುತ್ತದೆ ಎನ್ನಿಸುತ್ತಿತ್ತು. ಆದರೆ, ಪ್ರೇಮಿಯು ಪ್ರೇಯಸಿಯ ಚಿತ್ರ ಬರೆಯುವ ಈ ವರ್ಣನೆಯನ್ನು ಸಂಸ್ಕೃತದ ಅನೇಕ ಕವಿಗಳು ಮಾಡಿದ್ದಾರೆ. ಅದರಲ್ಲೂ ವಿಶೇಷವಾಗಿ ನಂತರದ ಕವಿಗಳು ಮಾಡಿದ್ದಾರೆ, ಆದರೆ ಕಾಳಿದಾಸನ ಉಕ್ತವರ್ಣನೆಯಲ್ಲಿ ಆಗುವ ಶ್ರೇಷ್ಠತೆಯ ಅನುಭವ ಮತ್ತು ಸಾಧಾರಣೀಕರಣದಿಂದ ಕಾಳಿದಾಸನ ಕಾಲದಲ್ಲಿ ಚಿತ್ರಕಲೆಯ ಬಗ್ಗೆ ಜನರಲ್ಲಿ ನಿಷ್ಠೆ ಇತ್ತು ಎಂದು ಹೇಳಬಹುದು.

**ರೇಖಾಚಿತ್ರಗಳ**

ರೇಖಾಚಿತ್ರವು ಕಲೆಯ ಒಂದು ಪ್ರಕಾರ. ಅಲ್ಲದೆ ಅದು ಸಹಾಯಕ ಕಲೆ. ಕೆಲವರಿಗೆ ಅದು ಮೂಲಭೂತವಾದ ಕಲೆಯೂ ಆಗಿದೆ. ರೇಖಾಚಿತ್ರ ಪ್ರತ್ಯೇಕವಾದ ಸೃಜನಶೀಲ ಅಭಿವ್ಯಕ್ತಿಯ

ಕ್ಷೇತ್ರವಾಗಿದ್ದು, ಅದು ವಿವಿಧ ಮಾಧ್ಯಮದ ವಿಧಾನಗಳ ಕಾರ್ಯವಾಗಿದೆ. ಅದು ಸ್ವಯಂ ಪ್ರೇರಿತವಾಗಿರಬಹುದು. ಸಮಯಕ್ಕೆ ತೋಚಿದುದಾಗಿರಬಹುದು, ಸಂಪೂರ್ಣವಾಗಿ ಕಾಲ್ಪನಿಕವಾಗಿರಬಹುದು, ಶೋಧನೆ ಅಥವಾ ಅನ್ವೇಷಣೆಯಾಗಿರಬಹುದು. ಹಲವು ವಿಧದ ರೇಖಾ ಚಿತ್ರಾತ್ಮಕವಾದ ಕ್ಯಾಲಿಗ್ರಫಿ, ಕಲಾಭಿಜ್ಞತೆಯಿಂದ ಕೂಡಿರಬಹುದು ಅಥವಾ ಸ್ವಂತಿಕೆಯ ಅಮೂರ್ತ ಮೌಲ್ಯದಿಂದ ಕೂಡಿದುದಾಗಿರಬಹುದು. ವಿಜ್ಞಾನಿ, ಏನಾದರೂ ರೇಖಾಚಿತ್ರಗಳ ಮೂಲಕ ಹೇಳಬಯಸಿದರೆ ಅದು ನವಶೋಧನೆಯ ವಿಚಾರವಾಗಿರುತ್ತದೆ. ಅಲ್ಲದೆ, ಪ್ರಾಯೋಗಿಕ ರೇಖಾಚಿತ್ರಗಳು ವಿಶೇಷತೆಯನ್ನೊಳಗೊಂಡಿರುತ್ತದೆ. ಅದರ ತಾಂತ್ರಿಕ ಸರಳತೆ ಎಂದರೆ ಕಲಾವಿದನ ಭಾವನೆಯ ಹೊಸ ಅಭಿವ್ಯಕ್ತಿಯೇ ಆಗಿರುತ್ತದೆ. ರೇಖಾಚಿತ್ರಗಳ ಮೂಲಕ ಚಿತ್ರಗಾರ ಮತ್ತು ಶಿಲ್ಪಿ ಹೊಸ ಕಲಾಭಾಷೆಯನ್ನು ದಿಟವಾಗಿ ಅಭಿವ್ಯಕ್ತಗೊಳಿಸಲು ಪ್ರಯತ್ನಿಸುತ್ತಾರೆ. ಇದು ಸಹ ವಿವಿಧ ಕಲಾಶೈಲಿಗಳಂತೆ ಕಲಾವಿದನ ವೈಯಕ್ತಿಕ ಕಲಾಶೈಲಿ ಎನಿಸಿಕೊಳ್ಳುತ್ತದೆ. ಕಲಾವಿದನ ರೇಖಾಚಿತ್ರಗಳು ಆತನನ್ನು ಮತ್ತು ಆತನ ಭಾವನಾಲಕ್ಷಣವನ್ನು ವ್ಯಕ್ತಗೊಳಿಸುತ್ತವೆ.

ರೇಖಾಚಿತ್ರಗಳು, ಮುಖ್ಯವಾಗಿ ರೇಖೆಗಳಿಂದ ರೂಪಿತವಾಗಿರುತ್ತವೆ. ಚಿತ್ರಕ್ಕೆ ರೇಖೆಗಳು ಜೀವಂತಿಕೆಯನ್ನು ನೀಡುತ್ತವೆ. ರೇಖಾಚಿತ್ರಗಳು ಸಂಮ್ಮಿಶ್ರಿತ ದೃಷ್ಟಿಯುಳ್ಳವಾಗಿದ್ದವು. ಅಲ್ಲದೆ, ಚಿತ್ರದಲ್ಲಿ ಕುಶಲತೆ ಒಂದು ಭಾಗವೇ ಆಗಿತ್ತು. ಕಾಲಾನುಕ್ರಮದಲ್ಲಿ ಸ್ವತಂತ್ರ ಅಭಿವ್ಯಕ್ತಿಯಾಗಿ ಮಾರ್ಪಾಟುಗೊಂಡಿತು. ಹಿಂದಿನ ಅನೇಕ ಚಿತ್ರಗಳು, ಕ್ರೇಯಾನ್, ಜಲವರ್ಣ, ಶಾಯಿ ಅಥವಾ ಲೇಖನಿಯಿಂದ ರಚಿಸಲ್ಪಡುತ್ತಿದ್ದವು. ಬಣ್ಣದ ಬಳಪದಿಂದ ರಚಿಸಿದಂತವು, ರೇಖಾಚಿತ್ರ ಮತ್ತು ವರ್ಣಚಿತ್ರದ ಪಾರ್ಶ್ವಕಲೆಯೆನಿಸಿತ್ತು. ಬಣ್ಣದ ಅವರಣವನ್ನು ಸೃಜಿಸುತ್ತಿದ್ದವು.

ಪುರಾತನ ಕಲೆ ನಿಶ್ಚಿತ ವಿಷಯದ ಮೇಲೆ ರಚಿತವಾದ ಅಥವಾ ಕಾಲ್ಪನಿಕ ಕೃತಿ ಆಗಿರುತ್ತಿತ್ತು. ಆಧುನಿಕ ಚಿತ್ರಕಲೆ ಇಂಥ ವಿಷಯದಿಂದ ಮುಕ್ತವಾಗಿದೆ. ಆಧುನಿಕ ರೇಖಾಚಿತ್ರ, ಕಲಾವಿದ ಸ್ವತಃ ರಚಿಸಿದ ಸೃಜನಶೀಲ ಕಲಾಕೃತಿಯನ್ನು ಹೆಸರಿಸುವ ಬಗ್ಗೆ ತನ್ನದೇ ಆದ ಅನಿಸಿಕೆಯನ್ನು ಕಾದಿರಿಸಿಕೊಂಡಿರುತ್ತಾನೆ.

ರೇಖಾಚಿತ್ರವನ್ನು ಎರಡು ರೀತಿಯಲ್ಲಿ ವಿಭಾಗಿಸಬಹುದು.

೧. "ಸಾಂಪ್ರದಾಯಿಕವಾದದ್ದು: ಇದರಲ್ಲಿ ವೈಜ್ಞಾನಿಕ ರೇಖಾಚಿತ್ರಗಳು ಮತ್ತು ವಿನ್ಯಾಸದಿಂದೊಡಗೂಡಿದವು ಇರುತ್ತವೆ. ಅವು ಬಾಹ್ಯರೇಖೆಗಳ ಮೇಲೆ ನಿರೂಪಿತವಾಗಿರುತ್ತವೆ. ಅಲ್ಲದೆ, ಅವು ಸೌಮ್ಯ ಮತ್ತು ಹತೋಟಿಗೊಳಪಟ್ಟ ವಸ್ತುಗಳಾಗಿರುತ್ತವೆ. ಕಲಾವಿದನ ಪ್ರವೃತ್ತಿಯನ್ನು ಅಭಿವ್ಯಕ್ತಗೊಳಿಸುವುದರಿಂದ ಸಾಕ್ಷ್ಯರೀತಿಯ ದಾಖಲೆಗಳಾಗಿರುತ್ತವೆ ಅಥವಾ ಪ್ರಕೃತಿ ಚಿತ್ರಗಳಾಗಿರಬಹುದು.

ರೇಖಾಚಿತ್ರದ ವಿಷಯ ಅತಿ ಸೂಕ್ಷ್ಮ, ವಿವರಣಾತ್ಮಕವಾದ ರೇಖೆಗಳಿಂದ ಕೂಡಿರಬಹುದು. ಯಥೇಚ್ಛವಾಗಿ ನಿರೂಪಿತವಾದ ಸಂಗತಿಯಾಗಿರಬಹುದು. ಇಂಥ ರೇಖಾಚಿತ್ರದ ವಿಧಾನವನ್ನು 'ವಾಸ್ತವಿಕತೆ' ಎನ್ನಬಹುದು. ಏಕೆಂದರೆ, ಇದು ಹೆಚ್ಚಾಗಿ ವಿಷಯದತ್ತಲೇ ವಾಲಿರುತ್ತದೆ.

೨. "ಅಭಿವ್ಯಕ್ತಿವಾದ ಅಥವಾ ವಿಷಯಾತ್ಮಕವಾದದ ರೇಖಾಚಿತ್ರಗಳನ್ನು ಒಳಗೊಂಡಿರುತ್ತವೆ. ಇಂತಹವುಗಳಲ್ಲಿ ಕಲಾವಿದನ ಮನೋಧರ್ಮದ ವರ್ತನೆ ಮತ್ತು ಭಾವನೆಗಳು ವಸ್ತುವಿನ ವಿವರಣೆ, ವ್ಯಾಪ್ತಿ ಮತ್ತು ಆಕಾರದ ಲಯಬದ್ಧತೆಯನ್ನು ಸ್ವತಂತ್ರವಾಗಿ ಮಾರ್ಪಡಿಸುತ್ತದೆ. ಅಲ್ಲದೆ, ರೇಖೆಗಳು ಅಗತ್ಯ ಮೂಲಾಂಶವನ್ನು ರೂಪಿಸುತ್ತವೆ. ವಿಶಿಷ್ಟ ರೀತಿಯ ರೇಖೆಗಳು, ಸಾಧನೋಪಕರಣಗಳನ್ನು ಸೃಜಿಸಲು ನೆರವಾಗುವಂತಹವು".[೧೨]

ಅವು ಯಾವುದರ ಮೇಲೆ ರೂಪಿತವಾಗಿಯೋ ಅದು ಶಾಂತತೆ ಮತ್ತು ವೈಜ್ಞಾನಿಕತೆಯ ಯಥಾರ್ತತೆ ಅಥವಾ ಮಾನಸಿಕ ಗೊಂದಲತೆಯ ಅಭಿವ್ಯಕ್ತಿ ಎನಿಸಿರಬಹುದು. ಅದು ರಚನಾ ವಿನ್ಯಾಸದ ಆಸಕ್ತಿಯನ್ನುಂಟು ಮಾಡಬಹುದು ಅಥವಾ ಸೃಜನತೆಯ ಛಾಯಾ ಆವರಣವಾಗಿರಬಹುದು ಮತ್ತು ಖಚಿತ ದಾಖಲೆಯ ವಾಸ್ತವಿಕತೆ ಆಗಿರಬಹುದು. ಆಧುನಿಕ ಕಾಲದಲ್ಲಿ ರೇಖಾಚಿತ್ರವನ್ನು ಕೆಲವೊಮ್ಮೆ ನವಶೋಧನೆ ಎನ್ನಬಹುದು.

ಹಿಂದೆ ರೇಖಾಚಿತ್ರ ಮತ್ತು ವರ್ಣಚಿತ್ರದ ಮಧ್ಯೆ ಎಲ್ಲೆ ಏನೂ ಇರಲಿಲ್ಲ. ರೇಖಾಚಿತ್ರ ಏಕವರ್ಣ ರೂಪಣೆ ಮತ್ತು ಭಾವನಾತ್ಮಕತೆಯಿಂದ ನಿರೂಪಿತವಾದ ಪ್ರಧಾನ ಆಕಾರವಾಗಿರುತ್ತದೆ. ರೇಖಾಚಿತ್ರಗಳನ್ನು ಕುಂಚದಿಂದ ರಚಿಸುವ ಕ್ರಮವು ಹಿಂದಿನಿಂದ ಸಾಂಪ್ರದಾಯಿಕವಾಗಿ ಭಾರತ ಹಾಗೂ ಇನ್ನಿತರೆ ದೇಶದ ಕಲಾವಿದರಲ್ಲಿ ಅಭ್ಯಾಸವಾಗಿತ್ತು. ಪುರಾತನ ರೇಖಾಚಿತ್ರಗಳು ವಿಚಾರ ಮತ್ತು ಸಂಕೇತಗಳಿಂದ ಕೂಡಿದ್ದು, ವಿಷಯ ಅಥವಾ ವ್ಯಕ್ತಿಯ ಪ್ರತಿಕೃತಿ ಆಗಿದೆ. ಮನುಷ್ಯನ ವಸ್ತುವಿನ ಪಾರ್ಶ್ವಚಿತ್ರವನ್ನು ಪ್ರತಿನಿಧಿಸುತ್ತದೆ. ಇಂತಹವುಗಳನ್ನು ಗ್ರೀಕ್ ಮತ್ತು ಈಜಿಪ್ಟ್‌ನ ಭಿತ್ತಿಚಿತ್ರಗಳಲ್ಲಿ ಕಾಣಬಹುದು. ಆದರೆ ಸಾಂಪ್ರದಾಯಿಕ ಕಾಲದಲ್ಲಿ ಅಭಿವ್ಯಕ್ತಗೊಂಡಿರುವುದನ್ನು ಕಾಣಬಹುದು. ರೇಖಾಚಿತ್ರವು ಉದ್ವೇಗದ ಅಥವಾ ರೋಮಾಂಚನಕಾರಿಯಾಗಿ ಕಾಣಬಹುದು.

ಮನೋವಿಲಾಸಿಪಂಥ(Romanticism)ದ ಕೊನೆ ಯಾವುದೆಂದರೆ ಫ್ಯಾಂಟಸೀ ಅಥವಾ ಸರ್‍ರಿಯಲಿಸಂ ಇಲ್ಲಿ ಮಾರ್ಗದರ್ಶಿ ಯಾರೆಂದರೆ ಕಲಾವಿದನ ಅಜಾಗೃತ ಸ್ಥಿತಿ(Unconscious) ಏಕೆಂದರೆ, ಅವನ ಮನದಾಳದಲ್ಲಿ ಚಿಮ್ಮುವ ಊಹೆಗಳನ್ನು ಅಥವಾ ಕನಸುಗಳನ್ನು ಬಹುಶಃ ಆತನು ಮೂಲವಾಗಿ ಅವಲೋಕಿಸುತ್ತಾನೆ. ಕಲಾವಿದನು ಅಂತರ್‌ದೃಷ್ಟಿಯುಳ್ಳವನು. ಏಕೆಂದರೆ, ಅವನ ಮನದಲ್ಲಿ ಮೂಡುವ ವಿಷಯಗಳು ಆಕಾರ ಅಥವಾ ವಿಚಾರದಿಂದ ಕೂಡಿರುತ್ತದೆ. ಸಾಮಾನ್ಯವಾಗಿ ಜೀವನದಿಂದ ತೆಗೆದುಕೊಂಡ ಇಂತಹ ವಿಚಾರಗಳು ಹೆಚ್ಚಾಗಿ ಉದ್ವೇಗಕ್ಕಿಂತಲೂ ಬೌದ್ಧಿಕತೆ ಮತ್ತು ಅಮೂರ್ತ ಕಲೆಯಿಂದ ಕೂಡಿರುತ್ತದೆ. ರೇಖಾಚಿತ್ರದ ಮೂಲಗಳ ದ್ವಿಮುಖ ಸ್ವಭಾವದ ಮತ್ತು ಮನುಷ್ಯನ ಊಹೆಯಿಂದ ಕೂಡಿರುತ್ತದೆ. ಪ್ರತಿಯೊಬ್ಬ ಕಲಾವಿದನ ಶೈಲಿ ಮತ್ತು ಅವನ ಭಾಷೆ ಅಸಾಧಾರಣವೂ ಆಗಿರುತ್ತದೆ.

ಭಾರತೀಯ ಕಲೆಯಲ್ಲಿ ರೇಖಾಚಿತ್ರಗಳಿಗೆ ಮುಖ್ಯ ಸ್ಥಾನವನ್ನು ಕೊಡಲಾಗಿದೆ. ಸಾಂಪ್ರದಾಯಿಕ ಭಿತ್ತಿಚಿತ್ರಗಳು ಅಥವಾ ಹೆಚ್ಚು ಲಾಲಿತ್ಯದಿಂದ ಕೂಡಿದ ಮತ್ತು ನಿಕಟರೀತಿಯ ಅಣುಚಿತ್ರಗಳು-

ಇವುಗಳಲ್ಲಿ ರೇಖೆಗಳು ಪ್ರಧಾನ. ಇವು ರೂಪಿಸುವ ಆಕಾರ ಸೂಕ್ಷ್ಮ ಬಾಹ್ಯರೇಖೆ. ಪ್ರತಿ ಚಿತ್ರ ವಿವರಣಾತ್ಮಕವಾದಂತಹ ಅನುಕಂಪದ ಅರ್ಥವನ್ನೊಳಗೊಂಡಿರುತ್ತವೆ. ಹಿಂದಿನ ಕೆಲವು ಭಾರತೀಯ ರೇಖಾಚಿತ್ರಗಳು ಇಂದಿಗೂ ಉಳಿದಿವೆ. ಸಂತೋಷದಾಯಕ ವಿಷಯವೆಂದರೇ ನಮ್ಮಲ್ಲಿ ಬಹುಸಂಖ್ಯೆಯ ಅಣುಚಿತ್ರಗಳಿವೆ. ಇದರಿಂದ ಭಾರತೀಯ ರೇಖಾಚಿತ್ರಗಳು ಪಾಶ್ಚಾತ್ಯ ರೇಖಾಚಿತ್ರಗಳಿಗಿಂತಲೂ ಭಿನ್ನವಾಗಿವೆ.

"ಭಾರತೀಯ ರೇಖಾಚಿತ್ರಗಳು ಗುಣದಲ್ಲಿ ಉನ್ನತ ಭಾವನಾತ್ಮಕತೆಯಿಂದ ಕೂಡಿವೆ. ಕಲೆ ಹೆಚ್ಚಾಗಿ ಸಂಗತಿಗಳನ್ನು ಅಭಿವ್ಯಕ್ತಿಗೊಳಿಸಲು ಸಂಬಂಧಪಟ್ಟದ್ದು, ಆದಾಗ್ಯೂ ಭಾರತೀಯ ರೇಖಾಚಿತ್ರಗಳು ಗುಣದಲ್ಲಿ ಸಂಕ್ಷಿಪ್ತವಾದವು. ಇವು ಕನಿಷ್ಠ ಹೇಳಿಕೆಯನ್ನು ನೀಡುವಂತಹದು. ಇಲ್ಲಿ ರೇಖಾಚಿತ್ರ ರಸವನ್ನು ಸೃಷ್ಟಿಸುವಂತಹುದು. ಆದುದರಿಂದ ಸಾಂಪ್ರದಾಯಿಕ ರೇಖಾಚಿತ್ರಗಳು ಬೆಳಕು ಮತ್ತು ಛಾಯೆಗಷ್ಟೇ ಸಂಬಂಧಿಸಿದ್ದಾಗಿಲ್ಲ. ಅಂಗರಚನೆಗೆ ಸಂಬಂಧಿಸಿದ ಸೂಕ್ಷ್ಮ ವಿವರದ ವರದಿ, ಇದು ನೆನಪಿನ, ಗೊತ್ತಿರುವ ಮತ್ತು ವೀಕ್ಷಿಸಿದ ವಿಷಯಕ್ಕೆ ಸಂಬಂಧಿಸಿದ ಪ್ರತಿಬಿಂಬಗಳಾಗಿರಬಹುದು. ಪ್ರತಿಯೊಬ್ಬರ ಜೀವನದ ಪವಿತ್ರ, ತಾರ್ತಿಕಕ್ಕೆ ಸಂಬಂಧಿಸಿದ ವಿಷಯವಾಗಿರಬಹುದು. ನಾವು ಮೊಗಲ್ ಕಲೆಗಿಂತಲೂ ಮೊದಲು ವಾಸ್ತವಿಕ ರೇಖಾಚಿತ್ರಗಳನ್ನು ನೋಡಲು ಸಿಗುವುದಿಲ್ಲ."[೧೩]

ಪ್ರಾಥಮಿಕವಾಗಿ ಸಾಂಪ್ರದಾಯಿಕ ಚಿತ್ರಗಳು ಭಾವನೆ ಮತ್ತು ಅಭಿವ್ಯಕ್ತಿಗೆ ಸಂಬಂಧಿಸಿದ್ದಾಗಿರುತ್ತದೆ. ಕಲೆಯು ನಂಬಿಕೆ, ತತ್ವಜ್ಞಾನ ಮತ್ತು ಕಾವ್ಯದಿಂದ ಪ್ರತ್ಯೇಕಿಸಲ್ಪಟ್ಟಿಲ್ಲ. ಇಂತಹ ಕಲೆಯ ವಿಷಯಗಳು ಈಗಾಗಲೇ ಗೊತ್ತಿರುವ ಮತ್ತು ಸಂಗೀತದಲ್ಲಿರುವ ಲಯ, ಲಾಲಿತ್ಯದ ವಿಷಯಗಳನ್ನು ಸ್ವಾಗತಿಸುತ್ತದೆ. ಅಂದರೇ ಇದು ಸಂಪ್ರದಾಯದ ಮತ್ತು ಸಂಗೀತದಲ್ಲಿರುವ ಲಯ, ಲಾಲಿತ್ಯದ ವಿಷಯಗಳನ್ನು ಸ್ವಾಗತಿಸುತ್ತದೆ. ಅಂದರೇ ಇದು ಸಂಪ್ರದಾಯದ ಮಿತಿಯಲ್ಲಿರುತ್ತದೆ. ಅಲ್ಲದೆ, ವೈಯಕ್ತಿಕ ಮೂಲದ ಮೇಲೆ, ಸ್ವಲ್ಪ ಒತ್ತಡವಿರುತ್ತದೆ(ತಾಳದ ಗತಿಯಲ್ಲಿ ಚಲಿಸುವುದಕ್ಕೆ ಲಯ ಎನ್ನುತ್ತಾರೆ). ಹಿಂದಿನ ಕಾಲದಲ್ಲಿ ರೇಖಾಚಿತ್ರವನ್ನು ಚಿತ್ರಕಲೆಯ ಕುಶಲತೆ ಎಂದು ನಿರ್ಧರಿಸಿದ್ದರು. ಆದ್ದರಿಂದ, ಕೆಲವು ಹಿಂದಿನ ರೇಖಾಚಿತ್ರಗಳು ಉಳಿದಿವೆ. ಅಲ್ಲದೆ, ಮೊಗಲರ ಕಾಲದಲ್ಲಿ ಭಾರತೀಯ ರೇಖಾಚಿತ್ರಗಳ ಮೇಲೆ ಪರ್ಶಿಯನ್ ಕಲೆಯ ಪ್ರಭಾವವಿತ್ತು. ಪಾಶ್ಚಿಮಾತ್ಯ ರೇಖಾಚಿತ್ರಗಳ ಪ್ರಭಾವ ಮತ್ತು ಆಮದಿನಿಂದ ನಮ್ಮ ದೇಶದ ಕಲಾಚರಿತ್ರೆಯಲ್ಲಿ ಅರುಣೋದಯ ಉಂಟಾಯಿತು. ಅಲ್ಲದೆ ೧೯ನೇ ಶತಮಾನದ ಮಧ್ಯದಲ್ಲಿ ಪ್ರಾರಂಭವಾದ ಕಲಾಶಾಲೆಗಳಿಂದ ರಿನೈಸಾನ್ಸ್‌ನಿಂದ ವಿದೇಶಿ ಸಂಪ್ರದಾಯದ ಪುರಾತನ ಅವಶೇಷಗಳು ಹೊರತೆಗೆಯಲ್ಪಟ್ಟವು. ಇಲ್ಲಿ ರೇಖಾಚಿತ್ರವು ಕಲಾವಿದನ ದೃಷ್ಟಿಯನ್ನು ಮತ್ತು ಅಂಗರಚನಾಶಾಸ್ತ್ರವನ್ನು ಅವಲಂಬಿಸಿತು. ಬಂಗಾಳದಲ್ಲಿ ನವ್ಯ ಸಂಯೋಜನೆಯು ಆರಂಭವಾಯಿತು. ಅವನೀಂದ್ರನಾಥ ಟಾಗೂರರ ರೇಖಾಚಿತ್ರಗಳು ಅಸಾಮಾನ್ಯವಾದವು. ಅವು ಸೂಕ್ಷ್ಮ ಭಾವನೆಯೊಳಗೊಂಡ ಕಲಾಚಾತುರ್ಯದಿಂದ ಕೂಡಿದೆ. ಅಲ್ಲದೆ ಸ್ಕೆಚ್‌ಗಳಲ್ಲೂ ಸಹಜ ರಂಗಿನ ಜೊತೆಗೆ ಕಪ್ಪು ಮತ್ತು ಬೆಳಕಿನ ವರ್ಣವಿನ್ಯಾಸದ ನಿರೂಪಣೆಯನ್ನು ಕಾಣಬಹುದು. ಈ

ರೇಖಾಚಿತ್ರಗಳು ಅವನೀಂದ್ರರರ ಮನೋಧರ್ಮವನ್ನು ಮತ್ತು ಪಾಶ್ಚಿಮಾತ್ಯ ದೇಶದಲ್ಲಿ ಪಡೆದ ಕಲಾಶಿಕ್ಷಣ ಪ್ರಭಾವವನ್ನು ಕಾಣಬಹುದು. ಇತ್ತೀಚಿನ ವರ್ಷದಲ್ಲಿ ಕೆಲವು ಕಲಾವಿದರು ಅಮೂರ್ತ ಕಲೆಯತ್ತ ಮುನ್ನಡೆದು ಅದನ್ನು ಅಯ್ಕೆ ಮಾಡಿಕೊಂಡಿದ್ದಾರೆ.

ರೇಖಾಚಿತ್ರಗಳು ಸಹ ಕಲಾ ಮಾಧ್ಯಮ ಆಗಿರುವುದರಿಂದ ಇದೀಗ ಹೊಸಪೀಳಿಗೆಯ ಕಲಾವಿದರು ತಾವು ಹೊಸದಾಗಿ ಕಂಡುಕೊಂಡವುಗಳನ್ನು ಬೆಳಕಿಗೆ ತರುತ್ತಿರುವುದಲ್ಲದೆ ಅದರ ರಚನೆಯಲ್ಲೇ ತೊಡಗಿ ಹೊಸತನ್ನು ನೀಡಲು ಪ್ರಯತ್ನಿಸುತ್ತಲೇ ಇದ್ದಾರೆ. ರೇಖಾಚಿತ್ರಗಳು ಸಂಯಮ ಪ್ರವೃತ್ತಿಯ ಮಾಧ್ಯಮ. ಆದುದರಿಂದ ಅದು ಸಂತೋಷ ಮತ್ತು ಸ್ವಪ್ರೇರಣೆಯ ಎಲ್ಲಾ ವಿಧವಾದ ಕಾಲ್ಪನಿಕತೆಯನ್ನು ಸರ್ರಿಯಲಿಸ್ಟಿಕ್ ಮತ್ತು Mumdoneನಲ್ಲಿ ಕಾಣಬಹುದು ಇದರ ಅಭ್ಯಾಸ ವ್ಯರ್ಥಶ್ರಮವೇನಲ್ಲ, ಇದನ್ನು ಕಲಾವಿದನ ಮೂಲಭೂತವಾದ ಜಾಣ್ಮೆಯಲ್ಲಿ ಇದು ಒಂದೆಂದು ನಿರ್ಧರಿಸಬಹುದು. ರೇಖಾಚಿತ್ರಗಳು ತಮ್ಮದೇ ಆದ ಶಿಸ್ತು ಮತ್ತು ಮಿತಿಗಳನ್ನು ಕೆಲವೊಮ್ಮೆ ಹೊಂದಿರುತ್ತದೆ. ಕಲಾವಿದನ ಸಭ್ಯತೆ ಮತ್ತು ಮುಕ್ತತೆಯಿಂದ ಕೂಡಿರಬಹುದು. ಆದರೆ, ಆತನು ಜೀವನದ ನಾಡಿಯ ಮಿಡಿತವನ್ನು ಅರಿತವನಾಗಿರಬೇಕು(ಸಮಕಾಲೀನ ಕಲೆ, ೧೯೮೨).

ಸಾಹಿತ್ಯದಲ್ಲಿ ಭಾಷೆಯ ಬಳಕೆಯನ್ನು ಮೂರು ವಿಧವಾಗಿ ವಿಂಗಡಿಸಬಹುದು. ಮೊದಲನೆಯದು ವ್ಯಾವಹಾರಿಕ ಉಪಯೋಗವನ್ನು ಕುರಿತದ್ದು. ಎರಡನೆಯದು ಶಾಸ್ತ್ರೋಪಯೋಗಿ, ಮೂರನೆಯದು ಭಾವೋಪಯೋಗಿ. ಈ ಭಾವೋಪಯೋಗಿಯಾದ ಭಾಷೆಯ ಬಳಕೆಯ ಸ್ವರೂಪವನ್ನು ಕವಿ ಹೇಳುವಾಗ ಚಿತ್ರವೊಂದು ಕಣ್ಣಿಗೆ ಕಟ್ಟುತ್ತದೆ. ಇಲ್ಲಿ ಕವಿಯ ಅನುಭವಗಳು ಚಿತ್ರಗಳ ಮೂಲಕ ಅಭಿವ್ಯಕ್ತಿಯನ್ನು ಪಡೆಯುತ್ತವೆ. ಅವನು ತನ್ನ ಭಾವತೀವ್ರತೆಗೆ ಅಥವಾ ಅಮೂರ್ತ ಭಾವಗಳಿಗೆ ಅಭಿವ್ಯಕ್ತಿಯನ್ನು ಕೊಡುವಾಗ ಅವನು ಮೂರ್ತಪ್ರಪಂಚದ ಚಿತ್ರಗಳನ್ನೇ ಆಶ್ರಯಿಸಬೇಕಾಗುತ್ತದೆ. (ಪು.ಸಂ. ೧೮೯, ಸಪ್ನ ಬುಕ್‌ಹೌಸ್)"[೧೪]

ಚುಕ್ಕೆಯೊಂದು ಚಲಿಸುವಾಗ ರೇಖೆಯಾಗುತ್ತದೆ. ರೇಖೆಗಳು ಆಕಾರವನ್ನು ಪಡೆದು ಚಿತ್ರವಾಗುತ್ತದೆ. ಒಂದು ಚಿತ್ರಕ್ಕೆ ನೂರು ಶಬ್ದಗಳು ಹೇಳಬಲ್ಲ ಸಾಮರ್ಥ್ಯವಿರುತ್ತದೆ. ನೋಡುಗನ ಅರ್ಥದಲ್ಲಿ ವಿವಿಧತೆ ಅಡಗಿರುತ್ತದೆ. ಆ ಅರ್ಥವು ವಿಮರ್ಶೆಗೆ ಒಳಪಡುತ್ತ ಕಲಾವಲಯ, ಸಾಂಸ್ಕೃತಿಕ ವಲಯದಲ್ಲಿ ಮೈಲಿಗಲ್ಲಾಗುತ್ತದೆ.

ರೇಖೆಗಳು ಕಲಾವಿದನ ಕೌಶಲದ ಭಾಷೆಯಾಗಿರುತ್ತದೆ. ರೇಖೆಗಳು ಕಲಾವಿದನ ಸಾಧನೆಯನ್ನು ಸಾರುತ್ತವೆ. ಅಂಥದೊಂದು ಮಜಲಿಗೆ ನಿಮ್ಮನ್ನು ಕರೆದೊಯ್ಯುವ ಸಾಹಸ ಮಾಡ ಹೋರಾಡುತ್ತಾನೆ. ರೇಖೆಗಳು ಭಾವಗಳನ್ನು ಅತ್ಯಂತ ಯಶಸ್ವಿಯಾಗಿ ಪ್ರಸ್ತುತಪಡಿಸಿ, ಹೊಸದೊಂದು ಅನುಭವವನ್ನು ನೋಡುಗರಿಗೆ ನೀಡುತ್ತವೆ.

ರೇಖೆಗಳಲ್ಲಿ ಹಲವು ಪ್ರಕಾರಗಳಿವೆ. ಗೀಚುವ ರೇಖೆ, ಸರಳರೇಖೆ, ಲಂಬರೇಖೆ, ಕ್ಷಿತಿಜ ರೇಖೆ, ಸಮಾನಾಂತರ ರೇಖೆ, ಓರೆರೇಖೆ, ಹೀಗೆ ಹತ್ತಾರು ರೇಖೆಗಳು ನಮ್ಮ ಗಮನಕ್ಕೆ ಬರುತ್ತವೆ.

"ಕರಡು ರೇಖಾಚಿತ್ರಗಳ ಬಗ್ಗೆ: ಕರಡು ರೇಖಾಚಿತ್ರ ಎಂದರೆ ಒಂದು ಸಂಪೂರ್ಣ ಚಿತ್ರ ರಚನೆಗೆ ಮುನ್ನ ವಿವಿಧ ಹಂತ ಶೈಲಿಯಲ್ಲಿ ಭಂಗಿಯಲ್ಲಿ ವಿವಿಧ ದೃಷ್ಟಿಕೋನಗಳಲ್ಲಿ ರಚಿಸಲ್ಪಡುವ ಪೂರ್ವಾಪರ ರಚನೆಯನ್ನು ಕರಡು ರೇಖಾಚಿತ್ರ ಎಂದು ಕರೆಯಲಾಗುತ್ತದೆ. ಮನದಲ್ಲಿ ಮಾಡುವ ಚಿತ್ರಗಳನ್ನು ಸಹ ಕರಡು ರೇಖಾಚಿತ್ರವೆನ್ನಬಹುದು.

ಹೈಕೀ ಲೈಟಿಂಗ್‌ನ ಅಭಿಪ್ರಾಯವೆಂದರೆ ಚಿತ್ರದಲ್ಲಿ ಕೋಮಲತೆಯನ್ನು ಸಮತೆಯನ್ನು ಮೂಡಿಸಿ ತಕ್ಷಣದ ನೋಟಕ್ಕೆ ಆಕರ್ಷಿಸುವಂತೆ ಮಾಡುವುದೇ ಆಗಿದೆ. ಚೆಲುವೆಯರ ಭಾವಚಿತ್ರಗಳಿಗೆ ಹೈಕೀ ಲೈಟಿಂಗ್ ಉತ್ತಮವಾಗಿರುತ್ತದೆ. ರೂಪದರ್ಶಿಯ ಮೂಗು, ಮುಂದಲೆ, ಕಣ್ಣು, ಹುಬ್ಬುಗಳ ನೆರಳನ್ನು ಕಡಿಮೆ ಮಾಡಲು ಕೀ ಲೈಟ್ ಉಪಯೋಗಿಸುವುದರಿಂದ ಇದನ್ನು ಮಾಡಲಿಂಗ್ ಲೈಟ್ ಎಂದು ಕರೆಯುತ್ತಾರೆ".[೧೫]

**ಫೋಟೋಗ್ರಫಿ**

ಚಿತ್ರಗಳು ನೋಡುವವರನ್ನು ಆಕರ್ಷಿಸಿ ವಿಷಯದೆಡೆಗೆ ಮನಸ್ಸು ಓಡುವಂತೆ ಮಾಡುವುವು. ಒಂದೇ ಒಂದು ಚಿತ್ರವು ಸಾವಿರಾರು ಪುಟಗಳ ವಿವರಣೆಯನ್ನು ನೀಡಬಲ್ಲದು. ಸ್ವಲ್ಪ ಸಮಯದಲ್ಲಿ ಹೆಚ್ಚು ವಿಷಯಗ್ರಹಣ ಮಾಡಬಹುದು. ಇಂದು ಪತ್ರಿಕೆಗಳಲ್ಲಿಯ ಚಿತ್ರಗಳ ಮೇಲೆ ಕಣ್ಣಾಡಿಸುತ್ತ, ತಲೆಬರಹವನ್ನು ಓದುವುದು ಹೆಚ್ಚಿನ ಓದುಗರ ಪರಿಪಾಟವಾಗಿದೆ. ಇದಕ್ಕೆ ಸಮಯದ ಅಭಾವವೇ ಕಾರಣ. ಹಲವು ಸಲ, ಹಲವು ಪುಟಗಳನ್ನು ಬರೆದು ವಿವರಿಸಿದರೂ ವಸ್ತುಸ್ಥಿತಿ ತಿಳಿಯಲಾರದು. ಆಗ ಚಿತ್ರಗಳೇ ನಮ್ಮ ತಿಳಿವಳಿಕೆಗೆ ಮಾಧ್ಯಮವಾಗುವುವು.

"ಮಗುವು ನಗುತ್ತಿರಲಿ, ಅಳುತ್ತಿರಲಿ, ಅದರ ಭಾವನೆಗಳೇ ತಾಯಿಗೆ ಆನಂದವನ್ನೀಯುತ್ತವೆ. ಇಂತಹ ಮಗು ತನ್ನಿಂದ ದೂರವಾದಾಗ ಅದರ ಚಿತ್ರ ಇದ್ದರೆ ನೋಡುತ್ತ ಕೂಡಬಹುದಿತ್ತಲ್ಲ ಎಂದೆನಿಸುವುದು ಸಹಜ. ಪತಿಯು ಪತ್ನಿಯಿಂದ ದೂರವಿದ್ದಾಗ, ಆಪ್ತೇಷ್ಟರು ದೂರ ದೂರದಲ್ಲಿದ್ದಾಗ, ಅವರ ಚಿತ್ರಗಳೇ ದರ್ಶನದ ಸಂತೋಷ ನೀಡುವುವು. ಛಾಯಾಚಿತ್ರವು ಮನುಷ್ಯನ ಜೀವನದ ಹಂತ ಹಂತಗಳಲ್ಲಿಯೂ ಅಭಿರುಚಿ ಹುಟ್ಟಿಸಿ, ಚೈತನ್ಯ ನೀಡುವ ಕಲೆಯಾಗಿದೆ. ಅದಕ್ಕಾಗಿ ನಾವು ಎಷ್ಟು ನೀಡುತ್ತೇವೋ ಅದಕ್ಕಿಂತ ಹೆಚ್ಚು ನಾವು ಪಡೆಯಬಹುದು. ಅದರ ಹಿಂದೆಯೇ ಹೊಗಳಿಕೆ, ತೃಪ್ತಿ, ಶಾಶ್ವತವಾದ ಕೊಡುಗೆ, ನಮ್ಮ ಹೆಸರಿನ ದಾಖಲೆ ಇದ್ದೇ ಇರುತ್ತದೆ. ಕಲೆಯನ್ನು ಬಾಳಿನುದ್ದಕ್ಕೂ ಸಾಕಷ್ಟು ಕಲಿಯಬಹುದು.

'ಫೋಟೋಗ್ರಫಿ' ಇದು ಗ್ರೀಕ್ ಶಬ್ದ, ಫೋಟೋ ಎಂದರೆ ಬೆಳಕು. ಗ್ರಫಿ ಎಂದರೆ ಚಿತ್ರೀಕರಣ. ಹೀಗೆ ಬೆಳಕಿನಿಂದ ಚಿತ್ರೀಕರಿಸುವುದೆಂದು ಅರ್ಥ('ಫೋಟೋಗ್ರಫಿ', ಎಂ.ಆರ್. ಶಾನಭಾಗ, ಸಮಾಜ ಪುಸ್ತಕಾಲಯ, ಧಾರವಾಡ, ೧೯೮೯, ೧೯೯೩)."[೧೬]

ಸೊಬಗು ಮತ್ತು ಬೆಡಗಿನ ಚಿತ್ರಗಳನ್ನು ಭಾವಚಿತ್ರಗಳೆಂದು ಕರೆಯಬಹುದು. ಭಾವಚಿತ್ರಗಳಿಗೆ ಬೇಕಾಗುವ ಬೆಳಕನ್ನು ಹೈ ಕೀ ಲೈಟಿಂಗ್ ಮಾದರಿಯಾಗಲೀ ಅಥವಾ ಲೋ ಕೀ ಲೈಟಿಂಗ್ ಮಾದರಿಯಲ್ಲಾಗಲೀ ಹೊಂದಿಸಿಕೊಳ್ಳಬಹುದು.

ಯಾವುದೇ ವಸ್ತು, ಆಕೃತಿ ಅಥವಾ ರೂಪದರ್ಶಿಯನ್ನು ಕೇವಲ ಕೀ ಲೈಟ್‌ನಿಂದಲೇ ಚಿತ್ರಿಸಬಹುದು. ಆದರೆ ಕೀ ಲೈಟ್‌ನಿಂದ ದೊರೆತ ಆಕೃತಿ ನಮ್ಮ ಇಚ್ಚೆಗೆ ಹಾಗೂ ಇತರೆಯವರ ಮೆಚ್ಚುಗೆಗೆ ಪಾತ್ರವಾಗದೇ ಹೋಗಬಹುದು.

ಹೈ ಕಿ ಲೈಟಿಂಗ್ ಪರಿಣಾಮಕ್ಕಾಗಿ ಕೀ ಲೈಟ್ ನೇರವಾಗಲ್ಲದೇ ಪರೋಕ್ಷವಾಗಿ, ಅಂದರೆ ಬೌನ್ಸ್ ಮಾಡಿಯಾಗಲೀ, ಮಸುಕು ಮಾಡಿಯಾಗಲೀ, ಅಥವಾ ಚದುರುವಂತಾಗಲೀ ಮಾಡಿ ಪಡೆದರೆ ನೆರಳಿನ ತೀಕ್ಷ್ಣತೆ ಕಡಿಮೆಯಾಗುತ್ತದೆ. ಈ ರೀತಿಯಲ್ಲಿ ಪಡೆದ ಪರೋಕ್ಷ ಕೀ ಲೈಟ್ ಪ್ರಕಾಶದಿಂದ ಆಕೃತಿಯ ಮೇಲೆ ಬೀಳುವ ಬೆಳಕು ಸಂದರ್ಭೋಚಿತವಾಗಿ ನೇರ ಪ್ರಕಾಶದ ಕಾಲು ಭಾಗದಷ್ಟೇ ಕಡಿಮೆ ಇದ್ದು ಎರಡು ಹಂತದಷ್ಟು ಅಧಿಕ ಎಕ್ಸ್‌ಪೋಸರ್ ಬೇಕಾಗುತ್ತದೆ. ಕೀ ಲೈಟ್ ತತ್ವಶಃ ಆಕೃತಿಗೆ ಚಿತ್ರದಲ್ಲಿ ಒಂದು ಆಕಾರವನ್ನು ಕೊಡುತ್ತದೆ. ಇದರಿಂದ ಉಂಟಾಗುವ ನೆರಳಿನ ಅಂಶ ಹಾಗೂ ಆಕೃತಿಯ ಉಬ್ಬು ತಗ್ಗುಗಳಿಂದ ಮೂಡುವ ನೆರಳನ್ನು ಬೇಕಾಗುವಂತೆ ನಿಯಂತ್ರಿಸಲು ಮತ್ತೊಂದು ಬೆಳಕನ್ನು ಉಪಯೋಗಿಸುತ್ತಾರೆ. ಇದು ಫಿಲ್ ಇನ್ ಲೈಟ್ ಆಗುತ್ತದೆ. ಫಿಲ್ ಇನ್ ಲೈಟ್ ಅಂತರ, ಕೀ ಲೈಟ್ ಅಂತರದಷ್ಟೇ ಇದ್ದು ಬೆಳಕು ಮಾತ್ರ ಅದರ ಕಾಲು ಭಾಗದಷ್ಟಿದ್ದರೆ ತಪ್ಪೇನೂ ಅಲ್ಲ. ಆದರೆ ಇದರಿಂದ ಮತ್ತಷ್ಟು ನೆರಳು ಮೂಡುವುದಕ್ಕಾಗಲೀ ಅಥವಾ ಕೀ ಲೈಟ್‌ನಿಂದ ಮೂಡಿಸಿಕೊಂಡ ನೆರಳಿನೊಂದಿಗೆ ಮತ್ತೊಂದು ನೆರಳಿಗಾಗಲೀ ಅವಕಾಶ ಕೊಡಬಾರದು. ಆಕೃತಿಯ ನೆರಳು ಛಾಯಾಚಿತ್ರಕಾರನಿಗೆ ಒಂದು ಸವಾಲು. ಇದನ್ನೆದುರಿಸಿ ಮಣಿಸುವುದು ಛಾಯಾಚಿತ್ರಕಾರನ ಹಿರಿಮೆ. ಹೀಗೆ ಎಲೆಕ್ಟ್ರಾನಿಕ್ ಫ್ಲಾಷ್ ಲೈಟ್‌ಗಳನ್ನು ಒಳಾವರಣದಲ್ಲಿ ಕೀ ಲೈಟ್‌ಗಳನ್ನಾಗಿ ಉಪಯೋಗಿಸುವಂತೆಯೇ ಹೊರಾವರಣದ ಹಗಲು ಬೆಳಕಿನಲ್ಲಿ ಫಿಲ್ ಇನ್ ಲೈಟ್‌ಗಳಾಗಿ ಉಪಯೋಗಿಸುತ್ತಾರೆ. ಇವು ತಕ್ಷಣ ಹೆಚ್ಚಿನ ಪ್ರಕಾಶವನ್ನು ಚಿಮ್ಮುವುದರಿಂದಲೂ ವರ್ಣ ಉಷ್ಣಾಂಶ ಹಗಲು ಬೆಳಕಿಗೆ ಸರಿಹೊಂದುವುದರಿಂದಲೂ ಇವುಗಳಲ್ಲಿ ಪಡೆದ ಚಿತ್ರಗಳ ವರ್ಣಗಳು ನೈಜವೂ ಸ್ಪಷ್ಟವೂ ಆಗಿರುತ್ತದೆ. ಇವುಗಳನ್ನು ಕೀ ಲೈಟ್‌ಗಳಾಗಿ ಉಪಯೋಗಿಸುವುದಕ್ಕೆ ಮುಂಚೆ ಇವುಗಳಿಂದ ಮೂಡಬಹುದಾದ ಪ್ರಕಾಶ ಮತ್ತು ಮೂಡುವ ನೆರಳಿನ ಅಂಶವನ್ನು ಗಮನಿಸಬೇಕು.

**ಸೂರ್ಯನ ಪ್ರಕಾಶ ಮತ್ತು ಪರಿಸರ**

"ಉತ್ತಮ ಛಾಯಾಚಿತ್ರಗಳಿಗೆ ಅದು ಕಪ್ಪು ಬಿಳುಪಾಗಲಿ, ವರ್ಣವಾಗಲಿ ಮೊದಲು ಗಮನಿಸಬೇಕಾದದ್ದು ಬೆಳಕು. ನಾವೇ ಸೃಷ್ಟಿಸಿಕೊಳ್ಳುವ ಬೆಳಕಿಗಿಂತ ಸೂರ್ಯನ ಬೆಳಕು ಉತ್ತಮ. ಸಾಮಾನ್ಯವಾಗಿ ಉಪಯೋಗಿಸುವ ಫಿಲಂಗಳಲ್ಲಿ ಸೂರ್ಯನ ಪ್ರಕಾಶದಲ್ಲಿರುವ ದೃಶ್ಯ ಚೆನ್ನಾಗಿ ಮೂಡುತ್ತದೆ. ಸಾಧಾರಣವಾಗಿ ನಾವು ಕಾಣುವ ದೃಶ್ಯದಲ್ಲಿನ ವಸ್ತುಗಳು ಉತ್ತಮವಾದ ಹೆಚ್ಚಿನ ಪ್ರಕಾಶದಲ್ಲಿದ್ದರೆ ಮಾತ್ರ ವರ್ಣವ್ಯವಸ್ಥೆ ಕಾಣುತ್ತದೆ. ಇಲ್ಲವಾದರೆ ಈ ವರ್ಣವ್ಯತ್ಯಾಸವೇ ಕಾಣುವುದಿಲ್ಲ.

ಪ್ರಾರಂಭದಲ್ಲಿ ಡ್ಯಾಗರೇ ಟೈಪ್‌ಗಳಲ್ಲಿ ಛಾಯಾಚಿತ್ರಗಾರರು ಚಿತ್ರಗಳನ್ನು ತೆಗೆಯುತ್ತಿದ್ದಾಗ ಸದಾ ಸೂರ್ಯನ ಬೆಳಕಿನ ಪ್ರವೇಶಕ್ಕಾಗಿ ಹಾತೊರೆಯುತ್ತಿದ್ದರು. ಅವರಿಗೆ ಸದಾ ಸೂರ್ಯನ

ಪ್ರಕಾಶ ಮತ್ತು ಛಾಯಾಚಿತ್ರದ ವಿಷಯವೇ ಆಗಿರುತ್ತಿತ್ತು. ಆ ಚಿತ್ರಗಳನ್ನು 'ರವಿಚಿತ್ರ' ಸನ್ ಪಿಕ್ಚರ್ಸ್ ಎಂದೇ ಕರೆಯುತ್ತಿದ್ದರು. ೧೮೪೦ರಲ್ಲಿ ಫ್ರಾನ್ಸ್‌ನಲ್ಲುಂಟಾದ ಒಣ ಹವೆ, ತಿವ್ರ ಬಿಸಿಲು ಮತ್ತು ಕ್ಷಾಮಕ್ಕೆ ಛಾಯಾಚಿತ್ರಗಾರರೇ ಕಾರಣವೆಂದೂ, ಅವರು ಚಿತ್ರಗಳಿಗಾಗಿ ಡ್ಯಾಗರೇ ಟೈಪ್‌ಗಳಿಂದ ಸೂರ್ಯನ ಪ್ರಕಾಶವನ್ನೆಲ್ಲಾ ಹೀರಿ ಕ್ಷಾಮವನ್ನುಂಟು ಮಾಡುತ್ತಿದ್ದಾರೆಂದೂ ಅಕ್ಷೆಪಣೆಗೆ ಗುರಿಯಾಗಿದ್ದರು.

ಅಮೆರಿಕದ ಪ್ರಪ್ರಥಮ ಛಾಯಾಚಿತ್ರಾಲಯ(ಇದು ವಿಶ್ವದ ಪ್ರಥಮ ಭಾವಚಿತ್ರ ಛಾಯಾಚಿತ್ರಾಲಯವೂ ಹೌದು)ವನ್ನು ನ್ಯೂಯಾರ್ಕ್ ವಿಶ್ವವಿದ್ಯಾನಿಲಯದ ಕಟ್ಟಡದ ಛಾವಣಿಯ ಮೇಲೆ, ಖ್ಯಾತ ಟೆಲಿಗ್ರಫಿ ಸಂಶೋಧಕ ಸ್ಯಾಮ್ಯುಯಲ್ ಎಫ್.ಬಿ.ಮಾರ್ಸ್, ಅವರು ಸಹೋದ್ಯೋಗಿಯೊಂದಿಗೆ ೧೮೪೦ರಲ್ಲಿ ಪ್ರಾರಂಭಿಸಿದರು. ನಂತರ ಮತ್ತೊಂದು ಛಾಯಾ ಚಿತ್ರಾಲಯವನ್ನು ಸೂರ್ಯನ ಪ್ರಕಾಶಕ್ಕೆ ಹೊಂದಿಸಿಕೊಂಡು ಒಂದು ವಾಣಿಜ್ಯ ಕಟ್ಟಡದ ಛಾವಣಿಯ ಮೇಲೆ ಸ್ಥಾಪಿಸುವುದರೊಂದಿಗೆ ಛಾಯಾಚಿತ್ರಕಲೆಯನ್ನು ಬೋಧಿಸುತ್ತಿದ್ದರು. ಹಾಗೂ ಈ ಛಾಯಾಚಿತ್ರಾಲಯಗಳಲ್ಲಿ ಭಾವಚಿತ್ರಗಳನ್ನು ತೆಗೆಯುತ್ತಿದ್ದರು".[೧೭]

ಸೂರ್ಯನ ಪ್ರಕಾಶ ಸದಾ ಒಂದೇ ತರಹ ಇರುವುದಿಲ್ಲವೆಂಬುದು ಸಾಧಾರಣ ಸಂಗತಿ. ಈ ಪ್ರಕಾಶದ ವರ್ಣ ಶುಭ್ರ ವರ್ಣ, ಇದು ಸಪ್ತವರ್ಣಗಳ ಸಮನ್ವಯವೆಂದೂ ಅರಿತಿದ್ದೇವೆ.

ಯಾವುದೇ ದೃಶ್ಯವನ್ನು ಕಾಣಲು ಕೇವಲ ಕಣ್ಣುಗಳೇ ಸಾಲದು. ದೃಶ್ಯದ ಮೇಲೆ ಸಾಕಷ್ಟು ಪ್ರಕಾಶ ಬಿದ್ದಿರಬೇಕು ಹಾಗೂ ಆ ದೃಶ್ಯ ಪ್ರಕಾಶವನ್ನು ಬಿಂಬಿಸುತ್ತಿರಬೇಕು. ನಮ್ಮ ಕಣ್ಣುಗಳು ಕಾಣುವ ದೃಶ್ಯ ಮತ್ತು ಕ್ಯಾಮರದಲ್ಲಿ ಮೂಡುವ ದೃಶ್ಯದ ಪ್ರತಿಬಿಂಬ ಒಂದೇ ತರಹ ಇದ್ದರೂ ನಾವು ನೋಡುವ ದೃಶ್ಯದ ಪ್ರಕಾಶದಂತೆಯೇ ನೆಗೆಟಿವ್‌ನಲ್ಲಿ ಮೂಡುವ ದೃಶ್ಯದ ಪ್ರಕಾಶವೂ ಇರುತ್ತದೆಂದು ತಿಳಿಯಬಾರದು. ನಾವು ನೋಡುವ ವಸ್ತು ಅಥವಾ ದೃಶ್ಯ ನಮಗೆ ಮನದಟ್ಟಾದರೆ ಸಾಕು. ಅದರ ಪ್ರಕಾಶದ ಕಡೆಗೆ ಗಮನಿಸುವುದಿಲ್ಲ. ಇದರಿಂದಾಗಿ ಸಾಮಾನ್ಯ ಬೆಳಕಿರುವ ಮನೆಗಳಲ್ಲಿ ಹೊರಭಾಗಕ್ಕಿಂತ ನೂರರಷ್ಟು ಕಡಿಮೆ ಬೆಳಕಿದ್ದರೂ ಅದರ ಅರಿವಾಗುವುದಿಲ್ಲ. ಆದರೆ ನೆಗೆಟಿವ್‌ಗಳಲ್ಲಿ ಇದು ಅಪಾರ ವ್ಯತ್ಯಾಸಕ್ಕೆ ಕಾರಣವಾಗುತ್ತದೆ ಅಥವಾ ಆ ಪ್ರಕಾಶದಲ್ಲಿ ಚಿತ್ರಗಳು ಮೂಡುವುದಿಲ್ಲ.

ನಮ್ಮ ಕಣ್ಣುಗಳಿಗೆ ದೃಶ್ಯವನ್ನು ಗ್ರಹಿಸುವ ಶಕ್ತಿ ಇದೆಯೇ ಹೊರತು ಅದೇ ದೃಶ್ಯವನ್ನು ತದೇಕ ದೃಷ್ಟಿಯಿಂದ ನೋಡುವುದರಿಂದ ದೃಶ್ಯದ ಪ್ರಕಾಶವನ್ನು ಕ್ರೋಡೀಕರಿಸಿಕೊಳ್ಳಲು ಸಾಧ್ಯವಿಲ್ಲ. ಆದರೆ ನೆಗೆಟಿವ್‌ಗಳಲ್ಲಿ ಮೂಡುವ ದೃಶ್ಯದ ಪ್ರತಿಬಿಂಬದ ಪ್ರಕಾಶವನ್ನು ನಮಗೆ ಬೇಕಾಗುವಷ್ಟು ಕಾಲ ಕ್ಯಾಮರಾಲೆನ್ಸ್ ಮತ್ತು ಶಟರ್‌ಗಳಿಂದ ಕ್ರೋಡೀಕರಿಸಿಕೊಳ್ಳಬಹುದು. ನಮ್ಮ ಊಹಾಶಕ್ತಿ ಮತ್ತು ಕಲ್ಪನೆಯ ಒತ್ತಡದಲ್ಲಿ ಸೂರ್ಯನ ಬೆಳಕು ಮತ್ತು ಸಂಜೆಯ ಪ್ರಕಾಶದಲ್ಲಿ ಯಾವ ಬದಲಾವಣೆಯನ್ನು ಕಾಣುವುದಿಲ್ಲ. ಪರಿಸರದಿಂದ ದೃಶ್ಯ ಅಥವಾ ವಸ್ತುಗಳ ಮೇಲೆ ಪ್ರತಿಫಲಿಸುವ ವರ್ಣದ ಪ್ರಕಾಶದಲ್ಲಿಯೂ ವಸ್ತು ಅಥವಾ ದೃಶ್ಯದ ನೈಜವರ್ಣವನ್ನೇ ಮನದಟ್ಟು ಮಾಡಿಕೊಂಡಿರುತ್ತೇವೆ.

ಪ್ರಕಾಶವಾದ ಬಿಳಿ ಸೀರೆಯುಟ್ಟು ಕೆಂಪುಗುಲಾಬಿ ಮುಡಿದಿರುವುದನ್ನು ಗಮನಿಸಿ ಚಿತ್ರ ತೆಗೆದರೆ ತಾವು ಚಿತ್ರ ತೆಗೆಯುವಾಗ ಹಸಿರು ಹುಲ್ಲಿನ ಪರಿಸರದ ಹಸಿರು ಪ್ರತಿಫಲವನ್ನು ಗಮನಿಸದೇ ಇದ್ದುದನ್ನು ತಮ್ಮ ವರ್ಣಪಾರದರ್ಶಕಗಳಲ್ಲಿ ಯಥಾವತ್ತಾಗಿ ಕಾಣದೇ ಇದ್ದರೂ ವರ್ಣಚಿತ್ರಗಳನ್ನು ಮೆಚ್ಚಿಕೊಳ್ಳುತ್ತೇವೆ. ಹೀಗಿರುವಾಗ ಪರಿಸರ ಬೆಳಿಗ್ಗೆ ಮತ್ತು ಸಂಜೆಗಳಲ್ಲುಂಟಾಗುವ ಪ್ರಕಾಶದ ವರ್ಣ ಮತ್ತು ಪ್ರತಿಫಲನಗಳನ್ನು ಗಮನಿಸುವುದೇ ಇಲ್ಲ.

ಕಪ್ಪು-ಬಿಳುಪು ಛಾಯಾಚಿತ್ರಗಳಿಗೆ ಬೆಳಗಿನ ಮತ್ತು ಸಂಜೆಯ ಸೂರ್ಯನ ಪ್ರಕಾಶ ಅತ್ಯುತ್ತಮ. ಈ ಬೆಳಕಿನಲ್ಲಿ ದೃಶ್ಯದ ವಸ್ತು ವಿನ್ಯಾಸ ಉತ್ತಮವಾಗಿ ಗೋಚರಿಸಿ ನೆರಳಿನ ಪ್ರಮಾಣವೂ ಕಡಿಮೆ ಇರುತ್ತದೆ. ಈ ಬೆಳಕಿನಲ್ಲಿ ಮೂಡುವ ಉದ್ದನೆಯ ನೆರಳನ್ನು ಸೂಕ್ತವಾಗಿ ಚಿತ್ರದಲ್ಲಿ ಮೂಡುವಂತಾಗಲೀ ಅಥವಾ ಮೂಡದೇ ಇರುವಂತಾಗಲೀ ಮಾಡಿಕೊಂಡರೆ ಸಾಕು ಈ ಬೆಳಕು ಮುಖದ ಮೇಲೆ ಮೂಡುವ ಉಬ್ಬು, ಮೂಗು ಗಲ್ಲಗಳಿಂದ ಮೂಡುವ ನೆರಳನ್ನು ಕಡಿಮೆ ಮಾಡಿ ಉತ್ತಮ ಚಿತ್ರಗಳನ್ನು ಪಡೆಯಲು ಅನುಕೂಲವಾಗಿರುತ್ತದೆ. ವರ್ಣಚಿತ್ರಗಳಲ್ಲಿ ಮುಂಜಾನೆಯ ಮತ್ತು ಮುಸ್ಸಂಜೆಯ ಬೆಳಕು ಅಸಹಜವಾಗಿರುವಂತಹ ಭಾವನೆಯನ್ನು ಚಿತ್ರದಲ್ಲಿ ತರುತ್ತದೆ.

ಸೂರ್ಯೋದಯ ಮತ್ತು ಸೂರ್ಯಾಸ್ತ ರಂಜನೀಯ ಚಿತ್ರಗಳಿಗೆ ಅವಕಾಶ ಮಾಡಿಕೊಡುವುದಲ್ಲದೆ ಕಪ್ಪು ಛಾಯೆಯ ಸಿಲ್‌ಹೌಟ್ ಚಿತ್ರಗಳನ್ನು ತೆಗೆಯಲೂ ಅನುಕೂಲವಿರುತ್ತದೆ. ಉತ್ತಮ ವರ್ಣಚಿತ್ರಗಳಿಗೆ ಮಧ್ಯಾಹ್ನಕ್ಕೆ ಮೊದಲು ಮತ್ತು ನಂತರವಷ್ಟೇ ಅಲ್ಲದೇ ಬಿಳಿಮೋಡದ ವಾತಾವರಣದ ಅಥವಾ ಬಿಸಿಲು ಕಡಿಮೆ ಇರುವ ಮಧ್ಯಾಹ್ನದ ಕೆಲವು ಗಂಟೆಗಳು ಉತ್ತಮ.

ಕ್ಯಾಮರಾ ಹಿಡಿದು ಕ್ಲಿಕ್ ಮಾಡುವುದರಿಂದಲೇ ಫೋಟೋಗ್ರಾಫರ್ ಅಂದುಕೊಳ್ಳುವುದರಲ್ಲಿ ತಪ್ಪೇನೂ ಇಲ್ಲ. ಕುಂಚ ಹಿಡಿದು ಹಾಳೆ ಅಥವಾ ಪರದೆಯ ಮೇಲೆ ಚಿತ್ರ ಬಿಡಿಸುವ ತಾನು ಚಿತ್ರಕಾರನೆಂದು ಕೊಳ್ಳುವುದು ಸಮಂಜಸವೇ. ಆದರೆ ಚಿತ್ರಕಾರ ಬಣ್ಣ, ಕುಂಚ, ಹಾಳೆ, ಪರದೆಗಳ ವಿಷಯವನ್ನೂ ಆ ಕಲೆಯ ಬಗ್ಗೆಯೂ ದೀರ್ಘ ಅಧ್ಯಯನ ನಡೆಸಿ ಆ ಕೌಶಲ್ಯದಿಂದ ತನ್ನ ಚಿತ್ರ ಎಲ್ಲರ ಗಮನ ಸೆಳೆಯುವಂತೆ ಮಾಡುತ್ತಾನೆ. ಅಂತೆಯೇ ಛಾಯಾಚಿತ್ರಕಾರನೂ ಸಹ ತನ್ನ ಕ್ಯಾಮರಾ, ಫಿಲಂ, ಮತ್ತಿತ್ತರೆ ಸಹೋಪಕರಣಗಳಾದ ಲೆನ್ಸ್, ಫಿಲ್ಟರ್ಸ್, ಸ್ಟ್ಯಾಂಡ್, ರಿಫ್ಲೆಕ್ಟರ್ಸ್ ಮತ್ತು ಪ್ರಕಾಶಗಳ ಬಗ್ಗೆಯೂ ಹಾಗೂ ಎಕ್ಸ್‌ಪೋಸ್ ಆದ ಫಿಲಂ, ನೆಗೆಟಿವ್ ಅಥವಾ ಟ್ರಾನ್ಸ್‌ಪರೆನ್ಸಿಯಾಗಿಯಾಗಲಿ ಅಥವಾ ಫೋಟೋಗಳಾಗಿರಲಿ ಆಗುವವರೆಗಿನ ವಿವಿಧ ಹಂತದ ರಾಸಾಯನಿಕ ಕ್ರಿಯೆ ಮತ್ತು ಭೌತಿಕ ಮಾರ್ಪಾಡುಗಳ ಬಗ್ಗೆಯೂ ಅರಿತರಷ್ಟೇ ಚಿತ್ರಗಳನ್ನು ಲೋಪದೋಷಗಳಿಂದ ಮುಕ್ತವಾಗಿಸಲು ಸಾಧ್ಯ.

೧. ರೇಖಾಚಿತ್ರಗಳು

೨. ಪೇಂಟಿಂಗ್ಸ್

೩. ಫೋಟೋಗ್ರಫೀ

೪. ಪುಸ್ತಕಗಳ ಮುಖಪುಟ

೫. ಶಿಲ್ಪಕಲೆ

೬. ಪ್ಲಾಸ್ಟರ್ ಅಪ್ಸಾರಿಸ್ ಕಲೆ

೭. ಕಾರ್ಟೂನ್ ಚಿತ್ರಗಳು

೮. ಸಿನಿಮಾದ ಚಿತ್ರಗಳು

ಕಾವ್ಯವಾದರೂ ದೀರ್ಘಕಾಲ ಉಳಿಯಬಹುದು. ಕಂಠಪಾಠದಿಂದಾಗಲಿ, ಪ್ರತಿಗಳನ್ನು ತೆಗೆಯುವುದರಿಂದಾಗಲಿ ಅವುಗಳನ್ನು ಉಳಿಸಿಕೊಳ್ಳಲು ನಾವು ಶಕ್ತರಾಗುವೆವು. ಆದರೆ ಚಿತ್ರಗಳನ್ನು ನಕಲು ತೆಗೆಯುತ್ತ ಬಂದಂತೆ ಮೂಲ ಚಿತ್ರಕಾರರ ಭಾವಜೀವಿಗಳೆರಡೂ ಕಳೆಗುಂದುತ್ತ ಬರುವುದು ನಿಶ್ಚಯ ಮೂಲಚಿತ್ರಗಳನ್ನು ಯಾವ ಗೋಡೆ, ಕಾಗದ, ಮರ ಇವುಗಳ ಮೇಲೆ ಬರೆದಿರುವರೋ ಆ ವಸ್ತುಗಳ ವಿನಾಶದ ಬಳಿಕ ಇದೊಂದು ಕ್ಷಣಕಾಲ ಕಾಣಿಸದು. ಇನ್ನು ಆ ವಸ್ತುಗಳು ಚೆನ್ನಾಗಿದ್ದರೂ ಆ ಚಿತ್ರಗಳು ಕೆಲವು ಕಾಲ ಬಾಳಿ ಬದುಕಲು, ಸೂರ್ಯರಶ್ಮಿಗಳನ್ನು ವಾತಾವರಣದ ವ್ಯತ್ಯಾಸಗಳನ್ನು ತಡೆಯುವ ಶಕ್ತಿಯು ಅವುಗಳಲ್ಲಿರಬೇಕು. ಇದ್ದವುಗಳಲ್ಲಿ ದೀರ್ಘಾಯುಗಳೆಂದರೆ ಶಿಲ್ಪ ಮತ್ತು ವಾಸ್ತು ಶಿಲ್ಪಗಳು. ಇವುಗಳಿಗೆ ಸಾವಿರಾರು ವರುಷಗಳನ್ನು ಧಿಕ್ಕರಿಸುವ ಶಕ್ತಿಯಿದೆ. ಎನ್ನಬಹುದು. ಆದುದರಿಂದ ಇಂದು ನಮಗೆ ಇವುಗಳ ಪ್ರಾಚೀನತೆಯ ಕುರುಹು ದೊರೆಯುವಂತೆ ಚಿತ್ರಕಲೆಯ ನಿದರ್ಶನಗಳು ಸಿಗುವುದಿಲ್ಲ. ಆದರೆ ಚಿತ್ರಕಲೆಯ ಬಗ್ಗೆ ಅವುಗಳೇ ಬಂದು ಸಾಕ್ಷಿ ಹೇಳುವಷ್ಟು ದೀರ್ಘಾಯುಗಳಾಗಿಲ್ಲವಾದರೂ ಅದು ಅತಿ ಪೂರ್ವದಿಂದಿತ್ತೆಂಬ ಬಗ್ಗೆ ಪರೋಕ್ಷ ಸಾಕ್ಷಿಗಳು ಸಾಕಷ್ಟು ದೊರೆಯುತ್ತವೆ.

**ಸಿನಿಮಾಗಳು**

**ಮಹಾಕವಿ ಕಾಳಿದಾಸ–೧೯೫೫**

**ಚಿತ್ರ ವಿಶ್ಲೇಷಣೆ**

೧೯೫೫ರಲ್ಲಿ ಬಿಡುಗಡೆಯಾದ “ಮಹಾಕವಿ ಕಾಳಿದಾಸ” ಚಲನಚಿತ್ರ ಉತ್ತರ ಭಾರತದ ಸಂಸ್ಕೃತ ಭಾಷೆಯ ಕವಿ ಕಾಳಿದಾಸನ ಜೀವನದ ಸುತ್ತ ಹೆಣೆದ ಕಥೆ. ಇದು ಅನೇಕ ಭಾಷೆಗಳಲ್ಲಿ ಚಲನಚಿತ್ರವಾಗಿದೆ. ಕನ್ನಡದ “ಮಹಾಕವಿ ಕಾಳಿದಾಸ” ಚಲನಚಿತ್ರ ಯಶಸ್ವಿಯಾಗಲು ಅದರ ಕಥೆ, ಚಿತ್ರಕಥೆ, ಮಿಗಿಲಾಗಿ ಸಂಭಾಷಣೆ ಮತ್ತು ಹಾಡುಗಳೇ ಕಾರಣ. ಇದೆಲ್ಲದರ ಹೊಣೆಯನ್ನು ಹೊತ್ತಿದ್ದ ಕು.ರ.ಸೀತಾರಾಮಶಾಸ್ತ್ರಿಗಳು ಬಹಳ ಶ್ರಮ ವಹಿಸಿದ್ದಾರೆ. ಈ ಚಿತ್ರದಲ್ಲಿ ಸಂಭಾಷಣೆ ಕಾವ್ಯಮಯವಾಗಿದೆ.

ಸಂಭಾಷಣೆಯ ಬಗ್ಗೆ ಹೇಳುವುದಾದರೆ, ಕಾಶ್ಮೀರದ ರಾಜನ ದುಷ್ಟಮಂತ್ರಿಯ ದುರುದ್ದೇಶದ ವರಪರೀಕ್ಷೆಗೆ ಹೋಗಿ, ಕನ್ಯಾಪರೀಕ್ಷೆಯಾಗುವ ಸಂದರ್ಭದ ಸಂಭಾಷಣೆ. ಕಾಶಿ ವಿಶ್ವನಾಥನ

ದೇವಸ್ಥಾನದಲ್ಲಿ ಉಜ್ಜಯಿನಿಯ ವಿಕ್ರಮಾದಿತ್ಯ ರಾಜ, ಅವನ ಮಂತ್ರಿ ಮತ್ತು ಕಾಳಿದಾಸ ಇವರ ನಡುವೆ ನಡೆಯುವ ಸಂಭಾಷಣೆ, ಭೋಜರಾಜನ ಆಸ್ಥಾನದ ನರ್ತಕಿ, ವೇಶ್ಯೆ ಚಿತ್ರಮಂಜರಿ ಮತ್ತು ಕಾಳಿದಾಸನ ಸಂಭಾಷಣೆಯು ಚೆನ್ನಾಗಿ ಮೂಡಿಬಂದಿದೆ. ಕಾಶ್ಮೀರದ ರಾಜ ವಾನಪ್ರಸ್ಥಾಶ್ರಮಕ್ಕೆ ಹೋಗಲು ನಿರ್ಧರಿಸಿ ಅಳಿಯ ಮಗಳೊಡನೆ ಆಡುವ ಸಂಭಾಷಣೆ ಉತ್ತಮವಾಗಿದೆ. ಕಥೆಗೆ ಅತ್ಯಂತ ಅವಶ್ಯಕತೆಯಿಲ್ಲದಿದ್ದರೂ ಕಾಳಿದಾಸನ ಪಾಂಡಿತ್ಯವನ್ನು ಅಭಿವ್ಯಕ್ತಗೊಳಿಸುವ ಸಲುವಾಗಿ ಕಾಶಿ ವಿಶ್ವನಾಥನ ದೇವಸ್ಥಾನದಲ್ಲಿ ವ್ಯಾಸರ ಬಗ್ಗೆ, ಅರ್ಚಕರ ಪ್ರಚೋದನೆಯಿಂದಾಗುವ ಸನ್ನಿವೇಶ–ರಾಜ್ಯದ ಪ್ರಸಕ್ತ ಪರಿಸ್ಥಿತಿಯನ್ನರಿಯಲು ಆಗಿನ ಕಾಲದ ರಾಜರು ಮಾರುವೇಷ ಧರಿಸಿ ಸುತ್ತುತ್ತಿದ್ದ ಸನ್ನಿವೇಶಗಳು–ರಾಜನು ನಿರಂಕುಶಪ್ರಭುವಾದರೂ ಪ್ರಜೆಗಳ ಭಾವನೆಗಳನ್ನು ಗೌರವಿಸಿ ಸಂದರ್ಭಗಳನ್ನು ನಿಭಾಯಿಸುತ್ತಿದ್ದ ಪ್ರಜಾಸತ್ತಾತ್ಮಕ ವಿಧಾನ ಇತ್ತು.

ಉದಾಹರಣೆಗೆ ಆಸ್ಥಾನ ಪಂಡಿತರು ಕಾಳಿದಾಸನಿಗೆ ವೇಶ್ಯೆಯ ಸಂಬಂಧವಿದೆ ಎಂದು ದೂರು ನೀಡಿದಾಗ ಅದು ಸುಳ್ಳೆಂದು ರಾಜನಿಗೆ ಗೊತ್ತಿದ್ದರೂ ವಿಚಾರಣೆ ನಡೆಸಿ ಶಿಕ್ಷೆ ವಿಧಿಸಿದಂತೆ ಮಾಡಿ ತನ್ನ ಮಿತ್ರನನ್ನು ಆತನ ಪತ್ನಿಯೊಡನೆ ಮಾವನ ಮನೆಗೆ ಕಳುಹಿಸುವ ಏರ್ಪಾಟು ಮಾಡಿದ್ದು–ಭೋಜರಾಜ ಮತ್ತು ಕಾಳಿದಾಸನ ಪ್ರೀತಿ, ಗೌರವ, ವಿಶ್ವಾಸಗಳಿಗೆ ಸಂಬಂಧಿಸಿದಂತೆ ಚಕ್ರವರ್ತಿಗಾಗಿ ಕಾಳಿದಾಸನ ಕಾವ್ಯ ರಚನೆ–ಅದರ ಮೆಚ್ಚುಗೆಯ ಪ್ರತೀಕವಾಗಿ ಚಕ್ರವರ್ತಿಯಿಂದ ಕಾಳಿದಾಸನಿಗೆ ಅರ್ಧ ಸಿಂಹಾಸನದ ಆಹ್ವಾನ–ಚರಮ ಗೀತೆಯ ಸನ್ನಿವೇಶ ಎಲ್ಲವೂ ಚೆನ್ನಾಗಿ ಮೂಡಿಬಂದಿವೆ.

ಕಾಳಿದಾಸನ ಜೀವನದ ಸುತ್ತ ಹೆಣೆಯಲಾದ ಈ ಕಥೆಯ ಚಿತ್ರಕಥೆಯನ್ನು ರಚಿಸುವುದು ಅಷ್ಟು ಸುಲಭವಾಗಿರಲಿಲ್ಲ. ಹಲವಾರು ಬರಹಗಾರರು ಕಾಳಿದಾಸನ ಬಗ್ಗೆ ಬರೆದಿದ್ದರೂ ಸಹ ಖಚಿತವಾದ ವಿಷಯಗಳಿರಲಿಲ್ಲ. ನಿಖರವಾದ ಹತ್ತಿರವಾದ ಮಾಹಿತಿಗಳನ್ನು ಸಂಗ್ರಹಿಸಿ ಕು.ರ.ಸೀತಾರಾಮ ಶಾಸ್ತ್ರಿಯವರು ಚಿತ್ರಕಥೆಯನ್ನು ರಚಿಸಿದ್ದಾರೆ. ಚಿತ್ರಗೀತೆಗಳು ಚಿತ್ರದ ಯಶಸ್ಸಿಗೆ ತುಂಬಾ ಪೂರಕವಾಗಿವೆ. ಗೀತರಚನಾ ಪಂಡಿತರಾದ ಕು.ರ.ಸೀತಾರಾಮಶಾಸ್ತ್ರಿಯವರಿಗೆ ಗೀತರಚನೆ ಅಷ್ಟು ಕಷ್ಟವೆನಿಸಲಿಲ್ಲ. ಅಂತೆಯೇ ಅವರ ಜಾನಪದ ಸಾಹಿತ್ಯದಲ್ಲಿನ ಕೋಲಾಟದ "ಚೆಲುವಯ್ಯ ಚೆಲುವೋ", ಕಲ್ಯಾಣಿ ರಾಗದ "ಶೃಂಗಾರ ವಾಹಿನಿ ಮನ ಮೋಹಿನಿ" ಹಾಡುಗಳು ಅತ್ಯಂತ ಜನಪ್ರಿಯವಾದವು. ಆದರೆ, ಅದರಲ್ಲಿ ಒಂದು ಹಾಡನ್ನು ರಚಿಸಲು ಮಾತ್ರ ಅವರಿಗೆ ಸ್ಫೂರ್ತಿಯೇ ಬರಲಿಲ್ಲವೆಂದಿದ್ದಾರೆ.

ಚಿತ್ರದ ಅತ್ಯಂತ ಪ್ರಮುಖ ಸನ್ನಿವೇಶವಾದ ಭೋಜರಾಜನ ಆಸ್ಥಾನದಲ್ಲಿ ಕಾಳಿದಾಸ ರಚಿಸಿದ "ಮೇಘದೂತ", "ಕುಮಾರ ಸಂಭವ" ಮತ್ತು "ರಘುವಂಶ" ಮೊದಲಾದ ಕಾವ್ಯಗಳ ವಿವರಣೆಗಳನ್ನೊಳಗೊಂಡಂತೆ ಅಮೋಘ ರೀತಿಯಲ್ಲಿ ಆ ಗೀತೆಯನ್ನು ರಚಿಸಬೇಕಾಗಿತ್ತು. ಸೋಲನ್ನೊಪ್ಪಿಕೊಂಡ ಶಾಸ್ತ್ರಿಗಳು "ಇದೊಂದು ಗೀತೆಯನ್ನು ಮಾತ್ರ ಬೆಳ್ಳಾವೆ ನರಹರಿಶಾಸ್ತ್ರಿಗಳಿಂದ ಬರೆಸಬೇಕು. ಅದಕ್ಕೆ ಅವರೇ ಸಮರ್ಥರು" ಎಂದರು ಭಾಗವತರಿಗೆ. ಮಾರನೆಯ ದಿನ ನಿರ್ಮಾಪಕ ಮತ್ತು ನಿರ್ದೇಶಕರು ನಗುತ್ತಾ "ಕು.ರ.ಶೀ. ಬರೆಯುತ್ತಾನೆ ಎಂದರು. ಒತ್ತಾಯ

ಹಾಕಿದಾಗ "ಸರಿ, ನಾಳೆ ಬೆಳಿಗ್ಗೆ ಹತ್ತೂವರೆಗೆ ಬನ್ನಿ" ಎಂದರು. ಅವರು ಬೆಳಿಗ್ಗೆ ಹೋಗಿ ಸನ್ನಿವೇಶವನ್ನು ವಿವರಿಸಿದೊಡನೆಯೇ "ಬರೆದುಕೊಳ್ಳಯ್ಯ" ಎಂದರು ಶಾಸ್ತ್ರಿಗಳು.

"ರಾಜೇಂದ್ರ ನಾಂ। ರಚಿಸಿದೆನ್ನೆ ಪ್ರಭು।
ರಂಜಿಪ ಸುಕಾವ್ಯಗಳ। ನವರಸಯುತ ಕೃತಿಗಳ।

ಎಂದು ಹೇಳಿ "ಹೊನ್ನಪ್ಪ, ಇದಕ್ಕೆ ಟ್ಯೂನ್ ಮಾಡು" ಎಂದು ಹೇಳಿಕೊಟ್ಟಿದ್ದಾರೆ.

ಭಾಗವತರು ಕೇದಾರಗಳ ರಾಗದಲ್ಲಿ ಸ್ವರ ಸಂಯೋಜನೆ ಮಾಡಿ ಹಾಡಿ ತೋರಿಸಿದಾಗ, "ಭೇಷ್ ಚೆನ್ನಾಗಿದೆ, ಎಂದು ಹೇಳಿ ಕು.ರಾ.ಸೀ.ಯವರ ಕಡೆ ತಿರುಗಿ ಮುಂದಕ್ಕೆ ಬರೆದುಕೊಳ್ಳಯ್ಯ" ಎಂದು ಆದೇಶಿಸಿ

ಶಿವ ಪಾರ್ವತಿಯರ ಲೀಲೆಗಳ। ಸವಿಯನು
ವಿವರಿಸಿ ವಿರಚಿಸಿದೆ। ಕುಮಾರನುದಿಸಿ
ಮಹಿಮೆಯ ತೋರಿ।
ಅಮಿತಾನಂದವ। ಅಮರರಿಗೆ ಕರುಣಿಸಿದ
ಸುರಂಪುಹರ॥
ಎಂದು ಚರಣ ಪ್ರಾರಂಭಿಸಿ,
ಮೇಘ ಸಂದೇಶದ ಪೇಳುವೆನೊಲಿದು
ರಾಗಾವೇಶದ ನಿಜಸತಿಗೆ॥
ರಮಣನು ಕಳುಹಿಸಿದ ವಿರಹದ ಪರಿಯ।
ಸುಮಧುರ ಕೃತಿಯಿದು। ನರವಿನುತನೆ।
ಧರೆಯರಸನೆ ವರಚರಿತನೆ ॥೨॥
ವಾಗಾದಿಯನು। ಶ್ರೀಕಾವ್ಯವನಾ।
ರಘುವಂಶವನ। ಪೇಳಿಹೆನ್ಯೆ ದೇವಾ॥
ರಾಘವ ಚರಿತೆಯನು ಕೇಳ್ಳೈ॥
ಅನುರಾಗದಿ ನೀಂ। ಕವಿಜಗಹಿತ।
ನವಗುಣಯುತ। ಭುವನವಿನುತ॥೩॥"[೧೮]

ಎಂದು ಮುಗಿಸಿದರು. ಈ ಚರಣಗಳಿಗೆ ಭಾಗವತರು ಹಂಸಾನಂದಿ ಮತ್ತು ಕಾನಡಾ ರಾಗಗಳನ್ನು ಸಂಯೋಜಿಸಿದರು. ಬೆಳ್ಳಾವೆ ನರಹರಿಶಾಸ್ತ್ರಿಗಳ ಸಾಹಿತ್ಯ ಹೇಳಿ, ಕು.ರ.ಸೀ. ಬರೆದುಕೊಂಡು, ಹೊನ್ನಪ್ಪ ಭಾಗವತರು ಸ್ವರಸಂಯೋಜನೆ ಮಾಡಿ, ಹಾಡಿ ಮುಗಿಸಿದಾಗ ಕೇವಲ ಇಪ್ಪತ್ತು ನಿಮಿಷಗಳಾಗಿದ್ದವು ಅಷ್ಟೆ. ಇದರಿಂದ ಕನ್ನಡ ಚಿತ್ರ ಸಾಹಿತ್ಯದಲ್ಲಿ ಬೆಳ್ಳಾವೆ ನರಹರಿಶಾಸ್ತ್ರಿಗಳ ಪ್ರತಿಭೆಯು ಮುಖ್ಯವಾಗುತ್ತದೆ.

ಚಿತ್ರಕ್ಕೆ ಕರ್ನಾಟಕ ಶಾಸ್ತ್ರೀಯ ಸಂಗೀತವನ್ನು ಅಳವಡಿಸಿ, ಆದಷ್ಟು ದೇಶೀಯ ವಾದ್ಯಗಳನ್ನೇ ಬಳಸಬೇಕೆಂಬ ಉದ್ದೇಶದಿಂದ ವೀಣೆ, ಕೊಳಲು, ಮೃದಂಗ, ಕೆಲವು ತಂತಿ ವಾದ್ಯಗಳು ಮತ್ತು ವಿದೇಶಿಗರ ಹತ್ತಿರ ಇದ್ದ ಕ್ಲಾರಿಯೋನೆಟ್‌ಗಳನ್ನು ಬಳಸಿ ಹಾಡುಗಳ ಧ್ವನಿಮುದ್ರಣ ಮಾಡಿದರು.

ಹೊನ್ನಪ್ಪ ಭಾಗವತರು ಚಿತ್ರದಲ್ಲಿನ ಗುರುವಿನ ಪಾತ್ರಕ್ಕೆ ತಮ್ಮ ಸಂಗೀತ ಗುರು, ಸಂಬಂಧ ಮೂರ್ತಿ ಭಾಗವತರನ್ನು ಆಯ್ಕೆ ಮಾಡಿಕೊಂಡಿದ್ದು ಸೂಕ್ತವಾಗಿತ್ತು. ಹೊನ್ನಪ್ಪ ಭಾಗವತರ ಕಾಳಿದಾಸನ ಪಾತ್ರ, ಬೇಲೂರು ರಾಘವೇಂದ್ರರಾಯರ ಭೋಜನ ಪಾತ್ರ ಅಮೋಘವಾಗಿದ್ದವು. ಪ್ರಪ್ರಥಮವಾಗಿ ನಾಯಕ ನಟಿಯಾಗಿ ಅಭಿನಯಿಸಿದ ಬಿ.ಸರೋಜಾದೇವಿಯವರು ಪೂರ್ವಾರ್ಧದಲ್ಲಿ ಸ್ವಲ್ಪ ಭಯದಿಂದಲೇ ನಟಿಸಿದಂತೆ ಕಾಣುತ್ತದೆ. ಅಂತ್ಯದ ಕೆಲವು ದೃಶ್ಯಗಳನ್ನು ಬಿಟ್ಟರೆ ಚಿತ್ರದುದ್ದಕ್ಕೂ ದುಃಖಪೂರಿತ ಹೆಣ್ಣಾಗಿಯೇ ಕಾಣಿಸಿಕೊಂಡರು.

ಚಿತ್ರ ಚೆನ್ನಾಗಿ ಮೂಡಿಬರಲು ಕು.ರ.ಸೀ. ಅವರು ತುಂಬಾ ಶ್ರಮಿಸಿದ್ದಾರೆ. ಸಂಪೂರ್ಣ ವರ್ಣಚಿತ್ರ ಹೊರಬರಲು ೧೯೬೪ರ "ಅಮರಶಿಲ್ಪಿ ಜಕಣಾಚಾರಿ" ಚಿತ್ರದವರೆಗೆ ಕಾಯಬೇಕಾದರೂ ಇವರು ೧೯೫೫ರಲ್ಲೇ ಈ ಚಿತ್ರಕ್ಕೆ ಮೂರು ಚಿಕ್ಕ ದೃಶ್ಯಗಳನ್ನು ವರ್ಣದಲ್ಲಿ ತೆಗೆದಿರುವುದು ಸಾಹಸವೆಂದೇ ಹೇಳಬೇಕು. ಹೀಗೆ ತಮ್ಮಲ್ಲಡಗಿದ್ದ ಪ್ರತಿಭೆಯನ್ನು ಬಳಸಿಕೊಂಡು ಈ ಚಿತ್ರ ಚೆನ್ನಾಗಿ ಮೂಡಿಬರಲು ಅವರು ವಿದೇಶದಲ್ಲಿ ಕಲಿತುಬಂದಿದ್ದ ಮಾಧ್ಯಮದ ತಂತ್ರಗಳು ಉಪಯೋಗಕ್ಕೆ ಬಂದವು.

"ಮಹಾಕವಿ ಕಾಳಿದಾಸ" ಚಿತ್ರ ಹಲವು ದೃಷ್ಟಿಯಿಂದ ಒಂದು ಮಹತ್ವದ ಜಾನಪದ ಚಿತ್ರ. ನಿರ್ಮಾಪಕ ಹೊನ್ನಪ್ಪ ಭಾಗವತರು ಅಭಿನಯಕ್ಕಿಂತ ಗಾಯನದಲ್ಲಿ ಹೆಚ್ಚು ಸಾಧನೆ ಮಾಡಿ ಹೆಸರಾದವರು. ಈ ಚಿತ್ರದ ಹಾಡುಗಳನ್ನು ಅವರೇ ಹಾಡಿರುವುದರಿಂದ ಅವರ ಗಾಯನವೂ ಒಂದು ದಾಖಲೆಯೆನಿಸಿ ಕನ್ನಡದ ಕೋಗಿಲೆ ಚಿರಸ್ಥಾಯಿಯಾಯಿತು. ಇಂದಿನ ಹಲವು ಭಾಷೆಗಳ ಖ್ಯಾತ ತಾರೆ ಬಿ.ಸರೋಜಾದೇವಿಯವರು ಉದಯಿಸಿದ್ದು ಈ ಚಿತ್ರದಿಂದಲೇ. ಸಮಾರಂಭದ ಆರ್ಕೆಸ್ಟ್ರಾವೊಂದರಲ್ಲಿ ಹಾಡುತ್ತಿದ್ದ ಆಕೆಯನ್ನು ಹೊನ್ನಪ್ಪ ಭಾಗವತರು ನೋಡಿ ಈ ಚಿತ್ರದ ಮೂಲಕ ಕನ್ನಡ ಚಲನಚಿತ್ರ ರಂಗಕ್ಕೆ ಪರಿಚಯ ಮಾಡಿದರು. ಇದು ಭಾರತೀಯ ಚಲನಚಿತ್ರರಂಗಕ್ಕೆ ಹೊನ್ನಪ್ಪ ಭಾಗವತರ ಒಂದು ದೊಡ್ಡ ಕೊಡುಗೆ ಎನ್ನಬಹುದು. "ಕು.ರ.ಸೀ.ಯವರು ನನ್ನನ್ನು ತಿದ್ದಿ ನಟನೆ, ಮಾತು, ಎಲ್ಲಾ ಕಲಿಸಿದ ಗುರುಗಳು" ಎನ್ನುವ ಬಿ.ಸರೋಜಾದೇವಿಯವರ ಕೃತಜ್ಞತೆಯ ಮಾತುಗಳು ಪ್ರಶಂಸನೀಯ. ಮುಂದೆ ಭಾರತೀಯ ಚಲನಚಿತ್ರರಂಗದಲ್ಲಿ ನಿರ್ದೇಶಕರಾಗಿ ಎತ್ತರಕ್ಕೆ ಬೆಳೆದ ಎಸ್.ರಾಮನಾಥನ್‌ರವರು ಸಹಾಯಕ ನಿರ್ದೇಶಕರಾಗಿ ತಮ್ಮ ವೃತ್ತಿಜೀವನವನ್ನು ಆರಂಭಿಸಿದ್ದು, ಈ ಚಿತ್ರದಿಂದಲೇ.

ಈ ಮೊದಲು "ಭಕ್ತ ಕುಂಬಾರ" ಎಂಬ ಭಕ್ತಿಪ್ರಧಾನ ಕನ್ನಡಚಿತ್ರವನ್ನು ನಿರ್ಮಿಸಿದ್ದ ಹೊನ್ನಪ್ಪ ಭಾಗವತರು, ತಮಿಳು ಚಿತ್ರಗಳಲ್ಲಿ ಅವರು ಗಳಿಸಿದ್ದ ಹಣವನ್ನು ಹಾಕಿ ತಮ್ಮ ಬಹುದಿನದ

ಕನಸಾಗಿದ್ದ ಈ ಚಿತ್ರವನ್ನು ತಯಾರಿಸಲು ತೊಡಗಿಸಿದರು. ಹೊನ್ನಪ್ಪ ಭಾಗವತರು ಚಿತ್ರ ಮುಗಿದು ಬಿಡುಗಡೆಯಾಗುವವರೆಗೆ ಹೆಚ್ಚು ಉದ್ಯಮಿಗಳಂತೆ ತಾವು ಒಂದು ಹೋರಾಟವನ್ನು ನಡೆಸಬೇಕಾಯಿತು. ಇನ್ನು ೯-೧೦ ದಿನಗಳಲ್ಲಿ ಚಿತ್ರ ಮುಗಿಯುವುದು ಎನ್ನುವಾಗ ಛಾಯಾಗ್ರಾಹಕ ಸರ್ಕಾರಿ ಕೆಲಸ ಸಿಕ್ಕಿತೆಂದು ಇದ್ದಕ್ಕಿದ್ದಂತೆಯೇ ಬಿಟ್ಟು ಹೋದರು. ಚಿತ್ರ ಬಿಡುಗಡೆಗೆ ದಿನಾಂಕ ಗೊತ್ತು ಮಾಡಿ ಪ್ರಚಾರ ನಡೆಸಿದ ಮೇಲೆ ಚಿತ್ರ ನೋಡಿದಾಗ ಸೌಂಡ್ ನಾನ್ ಸಿಂಕ್ ಆಗಿರುವುದು ಗೊತ್ತಾಗಿ ಭಾಗವತರು ಕಣ್ಣೀರಿಡುತ್ತಾ ಕುಳಿತುಕೊಳ್ಳಬೇಕಾಯಿತು. ಇದು ಸ್ಟುಡಿಯೋ ಮಾಲೀಕರಾದ ರೆಡ್ಡಿಯವರಿಗೆ "ರತ್ನಗಿರಿ ರಹಸ್ಯ" (೧೯೫೭, ನಿ: ಬಿ.ಆರ್.ಪಂತಲು), "ಮಕ್ಕಳ ರಾಜ್ಯ"(೧೯೬೦, ನಿ: ಬಿ.ಆರ್.ಪಂತಲು), "ವಿಜಯನಗರದ ವೀರಪುತ್ರ"(೧೯೬೧, ನಿ: ಆರ್.ನಾಗೇಂದ್ರರಾವ್), "ವೀರಕೇಸರಿ"(೧೯೬೩, ನಿ: ವಿಠಲಾಚಾರ್ಯ), "ಸತಿ ಶಕ್ತಿ"(೧೯೬೩, ನಿ: ಕಣಗಾಲ ಪ್ರಭಾಕರಶಾಸ್ತ್ರಿ), "ಅಮರ ಶಿಲ್ಪಿ ಜಕಣಾಚಾರಿ"(೧೯೬೪, ನಿ: ಬಿ.ಎಸ್.ರಂಗಾ), "ಋಷ್ಯಶೃಂಗ"(೧೯೭೭, ನಿ: ವಿ.ಆರ್.ಕೆ.ಪ್ರಸಾದ್), "ಸಂಗೀತ"(೧೯೮೧), ನಿ: ಚಂದ್ರಶೇಖರ ಕುಂಬಾರ), "ಸಂಗ್ಯಾಬಾಳ್ಯ"(೧೯೯೨, ನಿ: ಸುಂದರ ಕೃಷ್ಣ ಅರಸ್), "ನಾಗಮಂಡಲ"(೧೯೯೭, ನಿ: ಟಿ.ಎಸ್.ನಾಗಾಭರಣ), ಮುಂತಾದ ಅನೇಕ ಜಾನಪದ ಮಾದರಿಯ ಚಲನಚಿತ್ರಗಳು ನಮ್ಮಲ್ಲಿ ಮೂಡಿಬಂದಿವೆ. ಚಮತ್ಕಾರ ಮತ್ತು ಅನೇಕ ಸಾಹಸಗಳ ಮೂಲಕ ಸಾಧಿಸಲಾಗದ್ದನ್ನು ಸಾಧಿಸುವ ಆಶಯಗಳನ್ನು ಹೊತ್ತ ಈ ಮಾದರಿಯ ಚಿತ್ರಗಳು ಮನರಂಜನೆಯನ್ನು ಮತ್ತು ನೀತಿಪಾಠವನ್ನು ಏಕಕಾಲದಲ್ಲಿ ಉಂಟುಮಾಡುತ್ತವೆ. ಅಂತಹ ಚಿತ್ರಗಳ ಪ್ರಾತಿನಿಧಿಕ ರೂಪವಾಗಿ ಕನ್ನಡದ ಶ್ರೇಷ್ಠ ಚಿತ್ರಗಳಲ್ಲಿ ಒಂದಾದ "ಮಹಾಕವಿ ಕಾಳಿದಾಸ" ಚಿತ್ರದ ಜಾನಪದ ಕಥನ ಮಾದರಿಯನ್ನು ಇಲ್ಲಿ ನಿರೂಪಿಸಲಾಗಿದೆ.

**ಕವಿರತ್ನ ಕಾಳಿದಾಸ-ಸಿನಿಮಾ**

ರತ್ನಕಲೆಯ ಮನೆಯಲ್ಲಿರುವ ಸುಂದರವಾದ ಸ್ತ್ರೀಯನ್ನು ನೋಡಲು ಕಾಳಿದಾಸನು ಹೋಗುತ್ತಾನೆ. ಆದರೆ ವಿದ್ಯಾಧರೆ ಹಿಂದೆ ಮದುವೆಯಾದ ನೆನಪು ಮಾಡಿಕೊಂಡು ಸದಾಕಣ್ಣಲಿ ಕವಿತೆಯ ಹಾಡು ಹಾಡುವೆ ಎಂಬ ಹಾಡಿನಲ್ಲಿ ಕಾಳಿದಾಸನ ಪಾತ್ರದಾರಿಯೇ ಕಾಳಿದಾಸನಿಂದ ರಚಿತವಾದ ಅಭಿಜ್ಞಾನ ಶಾಕುಂತಲದ ನೆನಪನ್ನು ಮಾಡಿಕೊಳ್ಳುವನು.

ಮೊದಲನೆಯ ಸನ್ನಿವೇಶ: ಸಾಹಿತ್ಯ ಪಠ್ಯ-ಸಿನಿಮಾಕ್ಕೂ ಇರುವ ವ್ಯತ್ಯಾಸ. ದುಷ್ಯಂತ, ಸಾರಥಿಯೊಂದಿಗೆ ಬೇಟೆ ಆಡಲು ಬಾಣ ಬಿಡಲು ಬರುವನು. ಕಾಡಿನಲ್ಲಿ ಯಾವುದೇ ಹಿಂಬಾಲಕರು ಇಲ್ಲ. ಆದರೆ ಸಿನಿಮಾದಲ್ಲಿ ದುಷ್ಯಂತನ ಕಲ್ಪನೆ ಹಾಗೂ ಸಾರಥಿಯು ಮಾತ್ರ ಇದ್ದಾರೆ. ಆನೆ, ಚಿರತೆ, ಜಿಂಕೆ ಕಾಣಿಸುತ್ತವೆ. ಜಿಂಕೆಯನ್ನು ಕೊಲ್ಲಬೇಕೆಂದಾಗಲೇ ಇಬ್ಬರು ವೈಖಾನಸರು ಬರುವರು.

೧. ಬೇಟೆಯಾಡುವುದರ ಮೂಲಕ ದುಷ್ಯಂತನ ಪ್ರವೇಶವಾಗುವುದು.

೨. ಶಕುಂತಲೆಯು ಮತ್ತು ಸಖಿಯರು ಗಿಡಗಳಿಗೆ ನೀರು ಹಾಕುವುದು. ಗುಂಗಾಡಿ(ದುಂಬಿ) ಹುಳದ ಕಾಟದಿಂದ ದುಷ್ಯಂತನಿಂದ ರಕ್ಷಣೆ ದೊರೆಯುವುದು(ಸಖಿಯರು ಶಕುಂತಲೆಯ ಪರಿಚಯ

ಮಾಡುವರು). ಹೋಗುವಾಗ ಶಕುಂತಲೆಯ ನೋಟದಿಂದ ಪ್ರೀತಿ ತುಂಬಿದ ಮನಸ್ಸಿನ ಭಾವನೆ ವ್ಯಕ್ತವಾಗಿದೆ. ಒಂದು ಕಡೆ ದುಷ್ಯಂತನು(ಶಕುಂತಲೆಯನ್ನು) ಕನಸು ಕಾಣುವುದು, ಇತ್ತ ನದಿಯ ತೀರದಲ್ಲಿ ಶಕುಂತಲೆಯು ಸಖಿಯರೊಂದಿಗೆ, ಹೂವಿನಲ್ಲಿ ಮಲಗಿ ದುಷ್ಯಂತನ ಕಡೆಗೆ ಗಮನ ಹರಿಸಿದ್ದಳು. ಪ್ರೇಮ ತುಂಬಿದ ಮನಸ್ಸಿಗೆ ಇಹಲೋಕದ ಪರಿವೆಯೇ ಇರುವುದಿಲ್ಲ.

ಚಂದ್ರಿಕೆಯ ತಂಪು ಮೈ ಸುಡಲಾರಂಭಿಸಿದೆ.

ತಣ್ಣನೆಯ ಗಾಳಿ ಸುಖ ನೀಡದಾಗಿದೆ.

ಪ್ರೇಮದ ಓಲೆ-ದೇವತ ಪ್ರಸಾದ, ಅದರಲ್ಲಿ ಕನಸು ಕಾಣುವುದು, ಉಗುರಿನಿಂದ ಬರೆಯುವುದು,

ತೋರು ಬೆರಳಿನಲ್ಲಿರುವ ಉಂಗುರ, ಮೀನುಗಾರ ಬಲೆಹಾಕಿ ಮೀನು ಹಿಡಿಯುವುದು. ಮೀನಿನ ಹೊಟ್ಟೆಯಲ್ಲಿ ಉಂಗುರ. ದುಷ್ಯಂತನಿಗೆ ತೋರಿಸುವುದು, ಮಗನ ಶೌರ್ಯ, ಸಿಂಹದ ಹಲ್ಲುಗಳನ್ನು ಏಣಿಸುವುದು, ಸರ್ವದಮನ ಎಂದು ಶಕುಂತಲೆ ಬರುವಳು. ಇಲ್ಲಿ ಯಾವುದೇ ಸಖಿಯರು ಇಲ್ಲ. ದೂರ್ವಾಸ ಮುನಿಗಳ ಶಾಪದಿಂದ ಇಬ್ಬರೂ ಹೊಂದಾಗುವುದು, ಸೂರ್ಯಚಂದ್ರ ಇರುವ ತನಕ ಈ ಕೃತಿ ಅಜರಾಮರ ಎಂದಿದ್ದಾರೆ. ಶಾಕುಂತಲದಂತ ಕರ್ತೃವಿಗೆ ಈ ಸನ್ಮಾನ ಬಹಳ ಕಡಿಮೆ ಎಂದು ಹೊಗಳಿದ್ದಾರೆ.

**ಕೊನೆಟಿಪ್ಪಣಿಗಳು**

೧. ಶಂಕರ ಪಾಟೀಲ್, ಚಿತ್ರಕಲಾ ಚಿಂತನ ಪ್ರಗತಿ ಪ್ರಕಾಶನ, ದಾವಣಗೆರೆ, ೧೯೯೫, ಪುಟ.೧೦

೨. ತಿಪ್ಪೇಸ್ವಾಮಿ ಪಿ.ಆರ್. ಚಿತ್ರಕಲಾ ಪ್ರಪಂಚ, ಲಲಿತಕಲಾ ಅಕಾಡೆಮಿ, ಬೆಂಗಳೂರು, ೧೯೯೩, ಪುಟ.೧೫

೩. ಅದೇ, ಪುಟ.೧೬

೪. ಅದೇ, ಪುಟ.೧೮

೫. ಅದೇ, ಪುಟ.೧೮

೬. ಅದೇ, ಪುಟ.೧೯

೭ ಶಿವರಾಮ ಕಾರಂತ, ಭಾರತೀಯ ಚಿತ್ರಕಲೆ, ಕರ್ನಾಟಕ ಪುಸ್ತಕ ಪ್ರಾಧಿಕಾರ, ಬೆಂಗಳೂರು, ೧೯೮೦, ಪುಟ.೬

೮. ಅದೇ, ಪುಟ.೧೮

೯. ಅದೇ, ಪುಟ.೨೦

೧೦. ತಿಪ್ಪೇಸ್ವಾಮಿ ಪಿ.ಆರ್. ಚಿತ್ರಕಲಾ ಪ್ರಪಂಚ, ಲಲಿತಕಲಾ ಅಕಾಡೆಮಿ, ಬೆಂಗಳೂರು, ಪುಟ.೧೦-೧೪

೧೧. ಸಮಕಾಲೀನ ಕಲೆ, ೧೯೮೨, ಪುಟ.೧೮೯

೧೨. ಮಾರ್ಕಡೇಯಾ ಬಾಗೂರು, ರೇಖೆಗಳು ಕಲಾವಿದನ ಕೌಶಲ್ಯದ ಸೃಜನಾತ್ಮಕ ಭಾವ, ಭಾಷೆ, ೨೦೦೭, ಪುಟ.೩೦

೧೩. ಅದೇ. ಪುಟ.೧೮೯

೧೪. ಅದೇ, ಪುಟ.೧೯೦

೧೫. ಶಾನಭಾಗ ಎಂ.ಆರ್., ಫೋಟೋಗ್ರಪಿ, ಸಮಾಜ ಪುಸ್ತಕಾಲಯ, ಧಾರವಾಡ, ೧೯೮೯, ಪುಟ.೧೬

೧೬. ಸತ್ಯನಾರಾಯಣ ಕೆ.ಎ., ಛಾಯಾಚಿತ್ರಕಲೆ, ಪಾರ್ಕೋ ಪ್ರಕಾಶನ, ಬೆಂಗಳೂರು, ೧೯೯೪, ಪುಟ.೧೭

೧೭. ಸೀತಾರಾಮ ಶಾಸ್ತ್ರಿ ಕು.ರಾ., ಕನ್ನಡ ಚಲನಚಿತ್ರಗಳಲ್ಲಿ ಹಲವು ನಿರೂಪಣ ಮಾದರಿಗಳು, ಮಹಾಕವಿ ಕಾಳಿದಾಸ, ಸಿನಿಮಾ, ೧೯೯೫, ಪುಟ.೨೦

೧೮. ಅದೇ, ಪುಟ.೨೩

೧೯. ಅಂತರ್ಜಾಲದಿಂದ ಶಾಕುಂತಲ ನಾಟಕಕ್ಕೆ ಸಂಬಂಧಿಸಿದ ಚಿತ್ರಗಳನ್ನು ಬಳಸಿಕೊಳ್ಳಲಾಗಿದೆ.

## ಪೇಂಟಿಂಗ್ಸ್ : ಕಲಾವಿದನ ಕುಂಚದಲ್ಲಿ ಮೂಡಿಬಂದ ಚಿತ್ರಗಳು












ಮರದಕೆತ್ತನೆಗಳು : ಶಿಲ್ಪಿಯ ಹುಳಿಯಿಂದ ಮೂಡಿದ ಚಿತ್ರಗಳು.













ರವಿವರ್ಮನ ಕಲಾ ಕುಂಚ :

೧೮೫೫ ರಲ್ಲಿ ಇಂಗ್ಲೆಂಡಿನಲ್ಲಿ ಕಾಳಿದಾಸನ "ಶಾಕುಂತಲ" ಇಂಗ್ಲೀಷ್ ಅನುವಾದ ಮೊದಲ ಬಾರಿಗೆ ಪ್ರಕಟವಾಯಿತು. ಅನುವಾದಕ ಸರ್ ಮೋನಿಯರ್ ವಿಲಿಯಮ್ಸ್ ೧೮೭೬ರಲ್ಲಿ ಮದ್ರಾಸಿನ ಕಲಾಪ್ರದರ್ಶನವೊಂದರಲ್ಲಿ. ರವಿವರ್ಮನ ಕೃತಿ ದುಷ್ಯಂತನಿಗೆ ಪತ್ರ ಬರೆಯುವುದರಲ್ಲಿ ಮಗ್ನಳಾಗಿರುವ ಶಾಕುಂತಲೆ ಪ್ರದರ್ಶಿತವಾಯಿತು ಗೌವರ್ನರ್ ಲಾರ್ಡ ಬಕಿಂಮ್ ಹ್ಯಾಮ್ ಈ ಕೃತಿಯನ್ನು ಕೊಂಡನು. ಇಂಗ್ಲೆಡಿನಲ್ಲಿ ಈ ಕೃತಿಯನ್ನು ಕಂಡ ಸಾಹಿತಿ ಮೋನಿಯರ್ ವಿಲಿಯಮ್ಸ್ ಭಾವಪರವಶನಾದನು. ತನ್ನ೧೮೭೬ರಲ್ಲಿ ತನ್ನ ಶ್ರೇಷ್ಠ ಚಿತ್ರಗಳ ಮಾಲಿಕೆಗಳಲ್ಲಿ ಒಂದಾದ "ಶಕುಂತಲಾ" ಪುಸ್ತಕದ ಮುದಿನ ಆವೃತ್ತಿಗಳಿಗೆ ರವಿವರ್ಮನ ಈ ಚಿತ್ರವನ್ನು ಮುಖ ಪುಟಕ್ಕಾಗಿ ಬಳಸಲು ಆಶಿಸಿ ರವಿವರ್ಮನ ಒಪ್ಪಿಗೆ ಪಡೆದನು. ಮೊಟ್ಟ ಮೋದಲ ಬಾರಿಗೆ ಭಾರತೀಯ ಕಲಾವಿದನೊಬ್ಬ ಸಾಹಿತ್ಯರಂಗದ ಪ್ರೇರಣೆಯನ್ನು ಪಡೆದು ಚಿತ್ರಿಸಿದ್ದು ಕುತೂಹಲಕಾರಿ ಅದನ್ನು ಅದೇ ವಸ್ತುವಿನ ಸಾಹಿತ್ಯ ಕೃತಿಯ ಮುಖಪುಟಕ್ಕಾಗಿ ದುಡಿಸಿಕೊಂಡಿದ್ದು ಭಾರತೀಯ ಸಂದರ್ಭದಲ್ಲಿ ಐತಿಹಾಸಿಕ ಎನಿಸುತ್ತದೆ. ಹಲವಾರು ಚಿತ್ರಗಳನ್ನು ರಚಿಸಿದ್ಧಾನೆ. ಅವುಗಳಲ್ಲಿ ವಿರಹ ವೇದನೆಯನ್ನು ಅನುಭವಿಸುತ್ತಿರುವುದು. ಮತ್ತು ಆಕೆಯ ಮೆಚ್ಚಿನ ಸಖಿಯಾರಾದ ಅನುಸೂಯ ಮತ್ತು ಪ್ರಿಯಂವದೆಯರ ಜೋತೆಗೆ ತಾವರೆಯ ಎಲೆಯ ಮೇಲೆ ಬೆರಳ ತುದಿಯಿಂದ (ಉಗುರಿನಿಂದ) ಅವಳ ಪ್ರಿಯಕರನಿಗೆ ಪತ್ರ ಬರೆಯಿತ್ತಿರುವುದು. ಈ ಚಿತ್ರವನ್ನು ಮೋನಿಯರ್ ವಿಲಿಯಮ್ಸನ್ " ಅಭಿಜ್ಞಾನ ಶಾಕುಂತಲ ನಾಟಕ"ದ ಭಾಷಂತರದ ಪುಸ್ತಕಕ್ಕೆ ಮುಖ ಚಿತ್ರಕ್ಕೆ ಆಯ್ಕೆಗೊಂಡಿತು.










# ಫೋಟೋಗ್ರಫೀ ಮತ್ತು ಸಿನಿಮಾದ ಚಿತ್ರಗಳು



# ಪುಸ್ತಕಗಳ ಮುಖಪುಟದ ಚಿತ್ರಗಳ








































अभिज्ञान शाकुन्तल
Love Stories From India
Shakuntala ♥ Dushyanta
मेघदूतम्
शकुन्तला
THE SAKUNTALA
IN HINDI
CROSBY LOCKWOOD


THE RECOGNITION OF SHAKUNTALA
BY KALIDASA
Edited & translated by
SOMADEVA VASUDEVA
Translations of Shakuntala and Other Works
KALIDASA
of
The Ring of Remembrance
Translations of Shakuntala and Other Works
Mrs. Beeton


Abhijñāna-Śakuntalam
of Kālidāsa
C.R. Devadhar
N.G. Suru
SHAKUNTALA RECOGNIZED
A Sanskrit Play By Kalidasa
G. N. Reddy
PENGUIN CLASSICS
KĀLIDĀSA
THE LOOM OF TIME
A SELECTION OF HIS PLAYS AND POEMS
ABHIJÑĀNA-ŚĀKUNTALAM OF KĀLIDĀSA
C.R. Devadhar
N.G. Suru


The Recognition of Sakuntala
KALIDASA
Shakuntala
SHAKUNTALA
REVISITING
ABHIJÑĀNAŚĀKUNTALAM
EDITED BY
WITH A FOREWORD BY

# ಎಲ್ಲಾ ರೀತಿಯ ಚಿತ್ರಗಳು




















ಅಧ್ಯಾಯ ಆರು

# ಸಮಾರೋಪ

'ಕಾಳಿದಾಸನ ಶಾಕುಂತಲ ಕನ್ನಡ ಅನುವಾದಗಳ ಅಧ್ಯಯನ' ಎಂಬ ವಿಷಯವನ್ನು ಕನ್ನಡ ಸಾಹಿತ್ಯಲೋಕದಲ್ಲಿ ಅನೇಕ ಕವಿಗಳು ಅಭಿಜ್ಞಾನ ಶಾಕುಂತಲ ನಾಟಕದ ಕಥಾವಸ್ತುವನ್ನು ಕೇಂದ್ರವಾಗಿಸಿಕೊಂಡು ಅನುವಾದ ಮಾಡಿರುವುದನ್ನು ಇಲ್ಲಿ ವಿಶ್ಲೇಷಣೆಗೆ ತೊಡಗಿಸಿಕೊಳ್ಳಲಾಗಿದೆ. ಪ್ರಸ್ತುತ ಕಾಲದಲ್ಲಿಯೂ ಸಹ ಅಭಿಜ್ಞಾನ ಶಾಕುಂತಲದ ಅನುವಾದ ಕಾರ್ಯ ಕನ್ನಡ ಸಾಹಿತ್ಯ ಪರಿಸರದಲ್ಲಿ ನಡೆಯುತ್ತಿದೆ. ಈ ನಾಟಕದ ಪ್ರಭಾವದಿಂದ ಕನ್ನಡದ ಕವಿಗಳು ತಮ್ಮ ಕೃತಿಯಲ್ಲಿ ಇದನ್ನು ಬಳಸಿಕೊಂಡು ನಾಟಕಗಳನ್ನು, ಕವಿತೆಗಳನ್ನೂ, ಕಾದಂಬರಿಗಳನ್ನೂ, ಚಿತ್ರಕಲೆಯಲ್ಲಿಯೂ ಸಹ ಇದರ ಕಾರ್ಯ ಮುಂದುವರಿದಿದೆ. ಕಾಳಿದಾಸನ ಅಭಿಜ್ಞಾನ ಶಾಕುಂತಲವು ಮಹಾಭಾರತದಿಂದ ಪಡೆದ ಕಥಾವಸ್ತುವಾಗಿದೆ. ಆದರೆ ಅದು ಅಷ್ಟೊಂದು ಪರಿಣಾಮ ಬೀರದೆ ಕವಿ ಕಾಳಿದಾಸ 'ಅಭಿಜ್ಞಾನ ಶಾಕುಂತಲ' ನಾಟಕವನ್ನು ಕನ್ನಡದಲ್ಲಿ ಭಾಷಾಂತರಿಸಿದ ಕಾರಣಕ್ಕಾಗಿ ಇದರ ವ್ಯಾಪ್ತಿ ತುಂಬಾ ವಿಶಾಲವಾಗಿ ಬೆಳೆದಿದೆ. ಆದರೆ ಸಂಸ್ಕೃತದಿಂದ ಕನ್ನಡ ಸಾಹಿತ್ಯ ಪರಂಪರೆಯಲ್ಲಿ ಕಾಲದಿಂದ ಕಾಲಕ್ಕೆ ಅನುವಾದಗೊಂಡಿರುವುದನ್ನು ಪ್ರಮುಖವಾಗಿ ಪ್ರಸ್ತುತ ಅಧ್ಯಯನದಲ್ಲಿ ಕಂಡುಕೊಳ್ಳಲಾಗಿದೆ. ಕನ್ನಡ ಸಾಹಿತ್ಯ ಸಂದರ್ಭ ಮತ್ತು ಸಂಸ್ಕೃತ ಸಾಹಿತ್ಯದ ಕೊಡುಗೆಯನ್ನು ವಿಶ್ಲೇಷಣೆ ಮಾಡಲಾಗಿದೆ. ಕನ್ನಡದ ಮಟ್ಟಿಗೆ ಇನ್ನೊಂದು ಪದವಾದ ಕನ್ನಡೀಕರಣ ಪ್ರಕ್ರಿಯೆಯ ನೆಲೆಯಲ್ಲಿ ಚರ್ಚಿಸಲಾಗಿದೆ. ಕವಿರಾಜಮಾರ್ಗದಿಂದಲೇ ಇದು ಆರಂಭಗೊಳ್ಳುತ್ತದೆ. ಆಧುನಿಕ ಕಾಲದಲ್ಲಿ ಭಾಷಾಂತರವು ಎಲ್ಲಾ ಜ್ಞಾನಶಾಖೆಗಳಲ್ಲೂ ನಡೆಯುವ ಕ್ರಿಯೆ. ಅದು ಜ್ಞಾನ ಮತ್ತು ಭಾಷೆಗಳ ನಡುವೆ, ಸಂಜ್ಞೆಗಳ ನಡುವಿನ ಸಂಬಂಧದ ಕ್ರಿಯೆಯಾಗಿದೆ. ಹೀಗೆ ಕಾಳಿದಾಸನ ಅಭಿಜ್ಞಾನ ಶಾಕುಂತಲ ನಾಟಕವು ನಿರಂತರವಾಗಿ ಅನುವಾದವಾಗುತ್ತಲೇ ಇದೆ. ಇದು ನಾಟಕದಿಂದ ಸಣ್ಣಕತೆಯಾಗಿ, ಕಾದಂಬರಿಯಾಗಿ, ಕವಿತೆಗಳಾಗಿ, ರಂಗಗೀತೆಗಳಾಗಿ ರೂಪಾಂತರಗೊಂಡಿವೆ.

ಈ ಕೃತಿಯು ಸಿನಿಮಾ, ಚಿತ್ರಕಲೆ, ಸಂಗೀತ, ಕಥೆ, ಕಾದಂಬರಿ, ಸೃಜನಾತ್ಮಕವಾದ ಬರವಣಿಗೆಗೆ ಪ್ರೇರಣೆ ನೀಡಿದೆ. ಈ ಭಾಷಾಂತರ ಕೃತಿಯ ಕಾರ್ಯದಲ್ಲಿ ಮುಖ್ಯವಾಗಿ ಪ್ರಾರಂಭದಿಂದ ಹಿಡಿದು ಇಂದು ನಡೆಯುವ ಭಾಷಾಂತರ ಪ್ರಕ್ರಿಯೆಗೆ ಸಂಬಂಧಿಸಿದಂತೆ ಅನೇಕ ಮಾದರಿಯ ಹೊಸ ಅಂಶಗಳು ಸೇರಿವೆ. ಆ ಅಂಶಗಳನ್ನು ಬಳಸಿಕೊಂಡು ಭಾಷಾಂತರ ಕಾರ್ಯ ಇಂದಿಗೂ

ನಡೆಯುತ್ತಲೇ ಇದೆ. ಕನ್ನಡ ಸಾಹಿತ್ಯದಲ್ಲಿ ಕಾಳಿದಾಸನ ಅಭಿಜ್ಞಾನ ಶಾಕುಂತಲ ನಾಟಕವು ಹೇಗೆ ಬೆಳೆದುಬಂದಿದೆ ಎಂಬುವುದನ್ನು ಗುರುತಿಸಲಾಗಿದೆ. ಕನ್ನಡ ಸಾಹಿತ್ಯದಲ್ಲಿ ಅಭಿಜ್ಞಾನ ಶಾಕುಂತಲ ನಾಟಕದ ಅನುವಾದಗಳನ್ನು ಕುರಿತು ಬಂದಿರುವ ನಾಟಕಗಳೆಂದರೆ ಮೊದಲಿಗೆ ಚುರಮುರಿ ಶೇಷಗಿರಿ ರಾಯರ ಅಭಿಜ್ಞಾನ ಶಾಕುಂತಲ ನಾಟಕ. ೧೮೭೮ರಲ್ಲಿ ಕನ್ನಡಲೋಕಕ್ಕೆ ಪಾದಾರ್ಪಣೆ ಮಾಡಿತು. ನಂತರ ಅಭಿನವ ಕಾಳಿದಾಸ ಬಸವಪ್ಪಶಾಸ್ತ್ರಿಗಳು 'ಕರ್ಣಾಟಕ ಶಾಕುಂತಲ ನಾಟಕಂ'ವನ್ನು ೧೮೮೩ರಲ್ಲಿ ಕನ್ನಡಕ್ಕೆ ಭಾಷಾಂತರಿಸಿದರು. ತದನಂತರದಲ್ಲಿ ಬೇಟೆರಾಯ ದೀಕ್ಷಿತ ಅವರು ಅಭಿಜ್ಞಾನ ಶಾಕುಂತಲ ನಾಟಕವನ್ನು ಭಾಷಾಂತರಿಸಿದರು. ನಂತರದಲ್ಲಿ ಬಿ.ಕೃಷ್ಣಪ್ಪನವರು 'ಅಭಿಜ್ಞಾನ ಶಾಕುಂತಲ ನಾಟಕ' ಮತ್ತು ೧೯೨೨ರಲ್ಲಿ ಗದ್ಯಾನುವಾದ ಮಾಡಿದರು. ಕೆ.ಟಿ.ಪಾಂಡುರಂಗಿಯವರು 'ಅಭಿಜ್ಞಾನ ಶಾಕುಂತಲಮ್' ಎಂಬ ನಾಟಕವನ್ನು ಕನ್ನಡದಲ್ಲಿ ಭಾಷಾಂತರಿಸಿದರು. ಬೆಳ್ಳಾವೆ ನರಹರಿ ಶಾಸ್ತ್ರಿಗಳು, 'ಕರ್ನಾಟಕ ಶಾಕುಂತಲ ನಾಟಕಂ' ಎಂದು ಅನುವಾದಿಸಿದರು. ನಂತರ ಡಾ.ಪ್ರಹ್ಲಾದ ಮುದ್ಗಲ್ 'ಶಾಕುಂತಲ ನಾಟಕ', ಎಸ್.ವಿ.ಪರಮೇಶ್ವರ ಭಟ್ಟರುರ 'ಅಭಿಜ್ಞಾನ ಶಾಕುಂತಲ ನಾಟಕಂ' ಎಂದು ಭಾಷಾಂತರಿಸಿದರು. ಸಿ.ಪಿ.ಕೆ.ಯವರು ಅಭಿಜ್ಞಾನ ಶಾಕುಂತಲ ನಾಟಕಂ ಎಂದು ಅನುವಾದಿಸಿದ್ದಾರೆ. ಮಲ್ಲಿಕಾರ್ಜುನ ಶಿವಲಿಂಗಪ್ಪ ರೈನಾಪೂರ–ಅಭಿಜ್ಞಾನ ಶಾಕುಂತಲ(೧೯೩೩), ರಂಜಾಳ್ ರಾಮದೇವ ಶೇಣೈ–ಅಭಿಜ್ಞಾನ ಶಾಕುಂತಲ(೧೯೭೧), ಚೆ.ಎ. ಕವಲಿ – ಅಭಿಜ್ಞಾನ ಶಾಕುಂತಲ ನಾಟಕಂ(ಗದ್ಯಾನುವಾದ)(೧೯೬೯), ಗಣಪತಿ ಮೊಳೆಯಾರ–ಅಭಿಜ್ಞಾನ ಶಾಕುಂತಳ(೧೯೭೩), ಕೆ.ಕೃಷ್ಣಮೂರ್ತಿ–ಕನ್ನಡ ಶಾಕುಂತಳ(೧೯೬೯), ಸೂಲಿಬೆಲೆ ಡಿ. ಶ್ಯಾಮರಾವ್–ಕರ್ಣಾಟಕ ಶಾಕುಂತಲ ನಾಟಕಂ(೧೯೦೦), ಜೆ.ವಾಮನ ಭಟ್ಟ–ಶಕುಂತಳೆ(ಗದ್ಯಾನುವಾದ)(೧೯೩೫), ಮಹಾಬಲ ಸೀತಾಳಭಾವಿ–ಅಭಿಜ್ಞಾನ ಶಾಕುಂತಲ ನಾಟಕ, ಹೀಗೆ ಅನೇಕ ಭಾಷಾಂತರ ಕೃತಿಗಳು ಕನ್ನಡ ಸಾಹಿತ್ಯ ಪರಿಸರದಲ್ಲಿ ಭಾಷಾಂತರವಾಗಿರುವುದನ್ನು ಗಮನಿಸಬಹುದು.

ಕನ್ನಡ ಸಾಹಿತ್ಯದಲ್ಲಿ ಕಾಳಿದಾಸನ ಅಭಿಜ್ಞಾನ ಶಾಕುಂತಲ ಹೇಗೆ ಪ್ರಭಾವ ಬೀರಿದೆ ಹಾಗೂ ಕನ್ನಡದ ಕವಿಗಳು ಹೇಗೆ ತಮ್ಮ ಕೃತಿಗಳಲ್ಲಿ ಶಾಕುಂತಲದ ಕಥಾವಸ್ತುವನ್ನು ಬಳಸಿಕೊಂಡಿದ್ದಾರೆ ಎಂಬುದನ್ನು ಮುಖ್ಯವಾಗಿ ಗುರುತಿಸಲಾಗಿದೆ.

**ಸಣ್ಣಕಥೆಗಳು:** ಮಹಾಭಾರತದಲ್ಲಿ ಬರುವ ಪುರಾಣಗಳಲ್ಲಿ ಶಾಕುಂತಲ ಕಥೆ, ಕತಾರಿ, ಜಾತಕ ಕಥೆ, ಜೈನ ಸಂಪ್ರದಾಯ ಕಥೆ, ಕಾಳಿದಾಸನ ಕಥಾನಕಗಳು ಇನಾಂದರ್.ವಿ.ಎಂ., ಕಾಳಿದಾಸನ ಕಥೆಗಳು, ರೇವಣಸಿದ್ದಪ್ಪ ಶೆಟ್ಟರ ಗುಬ್ಬಿ(೧೯೫೪), ಶತಾವಾದಾನಿ ಗಣೇಶ್–ಶಕುಂತಲೆಯ ಪ್ರೇಮಪತ್ರ.

ಕಾಳಿದಾಸನ ಅಭಿಜ್ಞಾನ ಶಾಕುಂತಲ ನಾಟಕದ ಕಥಾವಸ್ತುವನ್ನು ಬಳಸಿಕೊಂಡು ವೀಣಾ ಶಾಂತೇಶ್ವರ ಅವರು ಸ್ತ್ರೀಯರ ದೃಷ್ಟಿಕೋನ ಬಳಸಿಕೊಂಡು ಸಣ್ಣಕಥೆಯನ್ನು ಬರೆದಿದ್ದಾರೆ. ವಾಸ್ತ್ರಿಯವರ 'ಗೌತಮಿ ಹೇಳಿದ ಕತೆ' ಗೌತಮಿಯ ಜೀವನದ ಕಡೆಗೆ ವಾಲಿದ ಕತೆಯಾಗಿದೆ.

ಮಾಸ್ತಿಯವರ 'ಆಂಗ್ಲ ಅರ್ವಾಚಿನ ಶಕುಂತಲೆ', 'ಹೇಮಕೂಟದಿಂದ ಬಂದ ಮೇಲೆ' ಈ ಕಥೆಗಳು ಭಿನ್ನವಾದ ಕಥಾವಸ್ತುವನ್ನು ಒಳಗೊಂಡಿವೆ.

**ಕಾದಂಬರಿ:** ಸಿ. ನಟರಾಜ ಅವರು ಕಾಳಿದಾಸನ ಪ್ರಸಿದ್ಧವಾದ ಅಭಿಜ್ಞಾನ ಶಾಕುಂತಲಂ ನಾಟಕದ ಸೃಜನಾತ್ಮಕತೆಯನ್ನು ಕಾದಂಬರಿ ರೂಪದಲ್ಲಿ ಕನ್ನಡದಲ್ಲಿ ಭಾಷಾಂತರವಾದ ಕಾದಂಬರಿಯೇ **'ಶಾಕುಂತಲ'**ವಾಗಿದೆ. ಮೊದಲಿಗೆ-ಕೈಮುಗಿವಳು ಶಾಕುಂತಲ ಕಾದಂಬರೀ ಕಾವ್ಯ ಕನ್ನಿಕೆ ಕೊಂಡು ಓದುವ ಕನ್ನಡಿಗನಿಗೆ ಎಂಬ ಉಕ್ತಿ ಕಂಡುಬರುತ್ತದೆ. ಈ ಕಾದಂಬರಿಯಲ್ಲಿ ಏಳು ಭಾಗಗಳು ಕಂಡುಬರುತ್ತದೆ. ಕನ್ನಡ ಸಾಹಿತ್ಯದಲ್ಲಿ ಕಾಳಿದಾಸನ ಅಭಿಜ್ಞಾನ ಶಾಕುಂತಲ ನಾಟಕದಿಂದ ಪ್ರಭಾವ ಹೊಂದಿರುವ ನಾಟಕಗಳು

**ನಾಟಕಗಳು:** 'ಶಾಕುಂತಲಾವಲೋಕನ' ರೇಣುಕ ಪ್ರಸನ್ನರ ಕೃತಿಯಾಗಿದೆ. 'ಲೋಕಶಾಕುಂತಲ' ಕೆ.ವಿ. ಸುಬ್ಬಣ್ಣ 'ಹಳೆಯ ನೀನು ಗೆಳೆಯಾ ನಾನು' ಶ್ರೀರಂಗ, 'ಅಭಿನವ ಶಕುಂತಲಾ' ಕಡೆಂಗೋಡ್ಲು ಶಂಕರಭಟ್ಟ, 'ಅನಭಿಜ್ಞಾನ ಶಾಕುಂತಲ' ಕೆ.ವೈ.ನಾರಾಯಣ ಸ್ವಾಮಿ. ಕಾಳಿದಾಸನ ಅಭಿಜ್ಞಾನ ಶಾಕುಂತಲ ಪಾತ್ರಗಳನ್ನು ತಮ್ಮ ಕೃತಿಗಳಲ್ಲಿ ಬಳಸಿಕೊಂಡು ಭಿನ್ನವಾಗಿ ನೋಡುವ ಸೂಕ್ಷ್ಮತೆಯನ್ನು ಓದುಗರಿಗೆ ತಮ್ಮ ನಾಟಕಗಳ ಮೂಲಕ ತಿಳಿಯಪಡಿಸಿದ್ದಾರೆ.

**ಕಾವ್ಯಗಳು:** ಏಳು ಅಂಕಣದ ನಾಟಕವನ್ನು ಲೇಖಕರು ಕವಿತೆಯಲ್ಲಿ ಹಿಡಿದಿಡುವ ಪ್ರಯತ್ನ ಮಾಡಿದ್ದಾರೆ. ಅಂತಹ ಕವಿತೆಗಳನ್ನು ಈ ಕೆಳಗಿನಂತೆ ವಿವರಿಸಲಾಗಿದೆ.

ಅಂತರ್‌ಸಂಜ್ಞಾ ಭಾಷಾಂತರದಲ್ಲಿ ಬರುವ ಅನ್ಯಜ್ಞಾನ ಶಿಸ್ತುಗಳನ್ನು ಈ ಅಧ್ಯಯನದಲ್ಲಿ ಪ್ರಮುಖವಾಗಿ ಗಮನಿಸಲಾಗಿದೆ. ಚಿತ್ರಕಲೆ, ಸಿನಿಮಾ, ಹೀಗೆ ಭಿನ್ನ ದೃಷ್ಟಿಕೋನದಲ್ಲಿ ಕಾಳಿದಾಸನ ಶಾಕುಂತಲ ನಾಟಕವನ್ನು ಹೇಗೆ ಬಳಸಿಕೊಂಡು ಬರೆದಿದ್ದಾರೆ ಎಂಬುವುದನ್ನು ಇಲ್ಲಿ ನೋಡಬಹುದು. ಸಿನಿಮಾದಲ್ಲಿ ಕಥಾವಸ್ತು ಹೇಗೆ ಬದಲಾಗಿದೆ ಹಾಗೂ ಪ್ರೇಕ್ಷಕರಿಗೆ ಹೇಗೆ ಅರ್ಥವಾಗುತ್ತದೆ. ಎಂಬುದನ್ನು ನಿರ್ದೇಶಕರು ಮಾಡುವ ಒಂದು ಸಂಘಟಿತ ಪ್ರಯತ್ನವಾಗಿದೆ.

**ಚಿತ್ರಕಲೆ:** ಒಬ್ಬ ಕಲಾವಿದನ ಅಭಿವ್ಯಕ್ತಿ ಕಾಳಿದಾಸನ ಅಭಿಜ್ಞಾನ ಶಾಕುಂತಲ ನಾಟಕದ ಕಥಾವಸ್ತುವಿನಲ್ಲಿ ಬರುವ ಪಾತ್ರಗಳ ಮೂಲಕ ಹೇಗೆ ನೋಡುಗರಿಗೆ ಅರ್ಥವಾಗುವಂತೆ ಚಿತ್ರಿಸಿದ್ದಾನೆ ಎಂಬುದನ್ನು ಈ ಜ್ಞಾನಶಾಖೆಯ ಮೂಲಕ ಗುರುತಿಸಲಾಗಿದೆ. ರೇಖಾಚಿತ್ರದಲ್ಲಿ ಹೇಗೆ ವ್ಯಕ್ತವಾಗಿದೆ, ಫೋಟೋಗ್ರಫಿಯಲ್ಲಿ, ಪೇಂಟಿಂಗ್‌ನಲ್ಲಿ ಹೇಗೆ ಚಿತ್ರಗಳನ್ನು ಸೆರೆ ಹಿಡಿದಿದ್ದಾರೆ ಎಂಬುದನ್ನು ಈ ಅಧ್ಯಯನದಲ್ಲಿ ಗುರುತಿಸಲಾಗಿದೆ. ಒಟ್ಟಾರೆಯಾಗಿ ಹೇಳುವುದಾದರೆ ಕಾಲದಿಂದ ಕಾಲಕ್ಕೆ ಒಂದು ನಾಟಕ ಕೃತಿಯು ಹೇಗೆಲ್ಲ ಬದಲಾವಣೆ ಹೊಂದಿಕೊಂಡು ಓದುಗರ, ಜನಸಾಮಾನ್ಯರ ಮನದಲ್ಲಿ ಉಳಿಯುವಂತಹ ಕಾರ್ಯ ಮಾಡುವುದು ಹೇಗೆ ಎಂಬುದನ್ನು ಈ ಭಾಷಾಂತರ ಕೃತಿಗಳಿಂದಲೇ ಗ್ರಹಿಸಬಹುದಾಗಿದೆ.

ಒಂದೇ ಕಥಾವಸ್ತುವನ್ನು ಯಾವ ಯಾವ ಜ್ಞಾನಶಿಸ್ತಿನ ಮೂಲಕ ಅದರ ಪ್ರಚಾರ ಸಾಧ್ಯವೆಂಬುದನ್ನು ಸಹ ಇಲ್ಲಿ ನೋಡಬಹುದು. ಕವಿಯು ರಚಿಸಿದ ಜೀವಂತಿಕೆಯ ಕೃತಿಯು ಹೇಗೆಲ್ಲ ಮರುರೂಪ ಪಡೆದುಕೊಂಡಿದೆ ಎಂಬುದನ್ನು ಗಮನಿಸಲಾಗಿದೆ. ಇದಕ್ಕೆ ಸಾಕ್ಷಿ ಈ ಅಧ್ಯಯನವಾಗಿದೆ. ಉದಾಹರಣೆಗೆ ೨೦೧೩ರಲ್ಲಿ ಮಹಾಬಲ ಸಿತಾಳಭಾವಿಯವರ 'ಅಭಿಜ್ಞಾನ ಶಾಕುಂತಲ' ಅನುವಾದವೇ ಸಾಕ್ಷಿಯಾಗಿದೆ ಎಂದು ಗಮನಿಸಬಹುದು.

**ಸಂಶೋಧನೆಯ ಫಲಿತಗಳು**

ವಿಶ್ವಪ್ರಸಿದ್ಧಿ ಪಡೆದ ಕಾಳಿದಾಸನ ಶಾಕುಂತಲ ನಾಟಕದ ದಾರ್ಶನಿಕತೆಯನ್ನು ಗುರುತಿಸುವುದು. ಕನ್ನಡ ಕವಿಗಳ ಮೇಲೆ ಬೀರಿದ ಪ್ರಭಾವಗಳನ್ನು ಶೋಧಿಸುವುದು. ಅಂತರ್‌ಸಂಜ್ಞಾ ಭಾಷಾಂತರದಲ್ಲಿ ರಂಗಭೂಮಿ, ಶಿಲ್ಪಕಲೆ, ಚಿತ್ರಕಲೆಯ ಮೇಲೆ ಕಾಳಿದಾಸನ ಶಾಕುಂತಲ ನಾಟಕದ ಪ್ರಭಾವ ಅಥವಾ ಕೊಡುಗೆ ಯಾವ ಬಗೆಯದು ಎಂಬುದನ್ನು ಕಂಡುಕೊಳ್ಳಲಾಗುತ್ತದೆ. ಮುಖ್ಯವಾಗಿ ಕನ್ನಡ ಸಾಂಸ್ಕೃತಿಕ ಪರಿಸರಕ್ಕೆ ಕಾಳಿದಾಸನ ಅಭಿಜ್ಞಾನ ಶಾಕುಂತಲ ನಾಟಕದಿಂದ ಒದಗಿಬಂದ ಪ್ರಭಾವ ಪ್ರೇರಣೆಗಳನ್ನು ಕಂಡುಕೊಳ್ಳುವುದು.

ಅಭಿಜ್ಞಾನ ಶಾಕುಂತಲ ವಸ್ತು, ನಾಯಕ ಮತ್ತು ರಸ ಈ ಮೂರು ದೃಷ್ಟಿಯಿಂದಲೂ ಅಪೂರ್ವವಾದ ನಾಟಕವಾಗಿದೆ. ಸಂದರ್ಶನ, ಸಮಾಗಮ, ವಿರಹ, ಪರಿತ್ಯಾಗ, ಪಶ್ಚಾತ್ತಾಪ, ಪುನರ್ಮಿಲನಗಳ ಘಟ್ಟಗಳಲ್ಲಿ ಬೆಳೆದ ಕಥಾವಸ್ತು ಅಪೂರ್ವವಾದ ರಚನಾಕೌಶಲ್ಯದಿಂದ ಕೂಡಿದೆ. ಬುದ್ಧಿಪೂರ್ವಕವಾಗಿ ತ್ಯಜಿಸಲು ಪ್ರಯತ್ನಿಸಿದ ಮಹಾಭಾರತದ ದುಷ್ಯಂತ ಇಲ್ಲಿ ಧೀರೋದಾತ್ತ ಸ್ವಭಾವದ ಆದರೆ ಶಾಪದಿಂದ ಪ್ರಮಾದವನ್ನು ಮಾಡುವ ನಿರಪರಾಧಿಯಾಗಿದ್ದಾನೆ. ಶಾಕುಂತಲೆ ಮಧುರ ಮುಗ್ಧ ಆದರೆ ದೈವವಂಚಿತ ನಾಯಕಿಯಾಗಿದ್ದಾಳೆ.

ಸಂಭೋಗ-ವಿಪ್ರಲಂಭ ಶೃಂಗಾರಗಳ ಸುಂದರ ಚಿತ್ರಣವಿದೆ. ದಾಂಪತ್ಯ ಜೀವನದ ತಪ್ಪು ತಿಳುವಳಿಕೆಯ ಚಿರಂತನ ಸಮಸ್ಯೆಯ ಮಾರ್ಮಿಕ ಆವಿಷ್ಕಾರವಿದೆ. ಹೀಗೆ ಶಾಕುಂತಲ ಸ್ವರ್ಗ ಮರ್ತ್ಯಗಳ ಅಂದರೆ ಸುಖ-ದುಃಖಗಳ ಅಪೂರ್ವ ಚಿತ್ರಣವಾಗಿದೆ. ಮಹಾನದಿಯು ಸಮುದ್ರವನ್ನೇ ಸೇರುವಂತೆ ಶಕುಂತಲೆಯು ತನ್ನ ರೂಪ ಲಾವಣ್ಯಗಳಿಗೆ ಅನುರೂಪನಾದವನಲ್ಲಿಯೇ ಅನುರಾಗವನ್ನು ಪಡೆದಿದ್ದಾಳೆ ಎಂದು ಗಮನಿಸಬಹುದು.

'ಕಾಳಿದಾಸನ ಶಾಕುಂತಲ ಕನ್ನಡ ಅನುವಾದಗಳ ಅಧ್ಯಯನ' ಇದು ಪ್ರಸ್ತುತ ಅಧ್ಯಯನದ ಶೀರ್ಷಿಕೆಯಾಗಿದೆ. ಕನ್ನಡದಲ್ಲಿ ಭಾಷಾಂತರಗೊಂಡಿರುವ ನಾಟಕಗಳನ್ನು, ಸಣ್ಣಕಥೆಗಳನ್ನು, ಕಾವ್ಯಗಳನ್ನು, ಚಿತ್ರಕಲೆಯನ್ನು, ಸಿನಿಮಾವನ್ನು ಗ್ರಹಿಸಿಕೊಂಡು ಬರೆದಿರುವ ಈ ಪ್ರಸ್ತುತ ಅಧ್ಯಯನವು ಭಿನ್ನವಾಗಿದೆ. ಈ ಅಧ್ಯಯನದಿಂದ ಕಂಡುಕೊಂಡ ಮುಖ್ಯವಾದ ಫಲಿತಗಳನ್ನು ಈ ಕೆಳಗಿನಂತೆ ಗುರುತಿಸಲಾಗಿದೆ.

* ಅಭಿಜ್ಞಾನ ಶಾಕುಂತಲ ನಾಟಕವು ಕನ್ನಡ ಸಾಹಿತ್ಯ ಪರಿಸರದಲ್ಲಿ ಪ್ರಸ್ತುತದಲ್ಲಿ ಭಾಷಾಂತರ ಕಾರ್ಯ ನಡೆಯುತ್ತದೆ ಎಂಬುದನ್ನು ಈ ಅಧ್ಯಯನದಿಂದ ಕಂಡುಕೊಳ್ಳಲಾಗಿದೆ.

* ಕಾಳಿದಾಸನ ಅಭಿಜ್ಞಾನ ಶಾಕುಂತಲ ನಾಟಕವು ಕನ್ನಡ ಕವಿಗಳ ಮೇಲೆ ಹೇಗೆ ಪ್ರಭಾವ ಬೀರಿದೆ ಎಂಬುದನ್ನು ಈ ಅಧ್ಯಯನದಿಂದ ಕಂಡುಕೊಳ್ಳಲಾಗಿದೆ.

* ಅಭಿಜ್ಞಾನ ಶಾಕುಂತಲ ನಾಟಕವು ಅಂತರ್‌ಸಂಜ್ಞಾ ಭಾಷಾಂತರಕ್ಕೆ ಹೇಗೆಲ್ಲ ಒಳಪಟ್ಟಿದೆ ಎಂಬುದನ್ನು ಈ ಬರವಣಿಗೆಯಿಂದ ತಿಳಿಯಬಹುದು.

* ಕಾಳಿದಾಸನಿಗೆ ಅಭಿಜ್ಞಾನ ಶಾಕುಂತಲ ನಾಟಕಕ್ಕೆ ಮೂಲ ಪ್ರೇರಣೆಯನ್ನು ಪ್ರಸ್ತುತ ಅಧ್ಯಯನವು ತಿಳಿಯಪಡಿಸುತ್ತದೆ.

* ಸಂದರ್ಶನ, ಸಮಾಗಮ, ವಿರಹ, ಪರಿತ್ಯಾಗ, ಪಶ್ಚಾತ್ತಾಪ, ಪುನರ್‌ಮಿಲನಗಳ ಘಟ್ಟಗಳಲ್ಲಿ ಬೆಳೆದ ಕಥಾವಸ್ತುವನ್ನು ಅಪೂರ್ವವಾದ ರಚನಾಕೌಶಲ್ಯದಿಂದ ರೂಪಿಸಲಾಗಿದೆ ಎಂಬುದನ್ನು ಪ್ರಸ್ತುತ ಅಧ್ಯಯನದಿಂದ ತಿಳಿಯಬಹುದು.

* ಅಭಿಜ್ಞಾನ ಶಾಕುಂತಲ ನಾಟಕದ ಕಥಾವಸ್ತು, ನಾಯಕ ಮತ್ತು ರಸ ಈ ಮೂರು ದೃಷ್ಟಿಯಿಂದಲೂ ಅಪೂರ್ವವಾದ ನಾಟಕವಾಗಿದೆ ಎಂದು ಈ ಅಧ್ಯಯನದಿಂದ ಗ್ರಹಿಸಬಹುದು.

* ಅಭಿಜ್ಞಾನ ಶಾಕುಂತಲ ನಾಟಕದ ಸಂಭಾಷಣೆಯ ಮೆರುಗು, ಖಚಿತವಾದ ಪಾತ್ರಶಿಲ್ಪ, ಸಡಿಲವಲ್ಲದ ವಸ್ತು ಸಂವಿಧಾನ, ಉದಾರವಾದ ಜೀವನದರ್ಶನ, ಮನುಷ್ಯನ ಒಳತುಡಿತಗಳ ಸೂಕ್ಷ್ಮಚಿತ್ರಣ ಇವೆಲ್ಲಾ ಈ ನಾಟಕವನ್ನು ಮೇಲ್ಮಟ್ಟಕ್ಕೇರಿಸುವ ಅಂಶಗಳನ್ನು ಈ ಅಧ್ಯಯನದಿಂದ ಗುರುತಿಸಬಹುದಾಗಿದೆ.

* ಪ್ರಸ್ತಾವನೆಯಲ್ಲಿ ಋತುಗಳನ್ನು ವರ್ಣಿಸುವ ಹಾಡುಗಳು ನಾಟಕದ ಮುಖ್ಯ ಘಟನೆಯನ್ನು ಸೂಕ್ಷ್ಮವಾಗಿ ಸೂಚಿಸುತ್ತವೆ. ಕವಿಯ ವಿನಯ, ರಸಿಕತೆ, ಗೀತರಚನಾಚಾತುರ್ಯ, ಪ್ರಸ್ತಾವನೆಯನ್ನು ಚುರುಕಾಗಿ ಮುಗಿಸುವ ನಾಟಕ ರಚನಾಕೌಶಲ್ಯ ಇಲ್ಲಿ ವ್ಯಕ್ತವಾಗಿರುವುದನ್ನು ಈ ಅಧ್ಯಯನದಿಂದ ತಿಳಿದುಬರುತ್ತದೆ.

* ಮಹಾಭಾರತದ ಶಕುಂತಲೋಪಾಖ್ಯಾನದಲ್ಲಿ ಬರುವ ಸಣ್ಣಕತೆಯ ದುಷ್ಯಂತನಿಗಿಂತ, ಕಾಳಿದಾಸ ರಚಿಸಿದ ದುಷ್ಯಂತ ಇಲ್ಲಿ ಧೀರೋದಾತ್ತ ಸ್ವಭಾವದ ಆದರೆ ಶಾಪದಿಂದ ಪ್ರಮಾದವನ್ನು ಮಾಡುವ ನಿರಪರಾಧಿಯಾಗಿದ್ದಾನೆ ಎಂಬುದನ್ನು ಸೂಕ್ಷ್ಮವಾಗಿ ಈ ಅಧ್ಯಯನದಿಂದ ಗ್ರಹಿಸಬಹುದು.

* ಸಣ್ಣಕತೆಯಲ್ಲಿ ಚಿತ್ರಿಸಿರುವ ಶಕುಂತಲೆಗೂ ನಾಟಕದಲ್ಲಿ ಬರುವ ಶಕುಂತಲೆಗೂ ಸ್ವಲ್ಪ ವ್ಯತ್ಯಾಸಗಳು ಕಂಡುಬಂದರೂ ಸಹ ಒಂದಕ್ಕೊಂದು ಅವಲಂಬನೆಯನ್ನು ನೋಡಬಹುದು. ಶಕುಂತಲೆ ಮಧುರ ಮುಗ್ಧ ಆದರೆ ದೈವವಂಚಿತ ನಾಯಕಿಯಾಗಿದ್ದಾಳೆ ಎಂಬುದನ್ನು ಅರಿಯಬಹುದಾಗಿದೆ.

* ಅಭಿಜ್ಞಾನ ಶಾಕುಂತಲ ನಾಟಕವು ಕನ್ನಡ ಸಾಹಿತ್ಯದಲ್ಲಿ ಹೇಗೆ ಯಾವ ಕಾಲಮಾನದಲ್ಲಿ ಅನುವಾದಕಾರ್ಯ ನಡಿದಿದೆ ಎಂಬುದನ್ನು ಪ್ರಸ್ತುತ ಅಧ್ಯಯನವು ಗುರುತಿಸುತ್ತದೆ.
* ಸಣ್ಣಕತೆಗಳು, ಕಾವ್ಯಗಳು, ಕಾದಂಬರಿ, ನಾಟಕ ಇವುಗಳಲ್ಲಿ ಶಾಕುಂತಲದ ಕಥಾವಸ್ತು ಹೇಗೆ ಹೊಂದಿಕೊಂಡಿದೆ ಎಂಬುದನ್ನು ಈ ಅಧ್ಯಯನದಿಂದ ತಿಳಿಯಪಡಿಸಿದ್ದೇನೆ.
* ಪ್ರಭಾವದಿಂದ ಬಂದಂತ ಕೃತಿಗಳನ್ನು ಶಾಕುಂತಲಾ ನಾಟಕದ ಕಥಾವಸ್ತುಗಳನ್ನು ಹೇಗೆ ಪರಿವರ್ತಿಸಿಕೊಂಡಿದ್ದಾರೆ ಎಂಬುದನ್ನು ಉದಾಹರಣೆಗಳ ಮೂಲಕ ವಿವರಿಸಲಾಗಿದೆ.
* ಅಭಿಜ್ಞಾನ ಶಾಕುಂತಲ ನಾಟಕದಲ್ಲಿ ಸಂಭೋಗ-ವಿಪ್ರಲಂಭ ಶೃಂಗಾರಗಳ ಸುಂದರ ಚಿತ್ರಣವಿದೆ. ದಾಂಪತ್ಯ ಜೀವನ, ತಪ್ಪುತಿಳುವಳಿಕೆಯ ಚಿರಂತನ ಸಮಸ್ಯೆಯ ಮಾರ್ಮಿಕ ಆವಿಷ್ಕಾರವಿದೆ ಎಂಬುದನ್ನು ಪ್ರಮುಖವಾಗಿ ಈ ಅಧ್ಯಯನದಲ್ಲಿ ಗಮನಿಸಲಾಗಿದೆ.
* ಈ ನಾಟಕದಲ್ಲಿ ಬಂದಿರುವ ಸುಖ-ದುಃಖಗಳ ಚಿತ್ರಣವು ಕನ್ನಡ ಭಾಷೆಯಲ್ಲಿ ಹೇಗೆಲ್ಲ ಮಂಡನೆಯಾಗಿದೆ ಎಂಬುದನ್ನು ಓದುಗರಿಗೆ ಹಿತವಾಗುವಂತೆ ಇಂದಿಗೂ ಜನಸಾಮಾನ್ಯರಿಗೆ ತಿಳಿಯುವಂತೆ ಇದರ ಅಧ್ಯಯನ ವಾಗಿರುವುದನ್ನು ಗುರುತಿಸಲಾಗಿದೆ.

# ಆಕರ ಗ್ರಂಥಗಳು


೧. ಅಣ್ಣಯ್ಯಗೌಡ ಎ.ಎಚ್., ೧೯೭೮, ಪ್ರಾಚೀನ ಭಾರತೀಯ ನಾಟಕ, ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿ.ವಿ. ಮೈಸೂರು, ಪ್ರ.ಸಂ. ಹಾ.ಮಾ.ನಾಯಕ.

೨. ಅನಂತರಂಗಾಚಾರ್.ಎನ್.ಎಸ್. 'ಶಕುಂತಲ ಮತ್ತು ದಮಯಂತಿ' ಐಬಿಎಚ್.ಪ್ರಕಾಶನ, ಬೆಂಗಳೂರು, ೧೯೭೦.

೩. ಅನಂತರಂಗಾಚಾರ್ 'ಕಾಳಿದಾಸನದರ್ಶನ' ಜೀವನ, ಬೆಂಗಳೂರು.

೪. ಅನಂತರಂಗಾಚಾರ್.ಎನ್. 'ಶಾಕುಂತಲ–ಒಂದು ನಾಟಕ ರತ್ನ' ಪ್ರಬುದ್ಧ ಕರ್ನಾಟಕ, ಮೈಸೂರು.

೫. ಅನಂತರಂಗಚಾರ್.ಎನ್. 'ಕಾಳಿದಾಸನ ಪ್ರಕೃತಿ ವರ್ಣನಾ ವೈಖರಿ' ಜೀವನ–೨೨–೧೦, ಬೆಂಗಳೂರು.

೬. ಆದ್ಯರಂಗಾಚಾರ್ಯ(ಶ್ರೀರಂಗ) 'ಕಾಳಿದಾಸ ಕೃತಿ ವಿಮರ್ಶೆ ಚಿಕ್ಕ ಹೊತ್ತಿಗೆ' ೧೯೬೦, ಶ್ರೀರಂಗ ಸಾರಸ್ವತ ಪ್ರಕಾಶನ, ಬೆಂಗಳೂರು.

೭. ಆದ್ಯರಂಗಾಚಾರ್ಯ(ಶ್ರೀರಂಗ) 'ಕಾಳಿದಾಸ ವಿಸ್ತೃತ ಆವೃತ್ತಿ' ೧೯೭೦, ಉಷಾಸಾಹಿತ್ಯಮಾಲೆ, ಮೈಸೂರು.

೮. ಇಂದಿರಾ.ಜಾ.ನ. 'ಶಕುಂತಲಾ'(ಗೀತರೂಪಕ), ಉಲ್ಲೇಖ: ಜಯಂತಿ ೧೧–೫.

೯. ಇನಾಂದಾರ್ ವಿ.ಎಂ., ಸಂ. ೧೯೪೨, ಕಾಳಿದಾಸ ಮತ್ತು ಚಿತ್ರಕಲೆ.

೧೦. ಇನಾಂದಾರ್ ವಿ.ಎಂ., ೧೯೯೫, ಕಾಳಿದಾಸನ ಕಥಾನಕಗಳು, ಆರ್.ಜಿ. ಹುಕ್ಕೇರಿ, ಅಕ್ಷಯ ಪ್ರೆಸ್, ಧಾರವಾಡ.

೧೧. ಈಶ್ವರಯ್ಯ, ಬಜಕೂಡ್ಲು 'ಶಕುಂತಲಾ'(ಸಂಕ್ಷಿಪ್ತ ನಾಟಕ), ಕೆ.ವಿ.ಶೈಣಿ, ಒಂದಾಣಿನೂಲೆ ೧೬೩, ಮಂಗಳೂರು, ೧೯೫೭.

೧೨. ಕವಲಿ ಚೆ.ಎ., ೧೯೬೯, ಅಭಿಜ್ಞಾನ ಶಾಕುಂತಲ ನಾಟಕಂ(ಗದ್ಯಾನುವಾದ), ಎಲ್.ಆಯ್. ಆಕಳವಾಡಿ, ರಾಮಾಶ್ರಯ ಬುಕ್ ಡಿಪೋ, ಧಾರವಾಡ.

೧೩. ಕನ್ನಡ ಅಧ್ಯಯನ, ಮಳೆ ಸಂಚಿಕೆ, ರಹಮತ್ ತರೀಕೆರೆ. ಸಂ. ೧೯೯೯, ಲೇಖನ, ಪ್ರಹ್ಲಾದ ಮುದಗಲ್ಲರ ಎರಡು ಶಕುಂತಲಗಳು: ಒಂದು ಪ್ರತಿಕ್ರಿಯೆ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ.

೧೪. ಕುಂದರಗಿ ಪ್ರೊ.ಜಿ.ಎನ್., ೧೯೮೨, ಧರ್ಮ ಮತ್ತು ಸಾಹಿತ್ಯ, ಸಾಹಿತ್ಯ ಭಂಡಾರ, ಹುಬ್ಬಳ್ಳಿ

೧೫. ಕುಮಾರಚಲ್ಯ, ಬಸವಪ್ಪಶಾಸ್ತ್ರಿ, ೨೦೧೪, ಸಾಹಿತ್ಯ ಅಕಾಡೆಮಿ. ಬೆಂಗಳೂರು.

೧೬. ಕುರುಡಿಕೇರಿ ಕಾಶಿನಾಥ ರಾಮಚಂದ್ರ, 'ದುಷ್ಯಂತ-ಶಕುಂತಲಾ' (ಕಾದಂಬರಿ), ಸರಸ್ವತಿ ಪ್ರಕಾಶನ, ಬೆಳಗಾವಿ, ೧೯೬೭.

೧೭. ಕುರ್ತುಕೋಟಿ.ಕೆ.ಡಿ. ಸಂಸ್ಕೃತ ಪಾಠ ೧೯೭೨, ಬೆಂಗಳೂರು ವಿಶ್ವವಿದ್ಯಾಲಯ, ಬೆಂಗಳೂರು.

೧೮. ಕುರ್ತುಕೋಟಿ 'ನಾಟಕ ಮತ್ತು ಸಂಕೇತ ಕ್ರಿಯೆ', ಕಾಳಿದಾಸನ 'ಅಭಿಜ್ಞಾನ ಶಾಕುಂತಲಂ' ಮನ್ವಂತರ, ಧಾರವಾಡ.

೧೯. ಕೃಷ್ಣಕುಮಾರ್.ಸಿ.ಪಿ. 'ಕಾಳಿದಾಸನು ಚಿತ್ರಿಸಿರುವ ಸ್ತ್ರೀಯರು ಮತ್ತು ಆದರ್ಶ' ೧೯೬೯, ಪ್ರಬುದ್ಧ ಕರ್ನಾಟಕ, ಮೈಸೂರು.

೨೦. ಕೃಷ್ಣಮೂರ್ತಿ ಟಿ.ಎಸ್., ೧೯೬೨, ಕಾಳಿದಾಸೀಯ ಉಪಮಾ ಸಾಮ್ರಾಜ್ಯಮ್.

೨೧. ಕೃಷ್ಣಮೂರ್ತಿ ಕೆ., ೧೯೬೯, ಕನ್ನಡ ಶಾಕುಂತಲ, ಶಾರದಾ ಮಂದಿರ, ಮೈಸೂರು.

೨೨. ಕೃಷ್ಣಮೂರ್ತಿ ಕೆ., ಅಭಿಜ್ಞಾನ, ಅಭಿನಂದನ ಗ್ರಂಥ, ೧೯೯೫, ಕೃಷ್ಣಮೂರ್ತಿ ಅಭಿನಂದನ ಸಮಿತಿ, ಮೈಸೂರು-೪.

೨೩. ಕೃಷ್ಣಮೂರ್ತಿ ಕೆ., ೨೦೦೦, ಕಾಳಿದಾಸನ ನಾಟಕಗಳ ಒಂದು ಅವಲೋಕನ, ಸುನಿತ ಎಂಟರ್ ಪ್ರೈಸಸ್, ಇಂದಿರಾನಗರ, ಬೆಂಗಳೂರು.

೨೪. ಕುವೆಂಪು 'ಕಾವ್ಯ ವಿಮರ್ಶೆಯಲ್ಲಿ ಪೂರ್ಣದೃಷ್ಟಿ' ೧೯೫೦-೧೯೬೬, ತಪೋನಂದನ, ಪು.೧೧೯-೧೪೦ ಉದಯ ರವಿ ಪ್ರಕಾಶನ, ಮೈಸೂರು.

೨೫. ಕೃಷ್ಣಪ್ಪ ಬಿ., ೧೯೨೧, ೧೯೨೨, ಶಾಕುಂತಲ ನಾಟಕದ ವಿಮರ್ಶೆ.

೨೬. ಕೃಷ್ಣಪ್ಪ ಬಿ., ೧೯೨೨, ಅಭಿಜ್ಞಾನ ಶಾಕುಂತಲ ನಾಟಕ, ಜಿ.ಟಿ.ಎ. ಮುದ್ರಣಾಲಯ, ಮೈಸೂರು.

೨೭. ಕೃಷ್ಣಕುಮಾರ್.ಸಿ.ಪಿ 'ಕಾಳಿದಾಸ ಕಂಡ ಋತು ವೈಭವ' ೧೯೬೬, ಕಾವ್ಯಾರಾಧನ, ಭಾರತೀಯ ಪ್ರಕಾಶನ, ಮೈಸೂರು.

೨೮. ಕೃಷ್ಣಶಾಸ್ತ್ರೀ, ಎ.ಆರ್. 'ಕಾಳಿದಾಸ' ೧೯೩೭, ಸಂಸ್ಕೃತ ನಾಟಕ ಮೈಸೂರು ವಿಶ್ವವಿದ್ಯಾಲಯ, ಮೈಸೂರು.

೨೯. ಖಾನೋಳಕರ ಶ್ರೀಧರರಾಯ 'ಕಾವ್ಯೇಷು ನಾಟಕಂ ರಮ್ಯಂ' ಜಯಕರ್ನಾಟಕ, ಧಾರವಾಡ.

೩೦. ಗಣಪತಿ ಮೊಳೆಯಾರ, ೧೯೭೩, ಅಭಿಜ್ಞಾನ ಶಾಕುಂತಳ, ಯುಂ.ಜಿ ಭಟ್ಟ, ವಿಟ್ಲ, ದ.ಕ.

೩೧. ಗಾಯಿ.ಜಿ.ಎಸ್. 'ಕಾಳಿದಾಸ' ೧೯೮೧, ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು.

೩೨. ಗುರುನಾಥ ವೆಂಕಟೇಶ ಕಿತ್ತೂರು, ೧೯೧೨, ಕಾಳಿದಾಸನ ಚರಿತ್ರೆ, ಕರ್ನಾಟಕ ವಿದ್ಯಾವರ್ಧಕ ಸಂಘ, ಧಾರವಾಡ.

೩೩. ಗುರುನಾಥ ವೆಂಕಟೇಶ ಕಿತ್ತೂರು, ಕಾಳಿದಾಸ ಚರಿತ್ರ ೧೯೮೫, ಕರ್ನಾಟಕ ವಿದ್ಯಾವರ್ಧಕ ಶರ್ಮ, ಬೆಂಗಳೂರು.

೩೪. ಗುರುಲಿಂಗ ಕಾಪಸೆ(ಸಂ), ೨೦೦೬, ಮಧುರಚೆನ್ನರ ಲೇಖನಗಳು, ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ಬೆಂಗಳೂರು.

೩೫. ಚುರಮುರಿ ಶೇಷಗಿರಿರಾಯ ೧೯೭೮, ಅಭಿಜ್ಞಾನ ಶಾಕುಂಲತ ನಾಟಕ, ಎಜ್ಯುಕೇಶನ್ ಸೊಸೈಟಿ ಮುದ್ರಣಾಲಯ, ಮುಂಬಯಿ.

೩೬. ಡಿ.ವಿ.ಜಿ., ೧೯೬೯, ಗೀತಶಾಕುಂತಲ, ಕಾವ್ಯಾಲಯ ಪ್ರಕಾಶನ, ಮೈಸೂರು.

೩೭. ಡಿ.ವಿ.ಜಿ., ೧೯೮೭, ಕಾವ್ಯ ಕುಸುಮಾಂಜಲಿ, ಗೋಖಲೆ ಸಾರ್ವಜನಿಕ ವಿಚಾರ ಸಂಸ್ಥೆ, ಬೆಂಗಳೂರು-೧೯.

೩೮. ತಾರಕೇಶ್ವರ್ ವಿ.ಬಿ., ವಸಾಹತುಶಾಹಿ ಮತ್ತು ಭಾಷಾಂತರ, ೨೦೦೬, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೩೯. ತಿಪ್ಪೇಸ್ವಾಮಿ, ಪ್ರ.ಸಂ. ೧೯೯೩, 'ಚಿತ್ರಕಲಾ ಪ್ರಪಂಚ' ಕರ್ನಾಟಕ ಲಲಿತಕಲಾ ಅಕಾಡೆಮಿ ಬೆಂಗಳೂರು.

೪೦. ತೀ.ನಂ.ಶ್ರೀ., ಸಮಗ್ರ ಗದ್ಯ, ೨೦೦೬, ಕನ್ನಡ ಪುಸ್ತಕ ಪ್ರಾಧಿಕಾರ, ಬೆಂಗಳೂರು.

೪೧. ದೇವುಡು 'ಶಾಕುಂತಲ' ಮಕ್ಕಳ ಪುಸ್ತಕ ಕಾರ್ಯಲಯ, ಬೆಂಗಳೂರು, ೧೯೩೪.

೪೨. ದೇವುಡು 'ಕಾಳಿದಾಸ ವಿಮರ್ಶೆ' ೧೯೫೨, ಆನಂದ ಬ್ರದರ್ಸ್, ಬೆಂಗಳೂರು.

೪೩. ದೇವುಡು ನರಸಿಂಹಶಾಸ್ತ್ರಿ 'ಕಾಳಿದಾಸನ ಸಂದೇಶ' ಸುಬೋಧ ೧೦-೪, ಧಾರವಾಡ.

೪೪. ದೇಶ್‌ಪಾಂಡೆ.ಜೆ.ಎಚ್. 'ದುರ್ವಾಸ ಶಾಪ-ಶಾಕುಂತಲ ನಾಟಕದ ಸಂದರ್ಭ' ೧೯೬೬, ಉತ್ಥಾನ ಪ್ರಕಾಶನ, ಬೆಂಗಳೂರು.

೪೫. ದೊರೆಸ್ವಾಮಿ ಅಯ್ಯಂಗಾರ್, ಶಾಕುಂತಲದ ತತ್ವಾರ್ಥ, ಜಯಕರ್ನಾಟಕ, ಧಾರವಾಡ.

೪೬. ನರಸಿಂಹಾಚಾರ್ ಪು.ತಿ.(ಅನು) ೧೯೬೮, 'ಸಮಕಾಲೀನ ಭಾರತೀಯ ಸಾಹಿತ್ಯ' ಲೇಖನ ಮಾಲೆ, ಸಾಹಿತ್ಯ ಅಕಾಡೆಮಿ, ಹೊಸದೆಹಲಿ.

೪೭. ನಂಜಂಡಾರಾಧ್ಯ ಎಂ.ಜಿ., ಅಭಿನವ ಕಾಳಿದಾಸ ಬಸವಪ್ಪಶಾಸ್ತ್ರಿ, ೧೯೭೧, ಐ.ಬಿ.ಎಚ್. ಪ್ರಕಾಶನ, ಬೆಂಗಳೂರು.

೪೮. ನರಸಿಂಹಯ್ಯ.ಎ.ಎನ್. ಶಾಕುಂತಲ ನಾಟಕದಲ್ಲಿ ಬರುವ ಪಕ್ಷಿಗಳು, ಪ್ರಬುದ್ಧ ಕರ್ನಾಟಕ, ಬೆಂಗಳೂರು.

೪೯. ನರಸಿಂಹಚಾರ್ಯ.ಪು.ತಿ.ಸ. 'ಕಾಳಿದಾಸನ ಸಂದೇಶ' ೧೯೬೭, ಉಪಾಯನ ಗ್ರಂಥ ಪ್ರಕಾಶನ ಸಮಿತಿ, ಮೈಸೂರು.

೫೦. ನರಸಿಂಹಚಾರ್ಯ.ಎನ್. 'ಕಾಳಿದಾಸನ ಹಾಸ್ಯರಸ' ರಂಗಭೂಮಿ ೮-೧, ಧಾರವಾಡ.

೫೧. ನಾರಾಯಣ ಕೆ.ವಿ.(ಸಂ), ೧೯೮೦, ವಿಮರ್ಶೆಯ ದಾರಿ-೨, ಬೆಂಗಳೂರು ವಿಶ್ವವಿದ್ಯಾಲಯ, ಬೆಂಗಳೂರು.

೫೨. ನೀರ್ಪಾಜೆ ಭೀಮಭಟ್ಟ, ೧೯೮೬, ಕಾಳಿದಾಸ ಸಮೀಕ್ಷೆ, ಅಭ್ಯುದಯ ಪ್ರಕಾಶನ, ದಕ್ಷಿಣ ಕನ್ನಡ.

೫೩. ಪರಮೇಶ್ವರ ಭಟ್ಟ ಎಸ್.ವಿ., ೧೯೮೩, ಕನ್ನಡ ಅಭಿಜ್ಞಾನ ಶಾಕುಂತಳ, ಶಾರದಾ ಮಂದಿರ, ರಾಮಯ್ಯರ್ ರಸ್ತೆ, ಮೈಸೂರು-೪.

೫೪. ಪರಮೇಶ್ವರ ಭಟ್ಟ.ಎಸ್.ವಿ. ಶಾಕುಂತಲದಲ್ಲಿ ಉಂಗುರು ಪ್ರತಿಮೆ, ಪ್ರಬುದ್ಧ ಕರ್ನಾಟಕ, ಬೆಂಗಳೂರು. ೧೬೩-೧೯೨

೫೫. ಪದ್ಮನಾಭ ಸಗ್ರಿ ನಾಯಕ, 'ಶಕುಂತಲಾ'(ಬಾಲಸಾಹಿತ್ಯ), ಪರಾಗ ಪ್ರಕಟಣಾಲಯ, ಉಡುಪಿ, ೧೯೬೭.

೫೬. ಪಾರ್ವತಿ.ಎಚ್.ಎಸ್. 'ವ್ಯಾಸ ಮತ್ತು ಕಾಳಿದಾಸನ ಶಕುಂತಲೆ' ೧೯೮೪, ಚಿಂತನ-ಮಂಥನ, ಮನಸೋಲ್ಲಾಸ ಪ್ರಕಾಶನ, ಬೆಂಗಳೂರು.

೫೭. ಪಾಂಡುರಂಗಿ ಕೆ.ಟಿ., ೧೯೭೮, ಅಭಿಜ್ಞಾನ ಶಾಕುಂತಲಂ, ಪಠ್ಯಪುಸ್ತಕ ಮಾಲೆ, ಪ್ರಸಾರಾಂಗ, ಬೆಂಗಳೂರು ವಿಶ್ವವಿದ್ಯಾಲಯ.

೫೮. ಪಾಂಡುರಂಗಿ ಕೆ.ಟಿ., ೧೯೫೭, ಸಂಸ್ಕೃತ ಕವಯಿತ್ರಿಯರು, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ.

೫೯. ಪಾಂಡುರಂಗಿ.ಕೆ.ಟಿ. ಶಕುಂತಲ, ಶಾಕುಂತಲ ೧೯೫೮, ಕಾವ್ಯಶಾಸ್ತ್ರವಿನೋದ, ಮಿಂಚಿನ ಬಳ್ಳಿ ಕಾರ್ಯಲಯ, ಧಾರಾವಾಡ.

೬೦. ಪಾಂಡುರಂಗಿ.ಕೆ.ಟಿ. ಶಕುಂತಲಯೆ ಕಥೆ ೧೯೫೮, ಕಾವ್ಯಶಾಸ್ತ್ರವಿನೋದ, ಮಿಂಚಿನ ಬಳ್ಳಿ ಕಾರ್ಯಲಯ, ಧಾರಾವಾಡ.

೬೧. ಪುಟ್ಟಮಾದಪ್ಪ.ವಿ. ಶಾಕುಂತಲ-ದುರಂತ ನಾಟಕವಾಗಲೇಬೇಕು. ಶರಣಸಾಹಿತ್ಯ, ೧೧-೧೨, ಬೆಂಗಳೂರು.

೬೨. ಪುಟ್ಟಪ್ಪ ಕೆ.ವಿ., ಪ್ರ.ಸಂ. ೧೯೯೫, ಎ.ಆರ್.ಕೃಷ್ಣಶಾಸ್ತ್ರಿ ಸಂಸ್ಕೃತ ನಾಟಕ, ಪ್ರಸಾರಂಗ, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು.

೬೩. ಪುಟ್ಟಪ್ಪ ಕೆ.ವಿ., ಪ್ರ.ಸಂ. ಲಕ್ಷ್ಮೀನರಸಿಂಹಯ್ಯ, ೧೯೯೫, ಕಾಳಿದಾಸ, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು.

೬೪. ಬಸವಪ್ಪಶಾಸ್ತ್ರೀ, ೧೮೮೩, ಕರ್ನಾಟಕ ಅಭಿಜ್ಞಾನ ಶಾಕುಂತಲ ನಾಟಕಂ, ಮೈಸೂರು ಆಸ್ಥಾನದ ವತಿಯಿಂದ, ಬೆಂಗಳೂರು.

೬೫. ಬನ್ನಂಜೆಗೋವಿಂದಾಚಾರ್ಯ 'ಅಭಿಜ್ಞಾನ ಶಾಕುಂತಲ : ಒಂದು ಸಮೀಕ್ಷೆ' ಸಂಕ್ರಮಣ ೨೮, ಧಾರವಾಡ.

೬೬. ಬಲರಾಮಗುಪ್ತ.ಜಿ.ಎಸ್. 'ಕಾಳಿದಾಸನ ಪ್ರಣಯ ಕಲ್ಪನೆ' ಶರಣಸಾಹಿತ್ಯ, ಬೆಂಗಳೂರು.

೬೭. ಬಲರಾಮಗುಪ್ತ.ಜಿ.ಎಸ್. 'ಕಾಳಿದಾಸನ ಭ್ರಮರ ಪ್ರಿಯತೆ' ಶರಣಸಾಹಿತ್ಯ, ಬೆಂಗಳೂರು.

೬೮. ಬಿ.ಎಂ.ಶ್ರೀ., ಬಸವಪ್ಪಶಾಸ್ತ್ರಿಗಳು ೧೯೯೪, ಬಿ.ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನ, ಬೆಂಗಳೂರು.

೬೯. ಬೇಂದ್ರೆ.ದ.ರಾ. 'ದುಷ್ಯಂತನ ಅಂತಃಕರಣ ಪ್ರವೃತ್ತಿ' ೧೯೭೪, ಸಮಾಜ ಪುಸ್ತಕಾಲಯ, ಧಾರವಾಡ.

೭೦. ಬೇಂದ್ರೆ.ದ.ರಾ. ಶಾಕುಂತಲದ ಕರುಣ.ರೌದ್ರ ೧೯೭೪, ಸಮಾಜ ಪುಸ್ತಕಾಲಯ, ಧಾರವಾಡ.

೭೧. ಬೆಳ್ಳಾವೆ ನರಹರಿಶಾಸ್ತ್ರೀ, ೧೯೨೬, ಟಿ.ಎನ್.ಕೃಷ್ಣಯ್ಯ ಸ್ವಾಮಿ ಶೆಟ್ಟಿ, ಕಳಾನಿಧಿ ಬುಕ್ ಡಿಪೋ, ಬೆಂಗಳೂರು.

೭೨. ಬೇಟೆರಾಯ ದೀಕ್ಷಿತ, ೧೮೯೦, ಶಾಕುಂತಲ ನಾಟಕ, ಮೈಸೂರು ಆಸ್ಥಾನದ ವತಿಯಿಂದ ಪ್ರಕಟಿತ.

೭೩. ಬೇಂದ್ರೆ ದ.ರಾ., ಕಾಳಿದಾಸನ ಶಾಕುಂತಲವನ್ನು ಕುರಿತು 'ನಾಂದಿಯ ನಂದದೀಪ' ೧೯೭೪, ಸಾಹಿತ್ಯ ವಿರಾಟ ಸ್ವರೂಪ, ಸಮಾಜ ಪುಸ್ತಕಾಲಯ, ಧಾರವಾಡ.

೭೪. ಭಟ್.ಕೆ.ಎನ್. ಶಿರಾಡಿಪಾಲ್, 'ದುಷ್ಯಂತ–ಶಕುಂತಲಾ ಸಂವಾದ'(ಶೃಂಗಾರ ವಾಹಿನಿ), ಯುಗಪುರುಷ ಪ್ರಕಟಣಾಲಯ, ಕಿನ್ನಿಗೋಳಿ.ದ.ಕ., ೧೯೬೪.

೭೫. ಮಂಗಳಾ ಚಿ.ನ.(ಸಂ). ಕಾಳಿದಾಸನ ಸಾಹಿತ್ಯ ಸಮೀಕ್ಷೆ, ರಾಷ್ಟ್ರೀಯ ವಿದ್ಯಾಲಯ ಸಂಸ್ಕೃತ ಅಧ್ಯಯನ ಸಂಸ್ಥೆ, ಬೆಂಗಳೂರು.

೭೬. ಮಲ್ಲಿಕಾರ್ಜುನ ಶಿವಲಿಂಗಪ್ಪ ರೈನಾಪುರ, ೧೯೩೩, ಅಭಿಜ್ಞಾನ ಶಾಕುಂತಲ.

೭೭. ಮಹಾದೇವನಾ ಜೋಗಿ, ೨೦೦೨, ಸಂಸ್ಕೃತ ಸಾಹಿತ್ಯ ಪರಿಚಯ, ರೂಪ ಪ್ರಕಾಶನ, ಧಾರವಾಡ.

೭೮. ಮಹಾದೇವಯ್ಯ ಜಿ.ಎಸ್., ೨೦೦೧, ಸಂಸ್ಕೃತ ಕಾವ್ಯಗಳಲ್ಲಿ ನಾಟಕೀಯತೆ, ಪ್ರಸಾರಾಂಗ, ಕುವೆಂಪು ವಿಶ್ವವಿದ್ಯಾನಿಲಯ, ಶಂಕರಘಟ್ಟ.

೭೯. ಮಹಾದೇವಪ್ಪ.ಸಿ. 'ಶಾಕುಂತಲ ನಾಟಕದಲ್ಲಿ ಭ್ರಮರ' ಶರಣಸಾಹಿತ್ಯ ೧೪–೬, ಬೆಂಗಳೂರು.

೮೦. ಮಹೇಶ್ವರಪ್ಪ 'ಕಾಳಿದಾಸನು ಶಕುಂತಲೆಯನ್ನು ಚಿತ್ರಿಸಿರುವ ರೀತಿ' ೧೯೬೮, ದೇವಗಂಗೆ. ಸ್ಮಾರಕ ಗ್ರಂಥ ಮಾಲೆ, ಬೆಂಗಳೂರು.

೮೧. ಮಾಸ್ತಿ ವೆಂಕಟೇಶ ಅಯ್ಯಂಗಾರ್, ಪ್ರ.ಸಂ. ೧೯೬೨, ರವೀಂದ್ರರ ಪ್ರಶಸ್ತಿ, ಸಾಹಿತ್ಯ ಅಭಿವೃದ್ಧಿ ಶಾಖೆ, ಬೆಂಗಳೂರು.

೮೨. ಮುಮ್ಮಡಿ ಕೃಷ್ಣರಾಜ ಕಂಠೀರವ, ೧೯೦೪, ಶಾಕುಂತಲ ನಾಟಕ ನವೀನ ಟೀಕೆ ಅಥವಾ ಶಾಕುಂತಲ ವ್ಯಾಖ್ಯಾನ, ಕರ್ನಾಟಕ ಕಾವ್ಯ ಕಲಾನಿಧಿ ಕೋಶ ಸಂಖ್ಯೆ ೪೩, ಮೈಸೂರು.

೮೩. ಮುದ್ದೇಗೌಡ ಸಿ., 'ಶಕುಂತಲಾ–ದುಷ್ಯಂತ ಮಣಿದರ್ಪಣ'(ಸರಳ ರಗಳೆ), ಜ್ಞಾನಕಿರಣ ಪ್ರಕಾಶನ, ಹಲಗೂರು(ಮಳವಳ್ಳಿ), ೧೯೭೦.

೮೪. ಮೂರ್ತಿರಾವ್ ಎ.ಎನ್., ಮಾಸ್ತಿಯರವರ ಕಥೆಗಳು, ೧೯೯೯, ಕಾವ್ಯಾಲಯ ಪ್ರಕಾಶನ, ಮೈಸೂರು.

೮೫. ಮೂರ್ತಿರಾವ್.ಎ.ಎನ್. 'ಸೀತಾ ಪರಿತ್ಯಾಗ–ಕಾಳಿದಾಸನಲ್ಲಿ' ಪೂರ್ವಸೂರಿಗಳೊಡನೆ, ಬೆಂಗಳೂರು.

೮೬. ರಂಗಣ್ಣ ಎಸ್.ವಿ., ೨೦೦೧, ಕಾಳಿದಾಸನ ನಾಟಕಗಳ ವಿಮರ್ಶೆ, ಎಸ್.ಆರ್.ಶಿವರಾಮ್, ಅನಂತಶ್ರೀ ಪ್ರಕಾಶನ, ಬೆಂಗಳೂರು, ೫೬೦೦೮೫.

೮೭. ರಂಗಣ್ಣ ಎಸ್.ವಿ., ೧೯೪೮. 'ಕನ್ನಡಿಗರಿಗೆ ಒಳ್ಳೆಯ ಸಾಹಿತ್ಯ' ಕಾವ್ಯಾಲಯ ಪ್ರಕಾಶನ, ಮೈಸೂರು.

೮೮. ರಂಜಾಳ ರಾಮದೇವ ಶೆಣೈ, ೧೯೭೧, ಅಭಿಜ್ಞಾನ ಶಾಕುಂತಲ, ವಿಜಯ ಗ್ರಂಥ ಪ್ರಕಾಶನ, ಕುಂದಾಪುರ.

೮೯. ರಾಮಚಂದ್ರರಾವ್ ಎಸ್. ೧೯೮೧, ಕಾಳಿದಾಸನ ಕಾವ್ಯಗಳು, ಪ್ರಸಾರಾಂಗ, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು.

೯೦. ರಾಜಗೋಪಾಲಾಚಾರ್ಯ ಎಂ. ೧೯೯೮, ಸಂಸ್ಕೃತ ನಾಟಕಗಳ ತಂತ್ರ ಮತ್ತು ಪ್ರಯೋಗ, ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ, ಹಂಪಿ.

೯೧. ರಾಜಗೋಪಾಲಾಚಾರ್ಯ ಎಂ., ಸಂಸ್ಕೃತ ನಾಟಕಗಳ ತಂತ್ರ ಮತ್ತು ಪ್ರಯೋಗ, ೧೯೯೮, ಇಳಾಪ್ರಿಂಟರ್ಸ್, ಬೆಂಗಳೂರು.

೯೨. ರಾಜಗೋಪಾಲಾಚಾರ್ಯ, 'ಕಾಳಿದಾಸನ ಉಪಮೆಗಳು', ೧೯೬೭, ಶ್ರೀ ಪೂರ್ಣಪ್ರಜ್ಞ ಕಾಲೇಜು, ಪ್ರಕಾಶನ ಸಮಿತಿ, ಉಡುಪಿ.

೯೩. ರಾಮಭಟ್ಟ ಶ್ರೀ, ೧೯೯೫, ಕನ್ನಡ ಮಾರ್ಗಕಾವ್ಯದ ಮೇಲೆ ಕಾಳಿದಾಸನ ಪ್ರಭಾವ, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು.

೯೪. ರಾಜಗೋಪಾಲಚಾರ್ಯ.ಎಂ. 'ಶಾಕುಂತಲದಲ್ಲಿ ಅದೃಷ್ಟ' ೧೯೭೦, ಪ್ರಬಂಧ ಸೌರಭ ೧೧–೫೬, ಸುರುಚಿ ಪ್ರಕಾಶನ, ಮೈಸೂರು.

೯೫. ರಾಮಕೃಷ್ಣನ್ ಜಿ.ಎಸ್., ೧೯೭೭, ಸಂಸ್ಕೃತ ಪ್ರಚಾರಕ್ಕೆ ಕೆಲವು ರಚನಾತ್ಮಕ ಸಲಹೆಗಳು ಸುರಭಾರತೀ ಪ್ರಕಾಶನ, ಬೆಂಗಳೂರು.

೯೬. ರಾಮಸ್ವಾಮಿ ಎಸ್.ಆರ್., ೧೯೭೨, ಮಹಾಭಾರತದ ಬೆಳವಣಿಗೆ, ಕಾವ್ಯಾಲಯ ಪ್ರಕಾಶನ, ಮೈಸೂರು.

೯೭. ರಾಮಚಂದ್ರರಾವ್.ಎಸ್. 'ಕಾಳಿದಾಸನ ವಿದೂಷಕರು' ಪ್ರಬುದ್ಧ ಕರ್ನಾಟಕ, ಮೈಸೂರು.

೯೮. ಲೀಲಾ.ಎಸ್.ಆರ್. 'ಕಾಳಿದಾಸನ ನಾಟಕಗಳಲ್ಲಿ ಸ್ತ್ರೀ ಪಾತ್ರಗಳ ಒಂದು ವಿವೇಚನೆ' ೧೯೮೨, ಸೌರಭ ಪು.೫೭-೬೮, ಬೆಂಗಳೂರು.

೯೯. ಲೀಲಾ.ಎಸ್.ಆರ್. 'ಪ್ರಕೃತಿಯಲ್ಲಿ ಪಡಿಮೂಡಿದ ಮಾನವ ಪ್ರಕೃತಿ' ೧೯೮೨, ಸೌರಭ, ಬೆಂಗಳೂರು.

೧೦೦. ವಾಮನ ಭಟ್ಟ ಜೆ., ೧೯೩೫, ಶಕುಂತಲೆ(ಗದ್ಯಾನುವಾದ), ಅಖಿಲಸೇವಾ ಗ್ರಂಥಮಾಲೆ, ಮಂಗಳೂರು.

೧೦೧. ವಿವಿಧ ಲೇಖಕರು, ೧೯೭೩, 'ಭಾರತೀಯ ಸಾಹಿತ್ಯದಲ್ಲಿ ಇತ್ತೀಚಿನ ಒಲವುಗಳು' ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು.

೧೦೨. ವಿಷ್ಣುಜೋಶಿ, ಕಾಳಿದಾಸ ಸುಭಾಷಿತ ೨೦೦೩, ಸುಮಂತ ಪ್ರಕಾಶನ, ಉಡುಪಿ.

೧೦೩. ವಿಮಲ ಎನ್.ವಿ. 'ಸಂಸ್ಕೃತ ಸಾಹಿತ್ಯದಲ್ಲಿ ಋಷ್ಯಾಶ್ರಮ ವರ್ಣನೆ ಮತ್ತು ಜೀವನ ವೈಶಿಷ್ಟ್ಯ' ೧೯೭೨, ಕನ್ನಡ ಸಾಹಿತ್ಯ ಪರಿಷತ್, ಬೆಂಗಳೂರು.

೧೦೪. ವೆಂಕಟ ಸುಬ್ರಹ್ಮಣ್ಯ ಶರ್ಮ 'ಸ್ತ್ರೀ ಪಾತ್ರ ಸೃಷ್ಟಿಯಾ ಕಾಳಿದಾಸ' ರಂಗಭೂಮಿ ೧೦-೧೧, ಬೆಂಗಳೂರು.

೧೦೫. ವೆಂಕಟಚಾರ್ಯ.ಕೆ. 'ವಿಶ್ವಕವಿ ಕಾಳಿದಾಸ' ೧೯೭೪, ಸಾಹಿತ್ಯ, ಸಂಶೋಧನೆ, ಮಂಗಳ ಭಾರತಿ ಪ್ರಕಾಶನ, ಮೈಸೂರು.

೧೦೬. ವೆಂಕಟರಾಮಪ್ಪ.ಕೆ. 'ಶಕುಂತಲೆಯ ಕಥೆ' ಪ್ರಬುದ್ಧ ಕರ್ನಾಟಕ ೨೫, ಮೈಸೂರು.

೧೦೭. ವೆಂಕಟರಾಯಾಚಾರ್ಯ.ಕೆ. 'ಕಾಳಿದಾಸನ ಪ್ರಾಕೃತಿಕ ಉಪಮೆಗಳು' ಶರಣಸಾಹಿತ್ಯ, ಬೆಂಗಳೂರು.

೧೦೮. ವೆಂಕಟರಾಮಯ್ಯ ಸಿ.ಕೆ., ೧೯೬೬, ಕಾಳಿದಾಸ ಮಹಾಕವಿ, ಮೈಸೂರು ಸರ್ಕಾರದ ಸಾಹಿತ್ಯ ಸಂಸ್ಕೃತಿ, ಅಭಿವೃದ್ಧಿ ಶಾಖೆ, ಬೆಂಗಳೂರು.

೧೦೯. ವೈನತೇಯ 'ದುಷ್ಯಂತ ಸ್ಮೃತಿ' ಪ್ರಬುದ್ಧ ಕರ್ನಾಟಕ, ಮೈಸೂರು.

೧೧೦. ವೈಕುಂಠರಾಜು ಜಿ.ವಿ., ಕನ್ನಡ ರಂಗಭೂಮಿ, ೨೦೦೭, ಸನತ್ ಪ್ರಕಾಶನ, ಬೆಂಗಳೂರು.

೧೧೧. ಶಾಂತಕವಿ, ಶಾಕುಂತಲ.

೧೧೨. ಶಾಂತಕುಮಾರ ಕೆ.ಎನ್., (ಸಂ), ಮಯೂರ, ಜೂನ್-೨೦೧೦, ಸಂಚಿಕೆ-೬, ಅಕ್ಷರ ಕೆ.ವಿ. ಅವರ ಲೇಖನ, ಅಭಿಜ್ಞಾನವಿಲ್ಲದ ಶಾಕುಂತಲ.

೧೧೩. ಶಿವರಾಮಯ್ಯ ಬಿ.ಕೆ., ೧೯೮೬, ಅಲಂಕಾರಶಾಸ್ತ್ರ, ಪ್ರಸಾರಂಗ, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು.

೧೧೪. ಶಿವರಾಮಕಾರಂತ 'ಶಕುಂತಳೆ', ಐಬಿಎಚ್.ಪ್ರಕಾಶನ, ಅಮರ ಚಿತ್ರಕಲೆ, ಬೆಂಗಳೂರು, ೧೯೭೧-೧೯೭೭.

೧೧೫. ಶಿವರುದ್ರಪ್ಪಜಿ.ಎಸ್., ೧೯೬೫, ೧೯೯೯, ಸೌಂದರ್ಯ ಸಮೀಕ್ಷೆ, ಕಾಮಧೇನು ಪ್ರಕಾಶನ, ಬೆಂಗಳೂರು.

೧೧೬. ಶಿವರುದ್ರಪ್ಪ ಜಿ.ಎಸ್., ಸಂ. ೧೯೯೦, ಕನ್ನಡ ಸಾಹಿತ್ಯದಲ್ಲಿ ಕಾಳಿದಾಸ, ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು ೫೬೦೦೦೨.

೧೧೭. ಶಿವಾರೆಡ್ಡಿ ಕೆ.ಸಿ., ಕನ್ನಡದ ಹಾಡುಪಾಡು, ೨೦೦೩, ಅಧ್ಯಯನ ಮಂಡಲ, ಬೆಂಗಳೂರು.

೧೧೮. ಶಿವಾರೆಡ್ಡಿ ಕೆ.ಸಿ.(ಸಂ). ಸುಸಾನ್ ಬಾಸ್ಕೆಟ್, 'ತೌಲನಿಕ ಸಾಹಿತ್ಯ', ಕೆ.ಪಿ.ಪೂರ್ಣಚಂದ್ರ ತೇಜಸ್ವಿ ನೆನಪಿನ ಚಿಂತನಮಾಲೆ, ೨೦೦೮, ಅಧ್ಯಯನ ಮಂಡಲ, ಬೆಂಗಳೂರು.

೧೧೯. ಶಿವಕುಮಾರ ಸ್ವಾಮಿ ಎಂ., ೧೯೮೬, ಸಂಸ್ಕೃತ ಸಾಹಿತ್ಯ ಪರಂಪರೆ, ಭಾರವಿ ಪ್ರಕಾಶನ-ಬೆಂಗಳೂರು.

೧೨೦. ಶಿವಲಿಂಗ ಸ್ವಾಮಿ ಹುಕ್ಕೇರಿ ಮಠ, 'ಕಾಳಿದಾಸನ ಸಂದೇಶ' ಶರಣ ಸಾಹಿತ್ಯ, ಬೆಂಗಳೂರು.

೧೨೧. ಶಿವರಾಮ ಶಾಸ್ತ್ರೀ.ನಂ. 'ಕಾಳಿದಾಸನ ಸಂದೇಶ' ಪ್ರಬುದ್ಧ ಕರ್ನಾಟಕ, ಮೈಸೂರು.

೧೨೨. ಶಿವಮೂರ್ತಿ ಶಾಸ್ತ್ರೀ.ಬಿ. 'ಕಾಳಿದಾಸ ಮತ್ತು ಕರ್ನಾಟಕ, ಶರಣಸಾಹಿತ್ಯ, ಬೆಂಗಳೂರು.

೧೨೩. ಶ್ರೀನಿವಾಸನ್.ಕೆ. 'ಕಾಳಿದಾಸ ಮತ್ತು ಅಭಿನವ ಶಾಕುಂತಲ' ಪ್ರಬುದ್ಧ ಕರ್ನಾಟಕ, ಮೈಸೂರು.

೧೨೪. ಶ್ರೀಧರ.ಬಿ.ಎಚ್. 'ಕಾಳಿದಾಸ ಕಂಡ ಭಾರತ', ಕನ್ನಡ ನುಡಿ ೨೫-೪, ಬೆಂಗಳೂರು.

೧೨೫. ಶ್ರೀಕಂಠಯ್ಯ ತೀ.ನಂ., ೧೯೭೫, ಕಾವ್ಯ ಸಮೀಕ್ಷೆ, ಕಾವ್ಯಾಲಯ ಪ್ರಕಾಶನ, ಮೈಸೂರು.

೧೨೬. ಶ್ರೀನಿವಾಸ ತೀ.ಎಂ.ಎನ್. ಅಯ್ಯಂಗಾರ್, (ಸಂ). ಪ್ರೊ.ಎಸ್.ಕೆ. ರಾಮಚಂದ್ರನ್, ೧೯೮೬, ಸಂಸ್ಕೃತ ಕವಿಚರಿತೆ(ಪ್ರಥಮ ಸಂಪುಟ) ಪ್ರಕಾಶನ, ಬೆಂಗಳೂರು.

೧೨೭. ಶ್ರೀನಿವಾಸರಾವ್.ಯು. 'ನಾಟಕ ಕಥಾ ರತ್ನಮಾಲೆ'(ನಾಟಕ-ಗದ್ಯ), ವಿಚಾರ ದರ್ಪಣ ಮುದ್ರಾಕ್ಷರ ಶಾಲೆ, ಬೆಂಗಳೂರು, ೧೮೯೦-೧೯೦೦.

೧೨೮. ಶ್ರೀನಿವಾಸ ಹಾವನೂರು, ೨೦೦೦, ಹೊಸಗನ್ನಡದ ಅರುಣೋದಯ, ಕನ್ನಡ ಪುಸ್ತಕ ಪ್ರಾಧಿಕಾರ, ಬೆಂಗಳೂರು.

೧೨೯. ಶ್ರೀರಂಗ, ಕವಿಕುಲಗುರು ಕಾಳಿದಾಸ, ೨೦೦೭, ಅಭಿನವ ಪ್ರಕಾಶನ, ಬೆಂಗಳೂರು.

೧೩೦. ಶೇಷೋರಾಮಚಂದ್ರ ಚುರಮರಿ, ೧೯೩೮, ಕರ್ನಾಟಕ ಶಾಕುಂತಲ ನಾಟಕಂ, ಶ್ರೀ ವಿದ್ಯಾರಣ್ಯ ಗ್ರಂಥಮಾಲೆ, ಬೆಳಗಾವಿ.

೧೩೧. ಶೇಷಗಿರಿ ಜನಾರ್ದನ ಕೊಣ್ಣೂರು, ೧೮೯೪, ಕೊಡುತಂದ ಉಂಗುರ, ಕರ್ನಾಟಕ ಭಾಷಾ ಸೇವಕದಲ್ಲಿ ಪ್ರಕಟಿತ, ಗ್ರಾಮಾಧಿಕಾರ ಪ್ರೆಸ್, ವಿಜಾಪುರ.

೧೩೨. ಸರೋಜಿನಿ ಮಹಿಷಿ, ೧೯೯೮, ಸಾಹಿತ್ಯ ಮಂಥನ, ಸಾಧನ ಪ್ರೆಸ್, ಧಾರವಾಡ.

೧೩೩. ಸಿ.ಪಿ.ಕೆ., ೨೦೦೯, ಹತ್ತು ಸಂಸ್ಕೃತ ನಾಟಕಗಳು, ಶ್ರೀ ಲಲಿತಾ ಬುಕ್ ಬ್ಯೂರೊ, ಮೈಸೂರು-೨೪.

೧೩೪. ಸೀತಾರಾಮಯ್ಯ.ವಿ. 'ಅಭಿಜ್ಞಾನ ಶಾಕುಂತಲ ವಿಮರ್ಶೆ' ೧೯೫೧, ಉಷಾಸಾಹಿತ್ಯಮಾಲೆ, ಮೈಸೂರು.

೧೩೫. ಸೀತಾರಾಮಯ್ಯ, 'ಕಾಳಿದಾಸ ಒಂದು ಊಹೆ' ೧೯೭೯ ಸಾಹಿತ್ಯಾಲೋಕನ, ವಿಚಾರ ವಿಮರ್ಶೆ ಗೀತಾಬುಕ್ ಹೌಸ್, ಮೈಸೂರು.

೧೩೬. ಸೀತಾರಾಮಯ್ಯ.ವಿ. 'ಅಭಿಜ್ಞಾನ ಶಾಕುಂತಲ ನಾಟಕ ಪರಿಚಯ' ೧೯೪೩-೧೯೬೦, ಕರ್ನಾಟಕ ಸಂಘ-ಸೆಂಟ್ರಲ್ ಕಾಲೇಜ್, ಬೆಂಗಳೂರು.

೧೩೭. ಸುಜನಾ 'ಶಾಕುಂತಲ ನಾಟಕದಲ್ಲಿ ಉಂಗುರದ ಪ್ರತಿಮೆ' ಪ್ರಬುದ್ಧ ಕರ್ನಾಟಕ ೧೨-೭, ಧಾರವಾಡ.

೧೩೮. ಸುಂದರಂ.ಆರ್.ವಿ.ಎಸ್.ನಾರಾಯಣ ಸ್ವಾಮಿ 'ಕಾಳಿದಾಸನ ಶಾಕುಂತಲ ನಾಟಕದ ನಾಂದಿ' ಪ್ರಬುದ್ಧ ಕರ್ನಾಟಕ, ಮೈಸೂರು.

೧೩೯. ಸುಬ್ಬಣ್ಣ ಕೆ.ವಿ., ಅರೆಶತಮಾನದ ಅಲೆ ಬರಹಗಳು, ಸಮಗ್ರ ಲೇಖನ ಸಂಕಲನ, ೧೯೫೪-೨೦೦೫, ಟಿ.ಪಿ.ಅಶೋಕ, ಸಂ, ಅಕ್ಷರ ಪ್ರಕಾಶನ, ಹೆಗ್ಗೋಡು, ಸಾಗರ.

೧೪೦. ಸುಬ್ರಹ್ಮಣ್ಯ ಶಾಸ್ತ್ರೀ ವೇ., 'ಶಕುಂತಲಾ' (ಕವಿತೆ) ಪ್ರಬುದ್ಧ ಕರ್ನಾಟಕ ೨-೧, ಬೆಂಗಳೂರು.

೧೪೧. ಸೂಲಿಬೆಲೆ ಡಿ.ಶಾಮರಾಯ, ೧೯೦೦, ಕರ್ನಾಟಕ ಅಭಿಜ್ಞಾನ ಶಾಕುಂತಲ ನಾಟಕಂ, ಟಿ.ಎನ್.ಕೃಷ್ಣಯ್ಯಶೆಟ್ಟಿ ಬುಕ್ ಡಿಪೋ, ಬೆಂಗಳೂರು.

೧೪೨. ಸೋಸಲೆ ಕೃಷ್ಣಸ್ವಾಮಿ ಶಾಸ್ತ್ರೀ 'ಶಕುಂತಳೆಯ ಭಾವಚಿತ್ರ – ಅಭಿಜ್ಞಾನ ಶಾಕುಂತಲೆ ನಾಟಕದ ೬ನೇ ಅಂಕ' ರಂಗಭೂಮಿ, ಬೆಂಗಳೂರು.

೧೪೩. ಅಂತರ್ಜಾಲದಿಂದ ಅನೇಕ ಮಾಹಿತಿ ಮತ್ತು ಛಾಯಾಚಿತ್ರಗಳನ್ನು ಬಳಸಿಕೊಂಡಿರುತ್ತೇನೆ.

